


# National Accreditation Board for Hospitals and Health Care Providers (NABH)




## Accreditation Programme

# FOR WELLNESS CENTRES

**National Accreditation Board for Hospitals & Healthcare Providers (NABH),** a constituent board of Quality Council of India, is an autonomous body formed by Government of India for operating National Accreditation programmes for the progress of the health industry. NABH standards have been acclaimed both by the Indian health industry and approved by ISQua (International Society for Quality in Healthcare).

The NABH standards provide a framework for quality assurance and quality improvement for the organization. Focus areas are **Customer safety, Quality Care, Privileging and Crediting of staff, Infection Control, Patients/Customer rights and education and Evidence based and protocol driven practices**









### BENEFITS FOR ACCREDITATION

- Raises community confidence in the services provided by the organization.
- Increases visibility of the organization.
- Results in high quality of care and customer safety.
- Patients/Customer satisfaction is regularly evaluated.
- Streamlines the systems and processes of the organization.
- Staff are satisfied lot as it provides for continuous learning and good working environment.




NABH - MARK OF EXCELLENCE

**A powerful tool for customers for service differentiation among service providers.**

**Standards are designed in conjunction with Ministry of Tourism and Department of AYUSH, Ministry of Health & Family Welfare**

### WELLNESS CENTRES INCLUDE

- Spas
- Ayurveda Wellness Centres
- Yoga & Naturopathy Centres
- Gymnasiums
- Fitness Centres
- Cosmetic Care Centres
- Skin Care Centres
- Executive Health Check up Centres with associated advice

For more information please contact :
**Dr. Bhawna Gulati,** Assistant Director
**National Accreditation Board for Hospitals and Health Care Providers (NABH)**
**C/O QUALITY COUNCIL OF INDIA,**
Institution of Engineers Building, 2nd Floor, Bahadur Shah Zafar Marg, New Delhi- 110002, India
Tel: +91-11- 23379321, 23379260, 23370567, Web: www.qcin.org, E-mail: bhawna.nabh@qcin.org

# ಹೊಸತು

ನೆಮ್ಮದಿಯ ನಾಳೆ ನಮ್ಮದು

ಒಳಗೇನಿದೆ ...




**ಚಿತ್ರಗಳು :** ಸಂಕೇತ್, ಶ್ರೀಹರಿ, ರಾಂಚಂದ್ರ ಕೊಪ್ಪಲು
ಕಮಲಂ ಅರಸು, ಜಿ. ಎಂ. ಬೊಮ್ನಳ್ಳಿ, ಬಿ. ವಿ. ಹೀರೇಮಠ

**ಮುಖಚಿತ್ರ :** ಶ್ರೀಲಂಕಾ ತಮಿಳರ ಬವಣೆ (ಕೃಪೆ : ಅಂತರ್ಜಾಲ)

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಸ್ವಾತಂತ್ರ್ಯೋತ್ಸವವನ್ನು ಹರ್ಷದಿಂದ ನಿರಾತಂಕವಾಗಿ ಆಚರಿಸಿ ಎಷ್ಟು ಕಾಲ ಆಗಿಹೋಗಿದೆ! ಮನಮೋಹನ ಸಿಂಗ್ ದೆಹಲಿಯ ಕೆಂಪುಕೋಟೆಯ ಮೇಲೆ ನಿಂತು ದೇಶವನ್ನುದ್ದೇಶಿಸಿ ಮಾತನಾಡುವ ವೇಳೆಗೆ ಈ ವರ್ಷವೂ ಪೊಲೀಸ್ ಬಂದೋಬಸ್ತು ಯಥಾಪ್ರಕಾರ ಆದ್ಯತೆಯ ವಿಷಯವಾಗುತ್ತದೆ. ಈ ಪ್ರಧಾನಿಯ ನೀತಿಗಳು ದೇಶದ ಜನರಿಗೆ ಸ್ವಾತಂತ್ರ್ಯವನ್ನು ನಿಜಾರ್ಥದಲ್ಲಿ ನೀಡಲಾರವೆಂಬುದು ಇದ್ದೇ ಇದೆ; ಜೊತೆಗೆ ಔಪಚಾರಿಕವಾಗಿ ಸಮಾರಂಭ ನಡೆಸಲು ಸಹ ಮಹತ್ತರ ಅಡ್ಡಿಗಳು. ಜುಲೈನಲ್ಲಿ ಮುಂಬೈ ಪುನಃ ಮೂರು ಸ್ಫೋಟಗಳನ್ನು ಕಂಡಿತು, ಇಪ್ಪತ್ತು ಜನ ಸಾವಿಗೀಡಾದರು, ನೂರಾರು ಮಂದಿ ಗಾಯಗೊಂಡರು. ಹೀಗೆ ನೊಂದವರಿಗೆ ಸಾಂತ್ವನ ವ್ಯಕ್ತಪಡಿಸುವುದರೊಟ್ಟಿಗೆ ನಾವು ಮಾಡಬಹುದಾದ್ದು ಬಹಳ ಕಡಿಮೆ. ವ್ಯಥೆ ತೀವ್ರವಾಗಿದೆ, ಆದರೆ ಹತಾಶೆ ಆವರಿಸದಂತೆ ತಡೆಯುವುದು ಕಷ್ಟವಾಗುತ್ತಿದೆ. ಸ್ಫೋಟಗಳಿಂದ ವಿವಿಧ ಸಂಕಟಗಳಿಗೆ ಈಡಾದವರನ್ನು ಸಂತೈಸಲು ಮಾತುಗಳು ಸಾಲವು, ದೇಶದ ನೀತಿಗಳ ಮರುಪರಿಶೀಲನೆ ಅಗತ್ಯ. ಸಂತ್ರಸ್ತರೊಡನೆ 'ಹೊಸತು' ಸಮೀಕರಿಸಿಕೊಳ್ಳುತ್ತದೆ, ಅವರ ಕೋಪದಲ್ಲಿ ಸಹಭಾಗಿಯಾಗುತ್ತದೆ, ಸರ್ಕಾರವು ಪರಿಸ್ಥಿತಿಯನ್ನು ಸಮಗ್ರವಾಗಿ ವಿಶ್ಲೇಷಿಸಿಕೊಳ್ಳಬೇಕೆಂದು ಆಗ್ರಹಿಸುತ್ತದೆ. ನಮ್ಮಲ್ಲಿ ಉಗ್ರರು ಒಂದು ಪಂಥದವರಲ್ಲ, ಆದ್ದರಿಂದ ಅವರನ್ನು ಗುರುತಿಸಿ ಪತ್ತೆಹಚ್ಚುವುದು ಕಷ್ಟ. ಅವರು ಯಾರೇ ಆಗಿರಲಿ, ಪದೇ ಪದೇ ನಮ್ಮ ದೇಶವನ್ನೇಕೆ ಸ್ಫೋಟಗಳಿಗೆ ಗುರಿಮಾಡುತ್ತಾರೆ? ಅವರಿಗೆ ಹೃದಯವಿಲ್ಲ, ಅವರು ಭಯೋತ್ಪಾದಕರು, ಅವರನ್ನು ನಿಗ್ರಹಿಸಬೇಕು, ಎಲ್ಲಾ ಸರಿ. ಅನೇಕ ಕಾರಣಗಳ ಪೈಕಿ ಮೂರು ಚಿಂತನಾಯೋಗ್ಯ : (ಅ) ಆಂತರಿಕ ಮತೀಯ ದ್ವೇಷದ ವಾತಾವರಣ ಕನಿಷ್ಠ ಎರಡು ಮತೀಯ ಪಂಗಡಗಳಲ್ಲಿ ಉಗ್ರರನ್ನು ಸೃಷ್ಟಿಸಿದೆ; (ಆ) ಬಗೆಹರಿಯದ ಕಾಶ್ಮೀರ ಸಮಸ್ಯೆ, ಅದರಿಂದ ಉದ್ಭವಿಸಿರುವ ವಿಭಜನೆ, ಅಲ್ಲಿಯ ಮಾನವೀಯ ಹಕ್ಕುಗಳ ಉಲ್ಲಂಘನೆ, ಸೈನ್ಯದ ಕಾರ್ಯಾಚರಣೆ, ನಿರುದ್ಯೋಗದ ಹಾವಳಿ, ಇವೆಲ್ಲಾ ಒಟ್ಟಾಗಿ ಉಗ್ರರನ್ನು ಉತ್ಪಾದಿಸುತ್ತದೆ; (ಇ) ದೇಶಕ್ಕೆ ಮಾರಕವಾಗುವ ರೀತಿಯಲ್ಲಿ ಅಮೆರಿಕಾದೊಡನೆ ಅಸಹ್ಯವಾದ ಸಖ್ಯ ಬೆಳೆದಿದೆ, ಆ ದೇಶದ ನಾಯಕರು ಎಲ್ಲೆಂದರಲ್ಲಿ ನುಗ್ಗಿ ವಿವಿಧ ದೇಶಗಳ ಜನರನ್ನು ಕೊಲ್ಲುತ್ತಾರೆ, ಅದಕ್ಕೆ ಭಾರತದ ಸಹಮತವಿದೆ ಇಲ್ಲವೆ ವಿರೋಧದ ಅಭಾವವಿದೆ, ಅದರಿಂದಾಗಿ ವಿನಾಕಾರಣ ನಮ್ಮ ದೇಶವು ಹಲ್ಲೆಗೆ ತುತ್ತಾಗುತ್ತಿದೆ. ಅಮೆರಿಕಾವನ್ನು ನೇರವಾಗಿ ಎದುರಿಸಲಾರದವರು ಆ ದೇಶದ ಸಮರ್ಥಕರೆಂದು ಯಾರಾರನ್ನೋ ಗುರುತಿಸಿ ಅವರ ಮೇಲೆ ಧಾಳಿ ನಡೆಸುತ್ತಿದ್ದಾರೆ. ಇದು ಖಂಡನಾರ್ಹ ಮತ್ತು ನಿಗ್ರಹಾರ್ಹ. ಇತರರನ್ನು ಕೊಲ್ಲುವ ಪಾತಕಿಗಳ ಜೊತೆಯ ಬಾಂಧವ್ಯದಿಂದಾಗಿ ನಮ್ಮ ದೇಶದ ಜನರ ಮೇಲೆ ಆಗಾಗ್ಗೆ ಹಲ್ಲೆಗಳಾಗುತ್ತಿವೆಯೆಂಬುದು ನಿಜವಾದರೆ ಅಂತಹ ಬಾಂಧವ್ಯದ ತುರ್ತು ಪರಿಷ್ಕರಣೆಯ ಅಗತ್ಯವಿದೆ.

*  *  *

ಜುಲೈ ಮೊದಲ ವಾರದಲ್ಲಿ ನಡೆದ ನೇಟೋ ಕೂಟದ ಸಭೆಯಲ್ಲಿ ಇಟಲಿಯ ಪ್ರತಿನಿಧಿ ಹೇಳಿದನೆನ್ನಲಾದ ಕೆಲವು ಮಾತುಗಳು ವರದಿಯಾಗಿದ್ದವು. ಅದು ಅನಧಿಕೃತವೇನೋ ಹೌದು, ಆದರೆ ಅಸಾಧ್ಯವಲ್ಲ. ಲಿಬ್ಯ, ಆಫ್ಘಾನಿಸ್ತಾನಗಳಲ್ಲಿ ನೇಟೋ ನಡೆಸುತ್ತಿರುವ ಕಾರ್ಯಾಚರಣೆಯನ್ನು ಪ್ರಶ್ನಿಸಿ ಈತ ಅಸಮಾಧಾನ ವ್ಯಕ್ತಪಡಿಸಿದ. ಅಬಿಸೀನಿಯಾ (ಇಂದಿನ ಇಥಿಯೋಪಿಯ)ದಲ್ಲಿ ಅವನ ದೇಶ ಹಿಂದೆ ನಡೆಸಿದ್ದ ಘೋರಕೃತ್ಯಗಳು ಅವನ ನೆನಪಿಗೆ ಬಂದಿದ್ದಿರಬಹುದು. "ಲಿಬ್ಯ ಮುಂತಾದೆಡೆ ನಾವು ಜನರನ್ನು ಕೊಲ್ಲುತ್ತಿರುವುದೇಕೆ? ಯಾರಿಗಾಗಿ ಇದೆಲ್ಲ? ಇದನ್ನು ಸುಮ್ಮನೆ ನಿಲ್ಲಿಸಬಾರದೇಕೆ? ನಮ್ಮ ದೇಶವಂತೂ ಇದರಿಂದ ಹಿಂತೆಗೆಯಬೇಕೆಂಬ ಅಭಿಪ್ರಾಯ ಹೊಂದಿದೆ" ಎಂಬರ್ಥ ಬರುವ ಮಾತುಗಳನ್ನು ಇಟಲಿಯ ಪ್ರತಿನಿಧಿ ಹೇಳಿದನಂತೆ. ಅದು ನಿಜವಾದರೆ ನಿಜಕ್ಕೂ ಅದು ಸ್ವಾಗತಾರ್ಹ, ಅಭಿನಂದನೀಯ. ಅದನ್ನು ಕಾರ್ಯಗತಗೊಳಿಸಿದರೆ ಇಟಲಿಯು ಮಾನವೀಯ ಗುಣ ಪ್ರದರ್ಶಿಸಿದಂತಾಗುತ್ತದೆ.

*(೭ನೇ ಪುಟಕ್ಕೆ)*



ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೩ ಸಂಚಿಕೆ - ೧ ಆಗಸ್ಟ್ ೨೦೧೧

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http://navakarnataka.blogspot.com
http://hosathu.blogspot.com


ಸಂಪಾದಕೀಯ

# ನಮ್ಮ ಸ್ವಾತಂತ್ರ್ಯಕ್ಕೆ ಒದಗಿಬಂದಿರುವ ಸವಾಲುಗಳು

ಮತ್ತೊಂದು ಸ್ವತಂತ್ರ ದಿನಾಚರಣೆಯ ಅವಕಾಶ ಸಂದಿದೆ! ನಾವೆಲ್ಲ ಪರಸ್ಪರ ಶುಭಾಶಯಗಳನ್ನು ಹೇಳಿಕೊಳ್ಳೋಣ. ಪ್ರತಿ ವರ್ಷವೂ ಒಂದು ದಿನವಾದರೂ ನಾವು ಈ ಕುರಿತು ಸ್ವ-ವಿಮರ್ಶೆ ಮಾಡಿಕೊಳ್ಳುವುದು ಅಗತ್ಯ. ಕಾರಣ ನಾವು ನಡೆದುಬಂದ ಹಾದಿಯಲ್ಲಿ, ನಡೆಯುತ್ತಿರುವ ಹಾದಿಯಲ್ಲಿ ಈ ಸ್ವಾತಂತ್ರ್ಯ ಮೊಟಕಾಗುವ ಹಲವಾರು ಸಂದರ್ಭಗಳು ಬಂದುಹೋಗಿವೆ, ಬರುತ್ತಲೇ ಇವೆ. ಇದರ ಹಿಂದೆ ಹಲವಾರು ಕಾರಣಗಳಿವೆ. ಗಡಿಯಲ್ಲಿ ಘರ್ಷಣೆ ಸಾಂಪ್ರದಾಯಿಕ ರೀತಿಯ ಸವಾಲು; ಅಂತರರಾಷ್ಟ್ರೀಯ ಆರ್ಥಿಕ ಒತ್ತಡಗಳು ವಸಾಹತು ಕಾಲದ ಮಾದರಿಯವು. ಇಂದಿನ ಮುಚ್ಚು-ಮರೆಯವು. ಹಾಗಲ್ಲದೆ ಬಹಿರಂಗವಾದ ಸವಾಲುಗಳು, ಆಂತರಿಕ ಸವಾಲುಗಳು ಹಲವು: ರಾಜಕೀಯ, ಸಾಮಾಜಿಕ, ಪರಿಸರಕ್ಕೆ ಸಂಬಂಧಪಟ್ಟವು, ಮತಧರ್ಮೀಯ, ಭಾಷಿಕ, ಆರ್ಥಿಕ ಅಸಮಾನತೆ, ಅಸಮಾನ ಬೆಳವಣಿಗೆಯವು, ದಲಿತ, ಶ್ರಮಜೀವಿ ರೈತರ, ಅರಣ್ಯವಾಸಿಗಳ ಎತ್ತಂಗಡಿ, ಅಸಂಘಟಿತ ಕಾರ್ಮಿಕರ ಶೋಷಣೆ... ಹೀಗೆಲ್ಲಾ ಪಟ್ಟಿಮಾಡುತ್ತಾ ಹೋಗಬಹುದು. ಆಂತರಿಕ ಸವಾಲುಗಳನ್ನು ರಾಜಕೀಯವಾಗಿಯೂ, ಸಾಮಾಜಿಕವಾಗಿಯೂ, ಪರಿಹರಿಸಿಕೊಂಡಂತೆಲ್ಲ, ಜನತೆಯ ಸ್ವಾತಂತ್ರ್ಯದ ಅನುಭವ ವಿಕಾಸವಾಗುತ್ತಿದ್ದಂತೆ, ವಿದೇಶಿ ಹಾಗೂ ಗಡಿನಾಡಿನ ಸವಾಲುಗಳನ್ನು ಎದುರಿಸುವ ಸ್ವಂತ ಸಾಮರ್ಥ್ಯ ಕೂಡಿಬರುತ್ತದೆ. ಇದು ವಿವೇಕಯುತ ಮಾರ್ಗ. ಹಾಗಲ್ಲದೆ ವಿದೇಶಿ ಮತ್ತು ಗಡಿನಾಡ ಸಮಸ್ಯೆಗಳನ್ನು ಮುಂದೊಡ್ಡಿ ಆಂತರಿಕ ಒಗ್ಗಟ್ಟನ್ನು ಕಾಯ್ದುಕೊಳ್ಳಬೇಕು ಎನ್ನುವ ಮಾರ್ಗ, ಅದಕ್ಕಾಗಿ ವಿದೇಶೀ ನೆರವನ್ನು ಬಯಸುವ ಮಾರ್ಗ, ದೇಶದ ಒಟ್ಟಾರೆ ಸ್ವಾತಂತ್ರ್ಯವನ್ನು ಕಾಪಾಡಲು ಸಮರ್ಥವಾದ ಮಾರ್ಗವಲ್ಲ. ಹಾಗೆಯೇ ಸಮಸ್ಯೆಗಳನ್ನು ಪರಿಹರಿಸುವಲ್ಲಿ ವಿಫಲಗೊಂಡು, ಸ್ವಾತಂತ್ರ್ಯ ರಕ್ಷಿಸುವ ನೆಪದಲ್ಲಿ, ಅದನ್ನು ಕಿತ್ತುಕೊಳ್ಳುವ ತುರ್ತುಪರಿಸ್ಥಿತಿಯ ಸರ್ವಾಧಿಕಾರದ ಮಾರ್ಗ, ಈ ಸ್ವಾತಂತ್ರ್ಯ ರಕ್ಷಣೆಯನ್ನು ನಿರ್ವಹಿಸಲು ಅಸಮರ್ಥವೆಂದು ಈಗಾಗಲೇ ಮನಗಂಡಿದ್ದೇವೆ.

ದೇಶದಲ್ಲಿ ಅಸಂಘಟಿತ ಶ್ರಮಜೀವಿಗಳ ಸಂಖ್ಯೆ ಅಪಾರವಾದುದು. ಹೀಗಾಗಿ ದುಡಿಯುವ ಜನವಿಭಾಗಗಳ ಕನಿಷ್ಠ ಸಂಖ್ಯೆಯನ್ನು ಪ್ರತಿನಿಧಿಸುವ ಕಾರ್ಮಿಕ ಸಂಘಗಳನ್ನು ಅನುಸರಿಸಿ ಬೆಳೆದ ಎಡಪಂಥೀಯ ಚಳುವಳಿಗಳು ತಮ್ಮ ರಾಜಕೀಯದಲ್ಲಿ ವಿಫಲವಾಗಿವೆ. ಅಸಂಘಟಿತರನ್ನು ಸಂಘಟಿತರಾಗದಂತೆ ತಡೆಹಿಡಿಯುವುದು ಆಳುವ ವರ್ಗದ ಸ್ವಾರ್ಥ, ಪ್ರಗತಿಪರರ ಆಲಸ್ಯ. ದನಿ ಇಲ್ಲದವರಿಗೆ ದನಿ ನೀಡುವ ಹಂಬಲ ಸೂಸಿ ಮುಂದೆ ಬರದವರ ಸ್ವಾರ್ಥ ಅದು. ಅದೇ ಸಮಯದಲ್ಲಿ ದೇಶದ ಅಸಂಘಟಿತ, ಹಿಂದುಳಿದವರ, ಸಂಖ್ಯೆಯಲ್ಲಿ, ಅದರಲ್ಲೂ ಅಪಾರ ದಮನಿತ ಜನ, ಬಹುಜನ, ರಾಜಕೀಯವಾಗಿ ಸಂಘಟಿತರಾಗದಿದ್ದಲ್ಲಿ ನಾವು ಒಂದು ರಾಷ್ಟ್ರವಾಗಿ ನಮ್ಮ ಸ್ವಾತಂತ್ರ್ಯವನ್ನು ರಕ್ಷಿಸಿಕೊಳ್ಳುವಷ್ಟು ಸಮರ್ಥರಾಗುವುದು ಸಾಧ್ಯವಿಲ್ಲ. ಬರುವ ದಿನಗಳಲ್ಲಿ ಇವರನ್ನು ಸಂಘಟಿಸುವ ರಾಜಕೀಯಕ್ಕೆ ಆದ್ಯತೆ ನೀಡಬೇಕಿದೆ. ಅದು ನೇರವಾಗಿ ಸದ್ಯದ ಆಳುವ ವರ್ಗಕ್ಕೆ ಸವಾಲಾಗಿ, ಚರಿತ್ರಾರ್ಹವಾದ ಸಂಘರ್ಷಕ್ಕೆ ನಮ್ಮನ್ನು ಕೊಂಡೊಯ್ಯುತ್ತದೆ. ಮತ್ತೊಂದು ಬಹುಮುಖ್ಯ ಸಮಸ್ಯೆ ಪರಿಸರಕ್ಕೆ ಸಂಬಂಧಪಟ್ಟಿದ್ದು. ನಮಗಿರುವ ನೆಲ, ನೆಲದೊಳಗಿನ ಸಂಪತ್ತು, ಅರಣ್ಯ ಸಂಪತ್ತು, ನೀರು ಇವು ಎಂದೆಂದಿಗೂ ಈಗಿರುವಷ್ಟಕ್ಕೆ ಮಾತ್ರ ಸೀಮಿತ. ಇವುಗಳನ್ನು ರೂಢಿಸಿಕೊಂಡು, ಉಳಿಸಿಕೊಂಡು ಮುಂದುವರಿಯುವ, ಬೆಳವಣಿಗೆಯ ಮಾರ್ಗದಲ್ಲಿ ನಮ್ಮ ಅಭಿವೃದ್ಧಿ ಕಾರ್ಯಕ್ರಮಗಳು, ಬಡತನ ನಿರ್ಮೂಲನೆ, ಯೋಜನೆಗಳು ಜರುಗಬೇಕು. ಭಾರತದಲ್ಲಿ ಕುಡಿಯುವ ನೀರೇ ಸಾಕಷ್ಟು ಸಿಗದೆ, ಅದೊಂದು ಬಹು ದೊಡ್ಡ ಆಂತರಿಕ ಸಮಸ್ಯೆಯಾಗುವ ಪರಿಸ್ಥಿತಿ ಇದೆ. ಜಾಗತಿಕವಾಗಿ ಕುಡಿಯುವ ನೀರಿನ ಸೆಲೆಗಳ ಮೇಲೆ ಆಕ್ರಮಣವಾಗಿ ಯುದ್ಧದ ಪರಿಸ್ಥಿತಿ ಉಂಟಾಗುವ ಸಂಭವವಿದೆ. ಬ್ರಹ್ಮಪುತ್ರಾ ನದಿಯ ಉಗಮ ನಮ್ಮ ನೆರೆ ರಾಷ್ಟ್ರದಲ್ಲಿ. ಪಾಕಿಸ್ತಾನದ ಜೀವನದಿಗಳ ಉಗಮ ಭಾರತದಲ್ಲಿ. ಈ ದಿಶೆಯಲ್ಲಿ ನೀರಿನ ವಾಣಿಜ್ಯೀಕರಣ ಪ್ರಕ್ರಿಯೆ ತೀವ್ರ ಬಿಕ್ಕಟ್ಟು ಉಂಟುಮಾಡಿದೆ. ಮತ್ತೊಂದು ಸಮಸ್ಯೆ ಎಂದರೆ ನಾವು ವ್ಯವಸಾಯ ಮಾಡುವ ಕ್ರಮ. ಪಾಶ್ಚಾತ್ಯ ಮಾದರಿಯಲ್ಲಿ ಬಳಸುವ ಹೆಚ್ಚು ರಸಗೊಬ್ಬರ, ಕ್ರಿಮಿನಾಶಕಗಳು, ಹೆಚ್ಚು ನೀರು, ಹೆಚ್ಚು ಇಳುವರಿ ಇವು, ಭೂಮಿಯ ಸಾರವನ್ನು ಕೊನೆಯ ತೊಟ್ಟಿನವರೆಗೆ ಹಿಂಡುವ, ಬರಡಾಗಿಸುವ ಮಾರ್ಗಗಳು. ಅದೊಂದು ಅವಿವೇಕದ ಮಾರ್ಗವೆಂದು ಪಾಶ್ಚಾತ್ಯರ ಅನುಭವವೇ ಹೇಳುತ್ತಿದೆ. ಈ ಮಾರ್ಗಕ್ಕೆ ಯಾಂತ್ರೀಕರಣ, ದೊಡ್ಡ ದೊಡ್ಡ ಹಿಡುವಳಿಗಳು ಅಗತ್ಯ. ಭಾರತ ಸಣ್ಣ, ಅತಿಸಣ್ಣ ಹಿಡುವಳಿ ಉಳ್ಳ ರೈತ ಬಾಹುಳ್ಯವುಳ್ಳ ರಾಷ್ಟ್ರ. ಈ ವ್ಯವಸ್ಥೆಯನ್ನು ಬುಡಸಮೇತ ಕಿತ್ತು, ಹೊಸ ವ್ಯವಸ್ಥೆಯನ್ನು ಸ್ವೀಕರಿಸಬೇಕೆ ಅಥವಾ ಈ ವ್ಯವಸ್ಥೆಯೊಳಗಿನ ದೋಷಗಳನ್ನು ಪರಿಹರಿಸಿ, ಕೊರತೆಯನ್ನು ನೀಗಿಸುವ ಮಾರ್ಗ ಹುಡುಕಬೇಕೆ ? ಎರಡನೆಯ ಮಾರ್ಗದಲ್ಲಿ ಪರಿಹಾರ ನಮಗೆ ಸಾಂಪ್ರದಾಯಿಕವಾಗಿ ಈಗಾಗಲೇ ತಿಳಿದಿದೆ. ಮೊದಲನೆಯದಕ್ಕೆ ಇತರರನ್ನು ಯಾಚಿಸಬೇಕು. ಈಗಾಗಲೆ ದೊಡ್ಡ ದೊಡ್ಡ ಅಣೆಕಟ್ಟುಗಳನ್ನು ಕಟ್ಟುತ್ತ, ಅದಕ್ಕೆ ಬರುವ ಒಳಹರಿವಿನ ಮಾರ್ಗಗಳನ್ನು, ಮಳೆ ತರುವ ಅರಣ್ಯಗಳನ್ನು ನಾಶಪಡಿಸುತ್ತ, ಸಾಂಪ್ರದಾಯಿಕವಾಗಿ ಮಳೆನೀರನ್ನು ಸಂಗ್ರಹಿಸುತ್ತಿದ್ದ ನಮ್ಮ ಪುರಾತನರ ಬಳುವಳಿ ಕೆರೆಗಳನ್ನು ನಿರ್ಮೂಲಗೊಳಿಸುತ್ತ ಬಂದ ನಮ್ಮ ಬೆಳವಣಿಗೆಯ ಮಾರ್ಗ, ನಮ್ಮ ಜೀವನದಿಗಳ ಜೀವ ಹಿಂಡಿ, ತನ್ನ ದಿವಾಳಿತನವನ್ನು ಚೆಲ್ಲಿದೆ. ಈ ಕ್ಷೇತ್ರದಲ್ಲಿ ನಡೆದಿರುವುದು ಬೃಹತ್ಪ್ರಮಾಣದ ಸಾಮಾಜಿಕ ತಲ್ಲಣದ ಅಸಂಘಟನೆಯೇ ವಿನಃ ಸಂಘಟನೆಯಲ್ಲ. ಈ ಸಂಘಟಿತ ವಿಘಟನೆಯು ನಮ್ಮ ಸ್ವಾತಂತ್ರ್ಯದ ಕ್ಷೇಮಕ್ಕೆ ಬಹುದೊಡ್ಡ ಆಂತರಿಕ ಸವಾಲು.

ಗ್ರಾಮೀಣ ಪ್ರದೇಶದ ವಿಘಟನೆಯಿಂದ ಅಪಾರ ಸಂಖ್ಯೆಯಲ್ಲಿ ಜನ ವಲಸೆಹೋಗುತ್ತಿರುವುದು, ನಗರೀಕರಣದಿಂದಾಗಿ ತಲೆ ಎತ್ತುತ್ತಿರುವ ಕೊಳಚೆ ಪ್ರದೇಶಗಳು ಹೆಚ್ಚಾಗುತ್ತಿರುವುದು, ಎಲ್ಲವೂ ಸೇರಿ ಹಲವಾರು ತೀವ್ರ ಬಿಕ್ಕಟ್ಟುಗಳು ಉಂಟಾಗಿವೆ. ಮುಂಬಯಿಯಂಥ ಶಹರದಲ್ಲಿ ಕಾನೂನು ವ್ಯವಸ್ಥೆ ಕಾಪಾಡಲು ಸಾಧ್ಯವಾಗದಷ್ಟು ಅತ್ಯಂತ ವಿಘಟಿತ ನಾಗರಿಕ ಸಮಾಜ ತಲೆ ಎತ್ತುತ್ತಿದೆ ಅಥವಾ ಈ ಬೆಳವಣಿಗೆ 'ನಗರ' ಎಂಬ ಪದಕ್ಕೆ ಅಪವಾದವಾಗಿದೆ. ನಗರವೆಂದರೆ ಸಂಪೂರ್ಣವಾಗಿ ಸಂಘಟಿತ ವ್ಯವಸ್ಥೆಯೆಂದೇ ಅರ್ಥ. ಕೈಗಾರಿಕೆಗಳೂ, ಸೇವಾಕ್ಷೇತ್ರವೂ ಗ್ರಾಮೀಣ ಪ್ರದೇಶದ ಹೆಚ್ಚುವರಿ ಜನಸಂಖ್ಯೆಗೆ ಉದ್ಯೋಗ ನೀಡುತ್ತವೆ, ಕೃಷಿಭೂಮಿಯನ್ನು ಬೃಹತ್ಪ್ರಮಾಣದ ಆಧುನಿಕ ಕೃಷಿಗೆ ಒಡ್ಡಬೇಕು ಎಂದೆಲ್ಲಾ ಹೇಳುವವರು, ಮೊದಲು ಆ ಉದ್ಯೋಗ ನೀಡಬಲ್ಲ ವಿಕಾಸವನ್ನು ಸಾಕಷ್ಟು ಸಾಧಿಸಿ, ನಿಯಂತ್ರಿತ ವಲಸೆಯ ಮಾರ್ಗ ಹಿಡಿಯಬೇಕಾಗಿತ್ತು. ನಗರಗಳಿಗೆ ಅಷ್ಟೊಂದು ಜನರು ಒಳಬರುವುದನ್ನು ನಿರ್ವಹಿಸಲು ಸಿದ್ಧವಾಗುವ ಮೊದಲೆ ಈ ಪರಿಸ್ಥಿತಿ ಉಂಟಾಗಿದ್ದು ನಗರ ಜೀವನವೂ, ಗ್ರಾಮ ಜೀವನವೂ ಏಕಕಾಲದಲ್ಲಿ ಅಸ್ತವ್ಯಸ್ತವಾಗಿರುವುದು ಇಂದಿನ ಆಂತರಿಕ ವಿಘಟನೆಯ ಬೀಭತ್ಸ ಚಿತ್ರ. ಈ ಬಿಕ್ಕಟ್ಟಿನ ಸುಳಿಯಲ್ಲಿ ಸಿಕ್ಕಿರುವಾಗ, ಅದ್ಯಾವ್ಯಾವ ಸ್ವಾತಂತ್ರ್ಯಗಳ ಬಗ್ಗೆ ಟಿವಿಗಳಲ್ಲಿ ಚರ್ಚೆಮಾಡಿ ಏನು ಫಲ? ಮಹಿಳೆಯರೇ, ದಲಿತರೇ, ಕಾರ್ಮಿಕರೇ, ಸಲಿಂಗಿಗಳೇ, ನಿರ್ಲಿಂಗಿಗಳೇ, ವಿಕಲಾಂಗರೇ – ಈ ಎಲ್ಲರ ಸ್ವಾತಂತ್ರ್ಯಗಳೂ ಸಾಧ್ಯವಾಗಬಲ್ಲ ಸಂಘಟಿತ ಹೋರಾಟ ಕಂಡುಬರುತ್ತಿಲ್ಲವೆ?

ದೇಶವನ್ನು ಒಗ್ಗೂಡಿಸುವ ಪ್ರಯತ್ನಗಳನ್ನು ಮೂಲೆಗುಂಪಾಗಿಸುವ ಉಪಸಮಸ್ಯೆಗಳು ಲೆಕ್ಕವಿಲ್ಲದಷ್ಟು ಇವೆ. ಭಾಷಾವಾರು ರಾಜ್ಯಗಳೂ ಒಡೆಯುತ್ತಿವೆ. ಭಾಷೆಯು ಜನರನ್ನು ಒಗ್ಗೂಡಿಸುವ ದಿಶೆಯಲ್ಲಿ ಪಾತ್ರವಹಿಸಲು ಸಾಧ್ಯವಾಗದೆ ಕುಂಟುತ್ತಿದೆ. ಮತಧರ್ಮಗಳೂ ಅಂತೆಯೇ ಎಲ್ಲರನ್ನೂ ಒಗ್ಗೂಡಿಸುವ ದಿಶೆಯಲ್ಲಿ ಎಡವುತ್ತಿವೆ. ಸಹಧರ್ಮೀಯರ ನಡುವೆಯೂ ಒಗ್ಗಟ್ಟು ಸಾಧಿಸಲಾಗಿಲ್ಲ. ಅದನ್ನು ಸಾಧಿಸಲು ಪರಧರ್ಮೀಯರನ್ನು ದ್ವೇಷಿಸುತ್ತಾ, ವಿಧರ್ಮೀಯರನ್ನು ದ್ವೇಷಿಸುವುದನ್ನೇ ಅಗತ್ಯವೆನ್ನುವ ವಾದ ದಿವಾಳಿಯಾಗಿದೆ. ವಾಸ್ತವದಲ್ಲಿ ಬಹುಸಂಖ್ಯೆಯವರದು, ಎಂಬಂತಹ ಮತಧರ್ಮ ಈ ದೇಶದಲ್ಲಿ ಇಲ್ಲ: ಹಿಂದೂ ಸಮಾಜದೊಳಗಿನ ವೈವಿಧ್ಯತೆಗಳ ಧನಾತ್ಮಕ ಸಂಪತ್ತನ್ನು ಹಾಳುಗೆಡವಿ ಅದು ಜಾತಿಯ ಒಡಕಿನ ಅಂಗಾರವಾಗಿದೆ. ಈ ಒಡೆದ ಸಮಾಜದಲ್ಲಿ ತಮ್ಮ ಮಾನವೀಯ ಹಕ್ಕುಗಳಿಗಾಗಿ ನಮ್ಮ ಕೆಲವು ದಲಿತ ಬಾಂಧವರು ವಿದೇಶೀ ಸೆನೆಟ್ಟುಗಳಿಗೆ, ವಿಶ್ವಸಂಸ್ಥೆಗೆ ಮನವಿ ಸಲ್ಲಿಸುವ ಮಟ್ಟಕ್ಕೆ ನಮ್ಮ ಮತಾಂಧ ಶಕ್ತಿಗಳು ಕುರುಡಾಗಿವೆ; ನಮ್ಮ ಆಂತರಿಕ ವಿಘಟನೆಯ ಚಿತ್ರವನ್ನು ಆಳುವವರ್ಗದ ಅಧಿಕಾರ ಗ್ರಹಣ ರಾಜಕೀಯ ತನ್ನದೇ ವಿಘಟನೆಯೊಂದಿಗೆ ಸಂಪೂರ್ಣಗೊಳಿಸಿದೆ. ಈ ವಿಘಟನೆಯ ಪರಿಸ್ಥಿತಿಯನ್ನೇ ಬಂಡವಾಳ ಮಾಡಿಕೊಂಡು ಅಧಿಕಾರ ಹಿಡಿದ ಬೂರ್ಷ್ವಾ ವರ್ಗ, ಅವೆಲ್ಲವೂ ಇಲ್ಲವೇ ಇಲ್ಲವೆಂಬ ಮುಸುಕು ಮುಚ್ಚಿ, ಬಂಡವಳಿಗ ವರ್ಗದ ಊಳಿಗವನ್ನು ನಿರಾತಂಕವಾಗಿ ನಡೆಸುತ್ತಿದೆ. ಆ ವರ್ಗದ ಪ್ರತಿನಿಧಿಯಾಗಿ ಆಯ್ಕೆಯಾಗಿರುವ ನಮ್ಮ ಇಂದಿನ ಪ್ರಧಾನಿ ಯಾವ ಎಗ್ಗಿಲ್ಲದೆ, ರಾಷ್ಟ್ರದ ಅರ್ಥನೀತಿಯನ್ನು ಜಾಗತಿಕ ಬಂಡವಾಳದೊಡನೆ ಬೆಸೆಯಲು ಸಮರ್ಥರಾಗಿದ್ದಾರೆ. ಅವರನ್ನು ನಿಯಂತ್ರಿಸಲು ಶಾಸನಸಭೆ ಪ್ರಯತ್ನ ಪಡುವುದಿಲ್ಲವೆಂದಲ್ಲ, ಅದಕ್ಕೆ ಅದು ಸಾಧ್ಯವೇ ಇಲ್ಲ ಎನ್ನುವುದೇ ಇಂದಿನ ವಾಸ್ತವ ಸಂಗತಿ. ಆರ್ಥಿಕ ಬೆಳವಣಿಗೆಯ ದರವನ್ನು ಮುಂದೊಡ್ಡಿ, ಅದರಿಂದ ಯಾರ ಬೆಳವಣಿಗೆ ಆಗಿದೆ ಎಂಬ ತನಿಖೆ ಈಗ ಬೇಡ ಎಂದಾಗ, ಇದರಲ್ಲಿ ಒಳಗೊಳ್ಳದವರ ನಡುವೆ ಸಂಘಟನೆ ಇಲ್ಲದಾಗ ಆಗುತ್ತಿರುವ ರಾಷ್ಟ್ರೀಯ ವಿಘಟನೆ ನಮ್ಮ ಸ್ವಾತಂತ್ರ್ಯಕ್ಕೆ ಬಂದಿರುವ ಅತಿ ಗಂಭೀರವಾದ ಸವಾಲು. ಈ ಎಲ್ಲ ಸವಾಲುಗಳೇ ಕಾರಣವಾಗಿ ನಮ್ಮ ನೆರೆಯ ರಾಷ್ಟ್ರಗಳೊಡನೆ ನಮಗೆ ನಿರಂತರ ವೈಮನಸ್ಯ ಉಂಟಾಗಿ, ಅದೂ ಒಂದು ಸವಾಲಾಗುವಂತೆ ಆಗಿದೆ. ಸಾಮಾನ್ಯವಾಗಿ ಈ ಎಲ್ಲ ಸಮಸ್ಯೆಗಳಿಗೂ ಆಳುವವರ್ಗ ಮುಂದಿಡುವ ಕಾರಣ, ದಿನೇ ದಿನೇ ಹೆಚ್ಚುತ್ತಿರುವ ಜನಸಂಖ್ಯೆ ಎನ್ನುವುದು. ಅದೊಂದು ಪೊಳ್ಳುವಾದ. ಈ ಮೇಲಿನ ಸಮಸ್ಯೆಗಳ ಪರಿಹಾರವಾಗದೆ, ಸುಸ್ಥಿರ ಸಮಾಜ ನಿರ್ಮಾಣವಾಗದೆ ಜನಸಂಖ್ಯೆಯ ಬೆಳವಣಿಗೆ ಕುಂಠಿತವಾಗುವುದಿಲ್ಲ. ಆರ್ಥಿಕ, ಸಾಮಾಜಿಕ ಸಮಾಧಾನ ಸಾಧಿಸಿದ ರಾಷ್ಟ್ರಗಳಲ್ಲಿ ಜನಸಂಖ್ಯೆಯ ಬೆಳವಣಿಗೆ ಕಡಿಮೆಯಾಗುತ್ತಿರುವುದು ನಿರ್ವಿವಾದ. ಈ ಮಾರ್ಗ ಹಿಡಿಯದೆ ಜನಸಂಖ್ಯೆಯ ಬಾಹುಳ್ಯಕ್ಕೆ ಪರಿಹಾರ ಅರ್ಥಶಾಸ್ತ್ರಜ್ಞ ಮಾಲ್ತಸ್ ಹೇಳುವ ರೋಗ ರುಜಿನ, ಯುದ್ಧಗಳಿಂದ ಮಾತ್ರ ಅನ್ನುವಂತಾಗುತ್ತದೆ.

ಇದೆಲ್ಲಾ ಕೇವಲ ಋಣಾತ್ಮಕ, ನಿರಾಶಾವಾದದ, ದೊಡ್ಡ ಪಟ್ಟಿ ಎನ್ನುವಂತಿಲ್ಲ. ಈ ಮೇಲಿನ ಸವಾಲುಗಳು ಸರಿಯಲ್ಲವೆಂದು ಯಾರೂ ಹೇಳಲಾರರು. ಅವುಗಳನ್ನು ವಸ್ತುನಿಷ್ಠವಾಗಿ ಸ್ವೀಕರಿಸಿದರೆ ಪರಿಹಾರ ಹುಡುಕಲು ಸಾಧ್ಯವಿದೆ. ಹಾಗಿಲ್ಲವೆಂದು ಟಿ.ವಿ. ನೀಡುವ ಭ್ರಮೆಯನ್ನೇ ಸ್ವೀಕರಿಸಿ, ಸವಾಲುಗಳು ನಮ್ಮನ್ನು ನುಂಗುವವರೆಗೂ, ಆಳುವ ವರ್ಗಗಳು ಹುಟ್ಟುಹಾಕುವ ಹುಸಿ ಆಶಾವಾದ ಸ್ವೀಕರಿಸಿ ಆರಾಮವಾಗಿರಬಹುದು. ನಮಗಿರುವ ಆಶಾವಾದದ ಸೆಲೆಗಳೆಂದರೆ ಕೆಲವೇ ಕೆಲವು ನ್ಯಾಯಮೂರ್ತಿಗಳು, ಕೆಲವಾದರೂ ಉತ್ತಮ ಪತ್ರಿಕೆಗಳು, ಕೆಲವರೇ ಆದರೂ ಉತ್ತಮ ರಾಜಕೀಯ ನಾಯಕರುಗಳು, ಉತ್ತಮ ಮತಧರ್ಮೀಯ ಮುಂದಾಳುಗಳು, ಜನಪರ ಸಾಹಿತಿಗಳು ಮತ್ತು ಸೃಜನಶೀಲ ಚಿಂತಕರು. ಇವರುಗಳು ಇನ್ನೂ ಅದಮ್ಯ ಆಶಾವಾದದಿಂದ ಕೆಲಸ ಮಾಡುತ್ತಿದ್ದಾರೆ. ಅದಕ್ಕೆ ಕಾರಣ ಇನ್ನೂ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆ ಒಂದು ಹಂತದಲ್ಲಿ ಬದುಕುಳಿದಿರುವುದು. ಪ್ರಧಾನಿ ನೆಹರು ನಿರೀಕ್ಷಿಸಿದ್ದಂತೆ ಸಾಧಾರಣರಲ್ಲಿ ಸಾಧಾರಣ ಜನರೂ ಪ್ರಜಾಪ್ರಭುತ್ವಾತ್ಮಕವಾಗಿ ಇಂದು ಪ್ರತಿಕ್ರಿಯಿಸಬಲ್ಲವರಾಗಿದ್ದು, ಈ ವ್ಯವಸ್ಥೆಯ ರಕ್ಷಣೆಗೆ ಹೋರಾಡಲು ಸಿದ್ಧರಾಗಿದ್ದಾರೆ. ಇಲ್ಲಿರುವ ಕೊರತೆ ಈ ಶಕ್ತಿಗಳು ಪರಸ್ಪರ ಗುರುತಿಸಿಕೊಂಡು, ಒಂದಾಗಿ ಸಂಘಟಿತರಾಗದಿರುವುದು. ದಲಿತ ನಾಯಕರು ಕೆಲವರು ತಮ್ಮ ಇತ್ತೀಚಿನ ಕೆಲ ವರ್ತನೆಗಳಿಂದಾಗಿ, ಹಾಗೂ ಎಡಪಂಥೀಯ ಹಾಲಿ ನಾಯಕರು ಕೆಲವರು, ಸಾಹಿತಿಗಳು, ಪತ್ರಕರ್ತರು ಕೆಲವರು ತಮ್ಮ ತಮ್ಮ ವೈಫಲ್ಯಗಳನ್ನು ತಾವೇ ಹೊರಗೆಡವಿಕೊಂಡು, ಈಗ ಸಾಮಾನ್ಯ ಜನತೆಗೆ ತಮ್ಮ


ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





ಸಮಾಲೋಚಕ ಮಂಡಲಿ

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಮುರಳೀಧರ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವಿಜಯಾ
ಬಿ. ವಿ. ವೀರಭದ್ರಪ್ಪ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಗುರಿಯನ್ನು ಅವರ ನೆರವಿಲ್ಲದೆ ತಾವಾಗೇ ತಿಳಿದುಕೊಳ್ಳಲು ಸಹಾಯ ಮಾಡಿದ್ದಾರೆ! ಅವರಲ್ಲಿ ಕೆಲವರು ಡಂಭ ರಾಜಕೀಯ ನಾಯಕರಿಗೆ ಜ್ಯೂಸ್ ನೀಡಿಯೋ ಅಥವಾ ಇನ್ನು ಹಲವಾರು ಮಾರ್ಗಗಳಿಂದಲೋ ವೈಸ್ ಛಾನ್ಸಲರ್ ಆಗಬಹುದು, ಎಂಥದೋ ಪ್ರಾಧಿಕಾರಕ್ಕೆ ಅಧ್ಯಕ್ಷರಾಗಬಹುದು, ಇನ್ನೂ ಏನೇನೋ ಪಡೆದುಕೊಳ್ಳಬಹುದು. ಆದರೆ ಎಚ್ಚೆತ್ತ ಜನರನ್ನು ಇನ್ನು ವಂಚಿಸಲಾಗುವುದಿಲ್ಲ. ಎಡ, ಪ್ರಗತಿಪರ ಪ್ರಜಾಪ್ರಭುತ್ವಾತ್ಮಕ ಶಕ್ತಿಗಳು ಮೇಲಿನ ವಿಘಟನೆಗಳನ್ನು ಸರಿಪಡಿಸುವ ಉದ್ದೇಶದ ರಾಜಕೀಯವನ್ನು ಸಂಘಟಿಸಲು ಇದು ಸುಸಂದರ್ಭ. ಈ ಮಾರ್ಗದಲ್ಲಿ ಪಕ್ಷಗಳು ತಮ್ಮ ರೂಢಿಗತ ಹೆಸರುಗಳನ್ನು, ಹಣೆಪಟ್ಟಿಗಳನ್ನು ಕಳೆದುಕೊಂಡರೂ ಪರವಾಗಿಲ್ಲ, ಹೆಸರಾಂತ ಹಾಲಿ ನಾಯಕರು ತೆರೆಮರೆಗೆ ಹೋಗುವಂತಾದರೂ ಪರವಾಗಿಲ್ಲ. ಸಂಪೂರ್ಣ ನೈಜ ಪ್ರಜಾಪ್ರಭುತ್ವಕ್ಕೆ ಹೋರಾಡುವುದು ಎಂದರೆ ಅದು ಸಮಾಜವಾದೀಯವೆ. ಅಂಥ ಹೋರಾಟಕ್ಕೆ ಈ ಎಲ್ಲ ಬದಲಾವಣೆಗಳೂ ಇಂದು ಅಗತ್ಯ. ಪ್ರಗತಿಪರ ಸಂಘಟನೆಗಳು ಕೆಳಸ್ತರದಲ್ಲಿ ನಡೆಸುವ ಸಂಪೂರ್ಣ ಪ್ರಜಾಪ್ರಭುತ್ವಾತ್ಮಕ ಚರ್ಚೆ ಮುಂದಿನ ಹಾದಿ ತೋರಿಸಬಲ್ಲುವು. ಆ ಸಾಧ್ಯತೆಯೇ ನಮ್ಮ ನಾಡಿನ ಭವಿಷ್ಯದ ಬಗ್ಗೆ ನಾವು ಆಶಾವಾದಿಗಳಾಗಿರಲು ಕಾರಣ.

[signature]

## ಕೇಂದ್ರ ಸಂಪುಟ ಪುನರ್‌ರಚನೆ ಎಂಬ ಪ್ರಹಸನ

ತನ್ನ ಎರಡು ವರ್ಷಗಳ ಆಡಳಿತಾವಧಿಯಲ್ಲಿ ನಿಷ್ಕ್ರಿಯತೆ, ಹಿಂದೆಂದೂ ಕಂಡುಕೇಳರಿಯದ ಭ್ರಷ್ಟಾಚಾರ, ಹಗರಣಗಳು, ಆಗಾಗ್ಗೆ ಸುಪ್ರೀಂ ಕೋರ್ಟ್ ಸರ್ಕಾರದ ವಿರುದ್ಧ ಮಾಡುತ್ತಿರುವ ಗುರುತರವಾದ ಟೀಕೆಗಳು, ನೀಡುತ್ತಿರುವ ತೀರ್ಪುಗಳು ಇವುಗಳಿಂದ ಸೊರಗಿಹೋಗಿರುವ ಯುಪಿಎ ಸರ್ಕಾರ ಈ ಬಾರಿಯ ಕೇಂದ್ರ ಸಂಪುಟವನ್ನು ಪುನರ್‌ರಚಿಸುವ ಮೂಲಕ ರಾಷ್ಟ್ರದ ಹಿತದೃಷ್ಟಿಯಲ್ಲಿ ಪ್ರಧಾನಿ ಮನಮೋಹನ್ ಸಿಂಗ್ ಮತ್ತು ಕಾಂಗ್ರೆಸ್ ಪಕ್ಷದ ಅಧ್ಯಕ್ಷೆ ಸೋನಿಯಾ ಗಾಂಧಿ ಅವರು ಕೆಲವು ಮೂಲಭೂತ ಬದಲಾವಣೆಗಳನ್ನು ತಂದು ಯುಪಿಎನ ಆಡಳಿತ ಶೈಲಿಗೆ ಹೊಸ ರೂಪ ನೀಡಬಹುದೆಂಬ ಜನತೆಯ ನಿರೀಕ್ಷೆ ಹುಸಿಯಾಗಿಸುವುದರಲ್ಲಿ ಆಶ್ಚರ್ಯವೇನಿಲ್ಲ. ಈ ನಿರರ್ಥಕ ಕಸರತ್ತಿನಿಂದಾಗಿ ಕೇಂದ್ರ ಸರ್ಕಾರ ತನ್ನ ನಿಷ್ಕ್ರಿಯತೆ ಮತ್ತು ಭ್ರಷ್ಟಾಚಾರ ಪೀಡಿತ ಆಡಳಿತ ಶೈಲಿಯಿಂದ ಹೊರಬರಲು ಸಾಧ್ಯವಿಲ್ಲ. ಜನಪರ ರಾಜಕಾರಣದ ಕನಿಷ್ಠ ಪರಿಜ್ಞಾನವೂ ಇಲ್ಲದ, ರಾಷ್ಟ್ರದ ಹಿತಾಸಕ್ತಿಗಳನ್ನು ಅಮೆರಿಕಾಗೆ ಒತ್ತೆ ಇಡುವ ದಿಶೆಯಲ್ಲಿ ವಿದೇಶಾಂಗ ನೀತಿಗಳನ್ನು ರೂಪಿಸುತ್ತಿರುವ ಮತ್ತು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಹಾಗೂ ವಿಶ್ವ ಬ್ಯಾಂಕುಗಳ ಪ್ರತಿನಿಧಿಯಂತೆ ಕಾರ್ಯ ನಿರ್ವಹಿಸುತ್ತಿರುವ ಮನಮೋಹನ ಸಿಂಗ್ ಅವರಿಂದ ಇನ್ನೇನು ತಾನೆ ನಿರೀಕ್ಷಿಸಲು ಸಾಧ್ಯ?

ಸರ್ಕಾರದ ಎಲ್ಲ ವೈಫಲ್ಯಗಳಿಗೆ ಸಮ್ಮಿಶ್ರ ಸರ್ಕಾರದ ಇತಿಮಿತಿಗಳು, ಒತ್ತಡಗಳು ಮತ್ತು ಅನಿವಾರ್ಯತೆಗಳೇ ಕಾರಣ ಎಂದು ಹೇಳುತ್ತ ತಮ್ಮ ಜವಾಬ್ದಾರಿಯಿಂದ ನುಣುಚಿಕೊಳ್ಳುವ ಕಲೆಯಲ್ಲಿ ನಿಪುಣರಾಗಿರುವ ಪ್ರಧಾನಿಯವರು, ಚಿದಂಬರಂ, ಶರದ್, ಎಸ್. ಎಂ. ಕೃಷ್ಣ, ಪವಾರ್‌ರಂತಹ ಬೇಜವಾಬ್ದಾರಿ ಸಚಿವರನ್ನು ಕೈಬಿಡುವ ಧೈರ್ಯ ತೋರದಿರುವುದು ನಿರಾಶಾದಾಯಕ. ಅದು ಕಾಂಗ್ರೆಸ್ ಪಕ್ಷದ ದೌರ್ಬಲ್ಯವೂ ಹೌದು. ಹಾಗೆ ನೋಡಿದರೆ ಕಳೆದೆರಡು ವರ್ಷಗಳಲ್ಲಿ ರಾಜಕೀಯವಾಗಿ, ಆರ್ಥಿಕವಾಗಿ ರಾಷ್ಟ್ರವನ್ನು ಪ್ರಪಾತಕ್ಕೆ ತಳ್ಳಿರುವ ಮನಮೋಹನ ಸಿಂಗ್ ಅವರು ಪ್ರಧಾನಿಯಾಗಿ ಮುಂದುವರಿಯಬೇಕೇ ಎಂದು ಪ್ರಶ್ನಿಸುವ ಸಂದರ್ಭ ಇಂದು ಉಂಟಾಗಿದೆ. ಒಂದು ರೀತಿಯಲ್ಲಿ ಇಡೀ ಬದಲಾವಣೆಯ ಕಸರತ್ತು ಆರಂಭವಾಗಿದ್ದೇ ಡಿ.ಎಂ.ಕೆ. ಮಂತ್ರಿಗಳಾದ ದಯಾನಿಧಿ ಮಾರನ್ ಮತ್ತು ಎ. ರಾಜಾ ಅವರ ಮೇಲಿನ ಆರೋಪಗಳಿಂದ.

ಈಗ ಆಗಿರುವ ಬದಲಾವಣೆಗಳಲ್ಲಿ ಪರಿಸರ ಸಚಿವರಾಗಿದ್ದ ಜೈರಾಮ್ ರಮೇಶ್ ಅವರಿಗೆ ''ಬಡ್ತಿ'' ನೀಡಿ ಗ್ರಾಮೀಣಾಭಿವೃದ್ಧಿ ಇಲಾಖೆಯ ಜವಾಬ್ದಾರಿ ನೀಡಿರುವುದರ ಹಿಂದೆ ಹಲವಾರು ಕಾರಣಗಳಿವೆ ಎಂಬುದನ್ನು ತಳ್ಳಿಹಾಕುವಂತಿಲ್ಲ. ಜೈರಾಮ್ ರಮೇಶ್ ಅಷ್ಟಿಷ್ಟು ಹುಮ್ಮಸ್ಸಿನಿಂದ ಬೃಹತ್ ಉದ್ದಿಮೆದಾರರನ್ನು, ಕಾರ್ಪೊರೇಟ್ ಕಂಪನಿಗಳನ್ನು ಎದುರುಹಾಕಿಕೊಂಡು ಕೆಲವು ದಿಟ್ಟ ಹೆಜ್ಜೆಗಳನ್ನಿಟ್ಟದ್ದು ಪ್ರಶಂಸನೀಯ. ಪಾರದರ್ಶಕತೆಯಿಂದ ಕಾರ್ಯ ನಿರ್ವಹಿಸುತ್ತಿದ್ದ ಜೈರಾಮ್ ಅನೇಕ ಬಾರಿ ತಮ್ಮದೇ ಸರ್ಕಾರದಿಂದ ಪ್ರತಿರೋಧ ಎದುರಿಸಬೇಕಾದ ಸಂದರ್ಭ ಉಂಟಾದುದು ವಿಷಾದಕರ ಸಂಗತಿ. ಅಲ್ಲದೆ ಇದು ಉದ್ದಿಮೆದಾರರು, ಕಾರ್ಪೊರೇಟ್‌ಗಳು ಆಡಳಿತ ವರ್ಗದ ಮೇಲೆ ಹಿಡಿತ ಸಾಧಿಸಿರುವುದಕ್ಕೆ ಸಾಕ್ಷಿಯಾಗಿದೆ. ಈ ಸಚಿವರು ತಮ್ಮ ಪಾಲಿಗೆ ಬಂದಿರುವ ಗ್ರಾಮೀಣ ಅಭಿವೃದ್ಧಿ ಖಾತೆಯನ್ನು ಎಷ್ಟು ಸಮರ್ಥವಾಗಿ ನಿರ್ವಹಿಸುತ್ತಾರೆ ಎಂಬುದನ್ನು ಕಾದು ನೋಡಬೇಕು.

ಸಲ್ಮಾನ್ ಖುರ್ಷಿದ್ ಮತ್ತು ರಾಜೀವ್ ಶುಕ್ಲಾ ಅವರಿಗೆ ಸಚಿವ ಸ್ಥಾನ ದೊರಕಿರುವುದು ಸದ್ಯದಲ್ಲೇ ಜರುಗಲಿರುವ ಉತ್ತರಪ್ರದೇಶ ವಿಧಾನಸಭಾ ಚುನಾವಣೆಯ ಹಿನ್ನೆಲೆಯಲ್ಲಿ. ಇದೇ ಕಾರಣಕ್ಕೆ ಉಕ್ಕು ಖಾತೆಗೆ ಬೇಣಿ ಪ್ರಸಾದ್ ವರ್ಮ ನೇಮಕಗೊಂಡಿದ್ದಾರೆ. ರಾಹುಲ್ ಗಾಂಧಿ ಪ್ರಭಾವದಿಂದ ಮಿಲಿಂದ್ ದೇವ್ರಾ ಮತ್ತು ಜಿತೇಂದ್ರ ಸಿಂಗ್ ಅವರಿಗೆ ಸಚಿವ ಪಟ್ಟ ದೊರಕಿದೆ. ಮಮತಾ ಬ್ಯಾನರ್ಜಿ ಅವರ ಅಪ್ಪಣೆ ಮೇರೆಗೆ ತೃಣಮೂಲ ಕಾಂಗ್ರೆಸ್‌ನ ದಿನೇಶ್ ತ್ರಿವೇದಿ ಈಗ ರೈಲ್ವೆ ಸಚಿವರು.

ತನ್ನ ಇಬ್ಬರು ಪ್ರತಿನಿಧಿಗಳು ಜೈಲಿಗೆ ಸೇರಿರುವ ಕಾರಣ ಡಿ.ಎಂ.ಕೆ. ಅವರ ಸ್ಥಾನ ತುಂಬಲು ಮೀನಮೇಷ ಎಣಿಸುತ್ತಿದೆ. ತಮಿಳುನಾಡಿನಲ್ಲಿ ಇತ್ತೀಚೆಗೆ ನಡೆದ ವಿಧಾನಸಭಾ ಚುನಾವಣೆಯಲ್ಲಿ ಹೀನಾಯವಾದ ಸೋಲುಂಡಿರುವ, ಆಂತರಿಕ ಭಿನ್ನಾಭಿಪ್ರಾಯಗಳಿಂದ ತತ್ತರಿಸಿಹೋಗಿರುವ ಡಿ.ಎಂ.ಕೆ. ಪಕ್ಷ ದಿಕ್ಕೆಟ್ಟು ಕೂತಿದೆ.

ಸಾಮಾನ್ಯವಾಗಿ ಸಂಪುಟ ಪುನರ್‌ರಚನೆಯ ಸಂದರ್ಭದಲ್ಲಿ, ಅದರಲ್ಲೂ ಸಮ್ಮಿಶ್ರ ಸರ್ಕಾರಗಳನ್ನು ನಡೆಸುವಾಗ ಎಲ್ಲರನ್ನು ತೃಪ್ತಿಪಡಿಸುವುದು ಸಾಧ್ಯವಾಗದ ಮಾತು. ಆದರೆ ಅಂತಹ ಸಂದರ್ಭಗಳು ಸಂಬಂಧಪಟ್ಟ ನಾಯಕರಿಗೆ, ಪಕ್ಷಗಳಿಗೆ, ಹಲವಾರು ಕಾರಣಗಳಿಂದ ತಮಗೆ ಅಂಟಿಕೊಂಡು ಬಂದಿರುವ ಜಡತ್ವವನ್ನು ಕೊಡವಿಕೊಂಡು, ಅದೇ ವೇಳೆ ತಾವು ಅನುಸರಿಸುತ್ತಿರುವ ಜನವಿರೋಧಿ ನೀತಿಗಳನ್ನು ತಿದ್ದಿಕೊಂಡು ಹೊಸ ಚೈತನ್ಯ ಮೂಡಿಸಿಕೊಳ್ಳಲು ಅವಕಾಶಗಳನ್ನು ತೆರೆದಿಡುತ್ತವೆ. ಈ ದಿಶೆಯಲ್ಲಿ ಭಾರತ ಇದುವರೆಗೆ ಕಂಡಿರುವ ಅತ್ಯಂತ ದುರ್ಬಲ, ಯಾವುದೇ ರಾಜಕೀಯ ಮುನ್ನೋಟವಿಲ್ಲದ ಪ್ರಧಾನಿ ಎಂಬ ಹಣೆಪಟ್ಟಿಗೆ ಪಾತ್ರರಾಗಿರುವ ಮನಮೋಹನ ಸಿಂಗ್ ಮತ್ತು ಕಾಂಗ್ರೆಸ್ ಪಕ್ಷದ ಅಧ್ಯಕ್ಷೆ ಸೋನಿಯಾ ಗಾಂಧಿ ಸಂಪೂರ್ಣವಾಗಿ ವಿಫಲರಾಗಿದ್ದಾರೆ. ಇದು ಮುಂದಿನ ದಿನಗಳಲ್ಲಿ ರಾಷ್ಟ್ರದ ರಾಜಕಾರಣ ಯಾವ ಬಗೆಯ ರೂಪುರೇಷೆಗಳನ್ನು ಪಡೆಯಲಿದೆ ಎಂಬುದಕ್ಕೆ ದಿಕ್ಸೂಚಿಯಾಗಿದೆ.

[signature]

## ಕ್ರೀಡೆಯಲ್ಲಿ ಮದ್ದು

ನಮ್ಮ ದೇಶದಲ್ಲಿ ಕ್ರಿಕೆಟ್ ಪೀಡೆ ಎಷ್ಟೆಂದರೆ ಇಪ್ಪತ್ತು ವರ್ಷಗಳ ಹಿಂದೆ ಗೆದ್ದಿದ್ದ ಒಂದು ಪಂದ್ಯ ಅಥವಾ ಸರಣಿಯ ಬಗ್ಗೆ ಸತತವಾಗಿ ಒಂದು ವಾರ ಪತ್ರಿಕೆಗಳು ಹಳಸಲು ವರದಿ, ಕತೆ ಮತ್ತು ವ್ಯಾಖ್ಯಾನಗಳನ್ನು ಪ್ರಕಟಿಸುತ್ತಿವೆ. ಆದರೆ ದೇಶಕ್ಕೆ ಕೀರ್ತಿ ತರುವ ಸಾಮರ್ಥ್ಯವನ್ನು ಪ್ರದರ್ಶಿಸುವ ಆಟೋಟ ಸ್ಪರ್ಧೆಗಳ ಹುರಿಯಾಳುಗಳು ಉದ್ದೀಪನ ಮದ್ದು ಸೇವಿಸಿದ್ದಾರೆಂಬ ಕಾರಣಕ್ಕೆ ಪದಕಗಳನ್ನು ಕಳೆದುಕೊಳ್ಳುವುದು, ಸ್ಪರ್ಧೆಗಳಲ್ಲಿ ಭಾಗವಹಿಸಲು ಅನರ್ಹರಾಗುವುದು, ಇವೆಲ್ಲ ನಡೆಯುತ್ತಿರುವಾಗ ಆ ಇಡೀ ಪ್ರಕರಣದ ಹಿಂದು-ಮುಂದನ್ನು ಆಮೂಲಾಗ್ರವಾಗಿ ವಿಶ್ಲೇಷಿಸುವ ಕೆಲಸ ಮಾತ್ರ ನಡೆಯುತ್ತಿಲ್ಲ. ಯಾವನೋ ವಿದೇಶಿ ತರಬೇತುದಾರ ಈ ಸನ್ನಿವೇಶಕ್ಕೆ ಮೂಲಕಾರಣ ಎನ್ನುವುದು ಹಾಸ್ಯಾಸ್ಪದ. ಇನ್ನೂ ಮೂಲಭೂತವಾಗಿ, ಈ ಸ್ಪರ್ಧಿಗಳು ಉದ್ದೀಪನ ಮದ್ದು ಸ್ವೀಕರಿಸಿದ್ದರೆಂಬುದು ಶತಸ್ಸಿದ್ಧವೆ? ಅದೇಕೆ ಇಷ್ಟು ತಡವಾಗಿ ಹೊರಬಂತು? ಸ್ಪರ್ಧಿಗಳನ್ನು ಹೊರಗಿಡಲು ಹುನ್ನಾರವೇನಾದರೂ ಉಂಟೆ? ಎಲ್ಲದರ ವಿಶ್ಲೇಷಣೆ ಅಗತ್ಯ.

[signature]

ಈ ತಿಂಗಳು (೩ನೇ ಪುಟದಿಂದ)

ನಮ್ಮ ದೇಶವೂ ಸ್ವಲ್ಪ ಸಮಾಧಾನದಿಂದ ಉಸಿರಾಡಬಹುದು, ಸ್ವಾತಂತ್ರ್ಯೋತ್ಸವವನ್ನು ಉತ್ಸಾಹದಿಂದ ಆಚರಿಸಬಹುದು.

* * *

ನಮ್ಮ ದೇಶದಿಂದ ಕೆಲವು ದುಷ್ಟ ಬ್ಯಾಂಕ್ ದೇಶಗಳಾದ ಸಿಟ್ಸರ್ಲೆಂಡ್ ಇತ್ಯಾದಿಗಳಿಗೆ ಹಣದ ಹೊಳೆ ಹರಿದಿದೆ, ಅಲ್ಲಿ ನಮ್ಮ ನೀರು ಸಾಗರದಷ್ಟು ಶೇಖರವಾಗಿದೆ, ಅದನ್ನು ನಮ್ಮ ದೇಶದೊಳಕ್ಕೆ ಮರು-ಹರಿಸಿಕೊಳ್ಳಲು ಕಾಲುವೆಗಳನ್ನು ತೋಡಬೇಕು. ಅದಕ್ಕಾಗಿ ಅಣ್ಣಾ, ಬಾಬಾ, ಮುಂತಾದವರು ಉಪವಾಸ ಮಾಡಲು ಮುಂದಾದ್ದು ಒಂದು ರೀತಿಯ ಚಳುವಳಿ. ಆದರೆ ನಮ್ಮ ದೇಶದಲ್ಲೇ ಇದ್ದೂ ನಮ್ಮದಲ್ಲದ ಸಂಪತ್ತು ಎಷ್ಟೊಂದಿದೆ! ಸಾಯಿಬಾಬಾ ಪುಟ್ಟಪರ್ತಿಯಲ್ಲಿ ಚಿಟಿಕೆ ಹೊಡೆದೂ ಹೊಡೆದೂ ಕೋಟಿಗಟ್ಟಲೆ ಹಣ, ಕಿಲೋಗಟ್ಟಲೆ ಚಿನ್ನ, ಎಲ್ಲವನ್ನೂ ತಮ್ಮ ಯಜುರ್ವೇದ ಮಂದಿರದಲ್ಲಿ ತುಂಬಿಡಲು ಪವಾಡವೋ ಎಂಬಂತೆ ಸೃಷ್ಟಿಸಿಕೊಂಡಿದ್ದರೆಂಬುದು ಈಗ ಬಹಿರಂಗವಾಗಿದೆ. ಅತ್ತ ರಾಮದೇವ್ ಅಪಾರ ಸಂಪತ್ತು ಗಳಿಸಿದ್ದಾರೆ. ತಿರುಪತಿಯಂತೂ ಇದ್ದೇ ಇದೆ. ಈಗ ತಿರುವನಂತಪುರದ ಪದ್ಮನಾಭಸ್ವಾಮಿಯ ಬಳಿ ಅವನ ''ದಾಸರು'', ಅಂದರೆ ತಿರುವಾಂಕೂರಿನ ಮಹಾರಾಜರ ಸಂತತಿ, ಶೇಖರಿಸಿದ ಬೆಟ್ಟದಷ್ಟು ಬೆಳ್ಳಿ, ಚಿನ್ನ, ಎಲ್ಲಾ ದೊರಕಿದೆ. ಎಂದೋ ಜೈಲಿಗೆ ಹೋಗಬಹುದಾಗಿದ್ದ, ಆದರೆ ಬಹುಶಃ ಎಂದೂ ಹೋಗದ, ಕಂಚಿ ಸ್ವಾಮಿ ಜಯೇಂದ್ರ ಹೇಳಿದ್ದಾರೆ, ಅದೆಲ್ಲಾ ಪದ್ಮನಾಭನದು, ಆದ್ದರಿಂದ ರಾಜಮನೆತನದ್ದು, ಎಂದು. ಸೋಜಿಗವೆಂದರೆ ಹಿಂದೆ ಭಾರತೀಯ ಇತಿಹಾಸ ಸಂಶೋಧನಾ ಮಂಡಲಿಯ ಅಧ್ಯಕ್ಷರಾಗಿ ಕೆಲಕಾಲ ಆ ಮಂಡಲಿಗೆ ಮಣ್ಣು ಮುಕ್ಕಿಸಿದ್ದ ಎಂ.ಜಿ.ಎಸ್. ನಾರಾಯಣನ್ ಸಹ ಜಯೇಂದ್ರರ ಮಾತನ್ನೇ ಉಚ್ಚರಿಸಿದ್ದಾರೆ. ಇವರಾರಿಗೂ ಇದೆಲ್ಲಾ ಈ ದೇಶದ ಜನರಿಂದ ಉತ್ಪಾದಿತವಾಗಿ ಶೇಖರಗೊಂಡ ಸಂಪತ್ತು ಎನಿಸುವುದಿಲ್ಲವೇಕೆ ? ನಮ್ಮ ದೇಶದಲ್ಲಿ ಒಬ್ಬ ''ದಾಸ'' ಮತ್ತು ಅವನ ಮನೆತನ ಇಷ್ಟೊಂದು ಸಂಪತ್ತು ಗಳಿಸಲು ಸಾಧ್ಯವಾಗಿದೆಯಾದ್ದರಿಂದ ಜನರೆಲ್ಲಾ ದಾಸರಾಗಿ ಉಳಿಯುವುದೇ ಹಿತಕರವೆಂದು ಸ್ವಾಮಿಗಳೆಲ್ಲರ ಭಾವನೆ ಇರಬೇಕು. ಆ ಭಾವನೆಯನ್ನು ಸರ್ವೋಚ್ಚ ನ್ಯಾಯಾಲಯವು ತೊಡೆದುಹಾಕುತ್ತದೆಂದು ನಿರೀಕ್ಷಿಸೋಣ. ಪ್ರೊಫೆಸರ್ ಕೆ. ಎನ್. ಪಣಿಕ್ಕರ್ ಈ ಇಡೀ ಪ್ರಕರಣದಲ್ಲಿ ಜನಪರ ಮತ್ತು ಸಂಸ್ಕೃತಿಪರ ನಿಲುವು ತಾಳಿದ್ದಾರೆ. ಅವರೊಡನೆ ದನಿಗೂಡಿಸಿ ಸಂಪತ್ತನ್ನು ಚಿರಕಾಲ ಉಳಿಸಲು ಮುಂದಾಗಬೇಕಾದ್ದು ಎಲ್ಲ ನಾಗರಿಕರ ಕರ್ತವ್ಯ.

* * *

ಸಂಪತ್ತೆಂದರೆ ಚಿನ್ನಕ್ಕಿಂತಲೂ ಕಬ್ಬಿಣದ ಅದಿರು ಉತ್ಕೃಷ್ಟವಾದುದೆಂದು ಕರ್ನಾಟಕದ ರಾಜಕೀಯ ನಾಯಕರಿಗೆ ತಿಳಿದಿದೆ. ಆದ್ದರಿಂದ ಪಕ್ಷಭೇದ ಮರೆತು ದೊಡ್ಡ ರಾಜಕೀಯ ಪಕ್ಷಗಳು ಅದಿರಿನ ಮಾಲೀಕರ ಬೆನ್ನು ಹತ್ತಿವೆ. ಆದರೆ ರೆಡ್ಡಿಗಳಾಗಲಿ, ಅಲ್ಲಂಗಳಾಗಲಿ, ಘೋರ್ಪಡೆಗಳಾಗಲಿ, ಲಾಡ್‌ಗಳಾಗಲಿ, ಅದಿರಿನ ನಿಜ ಮಾಲೀಕರಲ್ಲ. ದೇಶದ ಸಂಪತ್ತನ್ನು ಲಪಟಾಯಿಸಿರುವವರು ಇವರೆಲ್ಲ. ಅದಕ್ಕೆ ಅನುವಾಗುವ ಕಾನೂನು ರಚಿಸಿರುವವರೂ ಅವರೇ. ಈಗಲಾದರೂ ಅದಿರನ್ನು ರಾಷ್ಟ್ರೀಕರಿಸಬೇಕೆಂದು ಕೆಲವು ರಾಜಕೀಯ ನಾಯಕರು ತಮ್ಮ ತಮ್ಮಲ್ಲೇ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದಾರಂತೆ. ಅದನ್ನು ಚಿವುಟಿಹಾಕಲು ಯೋಜನಾ ಆಯೋಗದ ಅಹ್ಲುವಾಲಿಯ ಮುಂತಾದವರ ಸೈನ್ಯ ಸಿದ್ಧವಿದೆ. ಅದಿರಿನ ಮಾಲೀಕರನ್ನು ಅಲ್ಲಾಡಿಸುವ ಪಣ ತೊಟ್ಟಿರುವುದಾಗಿ ಹೇಳುವ ಲೋಕಾಯುಕ್ತ ಸಂತೋಷ ಹೆಗ್ಡೆಯವರ ಬಳಿ ಧನಂಜಯಕುಮಾರ್ ಮತ್ತು ಆಚಾರ್ಯ ಇನ್ನೊಬ್ಬ ಧೀಮಂತ ದೇಶಭಕ್ತನ ಜೊತೆ ಹೋಗಿದ್ದರೆಂದು ಬಹಳ ತಡವಾಗಿ ಹೆಗ್ಡೆ ಹೇಳಿದ್ದಾರೆ. ಅವರ ಮನೆಗೆ ಈ ಅಭ್ಯಾಗತರು ದಯಮಾಡಿಸಿದ್ದ ಮಾರನೆಯ ದಿನವೇ ಹೆಗ್ಡೆ ಇದನ್ನೇಕೆ ಬಹಿರಂಗಗೊಳಿಸಲಿಲ್ಲವೆಂಬುದು ಅವರ ಲೆಕ್ಕಾಚಾರ ತಿಳಿದವರಿಗೆ ಮಾತ್ರ ತಿಳಿದಿರಬಹುದು. ಲೋಕಾಯುಕ್ತ ಪದವಿಯಿಂದ ನಿರ್ಗಮಿಸುವ ಮುನ್ನ ಇದನ್ನು ಹೇಳಿಬಿಡಲು ಅವರಿಗೆ ಪ್ರೇರಣೆ ದೊರಕಿದ್ದು ಸಂತೋಷದ ವಿಷಯ. ಮೊದಲೇ ಆತ 'ಧನಂ ಜಯ' ಆದ್ದರಿಂದ ಅದಿರಿನ ಧನವಂತರಿಂದ ಪೋಷಿಸಲ್ಪಟ್ಟ ಯಡಿಯೂರಪ್ಪನವರ ಪರವಾಗಿ ಧನಂಜಯಕುಮಾರ್ ನೇರವಾಗಿ ಸಂತೋಷ ಹೆಗ್ಡೆಯವರ ಬಳಿ ತೆರಳಬೇಕಾದ್ದು ಉಚಿತವೋ ಅನುಚಿತವೋ ಎಂಬ ಪ್ರಶ್ನೆಗೆ ಎರಡು ಉತ್ತರಗಳಿಲ್ಲ, ಇರುವುದೇ ಒಂದು. ಇವರಲ್ಲವೆ ಬಾಬಾ ರಾಮದೇವ್ ಜೊತೆ ನಿಂತು ಭ್ರಷ್ಟಾಚಾರದ ವಿರುದ್ಧ ಸಮರ ಸಾರಬೇಕು !

* * *

ಮಾರನ್, ಅಂಬಾನಿ, ಚಿದಂಬರಂ, ಎಲ್ಲಾ ಹಾರ್ವರ್ಡ್‌ನಲ್ಲಿ ಕಲಿತ ಪ್ರತಿಭಾವಂತರು. ಎ. ರಾಜ ಮತ್ತು ಕನಿಮೋಳಿ ಎಲ್ಲಿ ಕಲಿತರೋ ತಿಳಿಯದು. ಚಿನ್ನ ಮತ್ತು ಕಬ್ಬಿಣದ ಅದಿರಿನಷ್ಟೇ ಘನವಾದ್ದು ಮತ್ತು ಗಟ್ಟಿಯಾದ್ದು ೨-ಜಿ ಸ್ಪೆಕ್ಟ್ರಂ ಎಂಬುದು ಇವರಿಗೆಲ್ಲಾ ಗೊತ್ತು. ದೀರ್ಘಕಾಲಿಕ ನ್ಯಾಯಾಲಯ ವ್ಯವಹಾರದಲ್ಲಿ ಅವರ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳುವುದಿಲ್ಲವೆಂಬ ಭರವಸೆ ಅವರಿಗಿದ್ದಂತೆ ತೋರುತ್ತದೆ. ಇವರಷ್ಟೇ ಪ್ರತಿಭಾವಂತ ಕಪಿಲ್ ಸಿಬಲ್ ತನ್ನ ಗಟ್ಟಿ ಚಿನ್ನ ಎಲ್ಲಿ ಉತ್ಪಾದಿಸಿಕೊಳ್ಳುತ್ತಿದ್ದರೋ ಇನ್ನೂ ಪೂರ್ತಿ ಖಚಿತವಾಗಿಲ್ಲ. ಅಂತೂ ಎಲ್ಲಾ ಗಂಟು ಕದ್ದವರೇ! ಇವರೆಲ್ಲರ ನಡುವೆ 'ಏರ್‌ಸೆಲ್' ಕಂಪನಿಯ ಧೀರ ಸಿ. ವಿ. ಶಿವಶಂಕರನ್ ಎಂಬೊಬ್ಬನಿದ್ದಾನೆ. ಆತನ ಅಂಬೋಣ ಏನೆಂದರೆ ತನ್ನ ಷೇರುಗಳನ್ನು ಮಾರಲು ಮಾರನ್ ಒತ್ತಡ ತಂದ ಎಂಬುದು. ಈತನೇನು ಅನಕ್ಷರಸ್ಥನೆ ? ಆಗಲೆ ಅದನ್ನು ಬಹಿರಂಗಗೊಳಿಸಿ ಮಾರಲು ನಿರಾಕರಿಸಬಹುದಾಗಿತ್ತಲ್ಲವೆ ? ಬೇರಿನ್ನೇನು ಆಮಿಷಕ್ಕೆ ಬಲಿ ಬಿದ್ದನೋ ಅದನ್ನೂ ಹೇಳಿಬಿಟ್ಟರೆ ಒಳ್ಳೆಯದು.

* * *

ನೂರು ಹಗರಣಗಳ ಸರಮಾಲೆ ತೊಟ್ಟಿರುವ ಮನಮೋಹನ ಸಿಂಗ್ ಕಾಂಗ್ರೆಸ್ ಪಕ್ಷದ ಆತ್ಮಾಹುತಿ ದಳದ ಸ್ವಯಂಸೇವಕ. ಅವರ ಮುಂದಿನ ಮಹತ್ಸಾಧನೆ ಭಾರತೀಯ ಜನತಾ ಪಕ್ಷವನ್ನು ಕೇಂದ್ರದಲ್ಲಿ ಆಡಳಿತಕ್ಕೆ ತರುವುದು ಎಂಬ ಭಾವನೆ ದಟ್ಟವಾಗುತ್ತಿದೆ. ಅದನ್ನು ವಿಫಲಗೊಳಿಸಲು ಜನ ತಯಾರಾಗಬೇಕಾಗಿದೆ. ಚುನಾವಣೆ ಘೋಷಿಸಿದ ನಂತರ ಎಡಪಕ್ಷಗಳೂ ಸೇರಿದಂತೆ ಕೆಲವು ಚಿಕ್ಕಚಿಕ್ಕ ಪಕ್ಷಗಳು ಮೂರನೆಯ ರಂಗ ರಚಿಸಿಕೊಳ್ಳುವತ್ತ ಸಾಗುವುದು ಮತ್ತು ಸೋಲುವುದು ಈಗಾಗಲೆ ಇತಿಹಾಸವಾಗಿದೆ. ಈ ಬಾರಿ ಹಾಗಾಗಕೂಡದೆಂಬ ಗಂಭೀರ ಆಶಯವಿದ್ದರೆ ಇಂದಿನಿಂದಲೇ ಈ ಪಕ್ಷಗಳೆಲ್ಲ ಜಂಟಿಯಾಗಿ ಚಳುವಳಿಗಳನ್ನು ಹಮ್ಮಿಕೊಳ್ಳಬೇಕು, ಅವುಗಳಲ್ಲಿ ಸಕ್ರಿಯವಾಗಿ ಭಾಗವಹಿಸಬೇಕು. ಸಾಂಕೇತಿಕ ''ಹೋರಾಟಗಳು'' ಸಾಕಷ್ಟು ಹಳಸಿವೆ, ಕೇಂದ್ರದಿಂದ ಕರೆ ಕೊಡಲಾಗಿದೆಯೆಂದು ಶಾಸ್ತ್ರೋಕ್ತವಾಗಿ ಪ್ರತಿಭಟನೆ ನಡೆಸುವುದು ವ್ಯಂಗ್ಯಕ್ಕೀಡಾಗಿದೆ. ಒಡಿಶಾದಲ್ಲಿ ಪಾಸ್ಕೊ ವಿರುದ್ಧ ಭಾರತೀಯ ಕಮ್ಯುನಿಸ್ಟ್ ಪಕ್ಷದ ಮುಂದಾಳುಗಳು ಸಂಘಟಿಸುತ್ತಿರುವ ರೀತಿಯಲ್ಲಿ ದೇಶದಲ್ಲೆಲ್ಲಾ ಜನವಿರೋಧಿ ನೀತಿಗಳ ವಿರುದ್ಧ ಎಲ್ಲ ಪಕ್ಷಗಳ ಜಂಟಿ ಹೋರಾಟ ನಡೆಯಬೇಕು. ಆಗ ಮಾತ್ರ ಮನಮೋಹನ ಸಿಂಗ್ ಸೋಲು ಸುಷ್ಮಾ ಸ್ವರಾಜ್‌ರ ಗೆಲುವಾಗಿ ಪರಿಣಮಿಸದ ಸಾಧ್ಯತೆ ಇರುತ್ತದೆ. ಪೆರುವಿನಲ್ಲಿ ಹುಮಾಲ ಗೆದ್ದಂತೆ ನಮ್ಮಲ್ಲಿ ''ಮೂರನೆಯ ರಂಗ'' ಗೆಲ್ಲಬೇಕಾದರೆ ಜಂಟಿ ಹೋರಾಟಗಳು ಇಂದೇ ಆರಂಭವಾಗಬೇಕು. ಮಾಧ್ಯಮಗಳು ಇದನ್ನು ತಕ್ಷಣದಲ್ಲಿ ಬೆಂಬಲಿಸುವುದಿಲ್ಲ, ಆದರೂ ಹೋರಾಟ ಸಂಘಟಿಸಬೇಕು. ಪೆರುವಿನಲ್ಲಿ 'ಎಲ್ ಕಮರ್ಸಿಯೊ' ಎಂಬ ಪ್ರಸಿದ್ಧ ಪತ್ರಿಕೆಗೆ ಖ್ಯಾತ ಸಾಹಿತಿ, ನೊಬೆಲ್ ಪ್ರಶಸ್ತಿ ವಿಜೇತ, ವರ್ಗಾಸ್ ಯೋಸ ಅಂಕಣ ಬರೆಯುತ್ತಿದ್ದ. ಬಂಡವಳಿಗರ ಬೇರೆ ಪತ್ರಿಕೆಗಳಂತೆ ಇದೂ ಹುಮಾಲ ವಿರುದ್ಧ ವಿಷಕಾರಲು ಹೊರಟಾಗ ಯೋಸ ಅಂಕಣ ಬರೆಯುವುದನ್ನು ನಿಲ್ಲಿಸಿದ. ನಮ್ಮ ಪತ್ರಿಕೆಗಳಿಗೆ ನೊಬೆಲ್ ವಿಜೇತ ಅಂಕಣಕಾರರಿಲ್ಲ, ಕೇವಲ ಒಂದಷ್ಟು ಜನ ಜಗದ್ಗುರುಗಳಂತೆ ಅಂಕಣಕಾರರಾಗಿದ್ದಾರೆ. ಮೂರನೆಯ ರಂಗದ ಪರವಾಗಿ ಅವರು ಅಂಕಣಗಳನ್ನು ನಿಲ್ಲಿಸಿ ಸ್ವಂತದ ಚಿಂತನೆಗೆ ಬದ್ಧರಾಗುತ್ತಾರೆಂದು ಆಶಿಸೋಣ.

* * *

ವಿಶ್ವಸಂಸ್ಥೆಯ ಭದ್ರತಾ ಮಂಡಲಿಯು ಅಮೆರಿಕಾದ ಆಣತಿಯಂತೆ ಹೊಸದೊಂದು ನಿರ್ಣಯ ಅಂಗೀಕರಿಸಿದೆ. ಈವರೆಗೆ ಅಲ್ ಖೈದಾ ಮತ್ತದರ ಸಹಯೋಗದಲ್ಲಿದ್ದ ಎಲ್ಲ ಸಂಘಟನೆಗಳ ವಿರುದ್ಧವೂ ಆರ್ಥಿಕ ದಿಗ್ಬಂಧನವಿದ್ದುದನ್ನು ಸ್ವಲ್ಪ ಸಡಿಲಿಸುವ ನಿರ್ಣಯ ಅದು. ಆಫ್ಘಾನಿಸ್ತಾನದ ತಾಲಿಬಾನ್ ಸಹ ದಿಗ್ಬಂಧನಕ್ಕೆ ಗುರಿಯಾಗಿತ್ತು. ಈಗ ಅದನ್ನು ಅಲ್ ಖೈದಾದಿಂದ ಪ್ರತ್ಯೇಕಗೊಳಿಸಿ ದಿಗ್ಬಂಧನಕ್ಕೆ ಗುರಿಯಾಗದಂತೆ ಮಾಡಲಾಗಿದೆ. ತಾಲಿಬಾನ್ ಮೂಲತಃ ಒಂದು ಜನವಿರೋಧಿ ಅಂಧಶ್ರದ್ಧೆಯ ಸಂಘಟನೆ. ಅದರ ಚರಿತ್ರೆ ಕರಾಳವಾದ್ದು. ಅಮೆರಿಕಾ ಅದನ್ನು ಪೋಷಿಸಿತು, ನಂತರ ಶಿಕ್ಷಿಸಿತು. ಈಗ ಮತ್ತೆ ಪೋಷಿಸಹೊರಟಿದೆ. ತಾಲಿಬಾನ್ ಗೆಲುವು ಭಾರತಕ್ಕೆ ಮಾರಕವಾದ್ದು. ಆದರೆ ಭದ್ರತಾ ಮಂಡಲಿಯಲ್ಲಿ ಭಾರತವು ಅಮೆರಿಕಾ ಜೊತೆ ತಾಲಿಬಾನ್ ಪರವಾಗಿ ಮತ ಚಲಾಯಿಸಿತು. ಇದು ಮನಮೋಹನ ಸಿಂಗ್ ಸರ್ಕಾರದ ವಿದೇಶಾಂಗ ಅನೀತಿ.

* * *

'ನಿಯೋಲಿಬರಲ್ ಪಾಲಿಸಿ' ಎಂಬ ಭೂತ ಬಡಜನರನ್ನು ಕಿತ್ತು ತಿನ್ನುತ್ತಿದೆ. ಈಚಿನ ಒಂದು ಮೊಕದ್ದಮೆಯಲ್ಲಿ ಸರ್ವೋಚ್ಚ ನ್ಯಾಯಾಲಯ ಅದನ್ನು ಟೀಕಿಸಿತು. ''ಟೈಂಸ್ ಆಫ್ ಇಂಡಿಯ'' ಪತ್ರಿಕೆ ಆದರಿಂದ ಉದ್ವಿಗ್ನಗೊಂಡು ನ್ಯಾಯಾಲಯವಾಗಲಿ ಬುದ್ಧಿಜೀವಿಗಳಾಗಲಿ ಆ ಪಾಲಿಸಿಯನ್ನು ಮುಂದಿಟ್ಟುಕೊಂಡು ರಾಜಕೀಯ ಟೀಕೆ ಮಾಡಕೂಡದೆಂದು ಉದ್ಗರಿಸಿತು. ಖಾಸಗಿ ಉದ್ದಿಮೆದಾರರ ನಾಲ್ಕು ಇಂಗ್ಲಿಷ್ ಟಿ.ವಿ. ಚಾನಲ್‌ಗಳು ಇನ್ನೂ ಮುಂದೆ ಹೋಗಿ ಜೈಲಿನಲ್ಲಿರುವ ಕೆಲವು ''ದೊಡ್ಡವರ'' ಪರ ನಿಂತವು. ಅಪರಾಧ ಸಾಬೀತಾಗುವ ಮೊದಲೇ ಯಾರನ್ನಾದರೂ ಜೈಲಿಗೆ ಕಳಿಸಿ ತಿಂಗಳುಗಟ್ಟಲೆ ಜಾಮೀನು ನೀಡದಿರುವುದು ಸರಿಯಲ್ಲವೆಂದು ನೀತಿಬೋಧೆ ಮಾಡಿದವು. ಸಾವಿರಾರು ಬಡಜನ ಹತ್ತಾರು ವರ್ಷಗಳ ಕಾಲ ವಿಚಾರಣೆಯೇ ಇಲ್ಲದೆ ಕೊಳೆಯುತ್ತಿರುವುದು ಈ ಚಾನೆಲ್‌ಗಳ ಕ್ಯಾಮೆರಾಗಳಿಗೆ ಕಾಣದು. ನ್ಯಾಯಾಲಯ ಸಾಮಾಜಿಕ ಕಾಳಜಿ ತೋರುವುದು ಈ ಚಾನೆಲ್‌ಗಳಿಗೆ ಅಪಥ್ಯ. ನ್ಯಾಯಾಲಯ ಇದಕ್ಕೆ ಪ್ರತಿಕ್ರಿಯಿಸಿ ಇಂತಹ ಚಾನೆಲ್ ಟೀಕೆ ಸಲ್ಲದೆಂದು ಹೇಳಿತು. ಜೊತೆಗೆ, ಗೋದಾಮುಗಳಲ್ಲಿ ಕೊಳೆಯುತ್ತಿರುವ ಆಹಾರಧಾನ್ಯಗಳನ್ನು ಬಡವರಿಗೆ ವಿತರಿಸಬೇಕೆಂದು ಪ್ರಧಾನಿಗೆ ಸೂಚಿಸಿತು. ಹಾಗೆ ಹೇಳುವುದು ನ್ಯಾಯಾಲಯದ ವ್ಯಾಪ್ತಿಗೆ ಹೊರತಾದ್ದೆಂದು ಪ್ರಧಾನಿ ಪ್ರತಿಕ್ರಿಯಿಸಿದರು. ಗೋದಾಮುಗಳಿಂದ ಶೇಕಡ ೧೦ರಷ್ಟು ಧಾನ್ಯವನ್ನು ಮಾರುಕಟ್ಟೆಗೆ ಬಿಡುಗಡೆ ಮಾಡಿ ೧೦ ಲಕ್ಷ ಟನ್ ಧಾನ್ಯವನ್ನು ರಫ್ತುಮಾಡುವ ತರಾತುರಿ ಅವರದು. ಬಡವರಿಗೆ ಕೊಡಲು ಮಾತ್ರ ಕೊಸರಾಡುತ್ತಾರೆ. ಇನ್ನೊಂದು ಚಮತ್ಕಾರದಿಂದ ಬಡತನ ರೇಖೆಗಿಂತ ಕೆಳಗಿರುವವರನ್ನು ಮೇಲೆತ್ತಿದ್ದಾರೆ : ರೇಖೆಯನ್ನು ಸ್ವಲ್ಪ ಕೆಳಕ್ಕೆ ಇಳಿಸುವ ಮೂಲಕ. ಆ ರೇಖೆಯನ್ನೆ ಕೆಳಗಿಳಿಸಿದರೆ, ಅಷ್ಟೊಂದು ಜನರನ್ನು ಬಡತನದಿಂದ ಮೇಲೆ ಎತ್ತಿದಂತಾಯಲ್ಲ! ಭ್ರಷ್ಟಾಚಾರದ ವಿದೇಶೀ ಭಂಡಾರದ ಕಪ್ಪು ಹಣವನ್ನು ಪತ್ತೆಮಾಡುವ ವಿಷಯವಾಗಿ ಸುಪ್ರೀಂಕೋರ್ಟು ಸಮಿತಿ ರಚಿಸುವುದು ಅದರ ವ್ಯಾಪ್ತಿಯಲ್ಲಿ ಬರುವುದಲ್ಲ ಅನ್ನುತ್ತಾರೆ ಪ್ರಧಾನಿ. ಒಟ್ಟಿನಲ್ಲಿ ಬೂರ್ಶ್ವಾ ಸಂಸಾರದ ನಡುವೆ ಬೆಂಕಿ ಬಿದ್ದಿದೆ. ರಾಜಕೀಯ-ನ್ಯಾಯಾಂಗ-ಉದ್ಯಮ-ಉದ್ದಿಮೆಗಳ ನಡುವೆ ಗಂಭೀರವಾದ ಬಿರುಕು ಉಂಟಾಗಿದೆ. ಇದು ಉಂಟುಮಾಡಿದ ಬಿಕ್ಕಟ್ಟಿನ ಪರಿಣಾಮವಾಗಿ, ಸರ್ಕಾರದ ಕೆಲಸಗಳು ಕುಂಠಿತವಾಗಿವೆ. ಭೂಮಿಯನ್ನು ವಶೀಕರಣ ಮಾಡುವಲ್ಲಿ ಎಲ್ಲ ಸರ್ಕಾರಗಳೂ ವಿಫಲವಾಗುತ್ತಿವೆ. ಹಾಗಾದರೆ ಮಧ್ಯವರ್ತಿಗಳೂ, ರಾಜಕೀಯ ಕಾರ್ಯಕರ್ತರೂ, ಏಜೆಂಟರುಗಳೂ ಕೆಲಸ ಕಳೆದುಕೊಂಡು ವಿಫಲರಾಗುತ್ತಿದ್ದಾರೆಯೆ? ರಾಜಕೀಯ ತಿಳುವಳಿಕೆಯಿಂದ ಪ್ರೇರಿತವಾಗದ ರೈತ ಚಳುವಳಿಗಳು, ಭ್ರಷ್ಟಾಚಾರ ವಿರೋಧಿ ಆಂದೋಳನಗಳು ಸಫಲವಾಗಬಲ್ಲವೆ ? ಅಥವಾ ಇವು ರಾಜಕೀಯ ಪ್ರಜ್ಞಾವಲಯದಲ್ಲಿ ಮೂಲಭೂತ ಪರಿವರ್ತನೆ ಉಂಟುಮಾಡಬಲ್ಲವೆ? ಎಡಪಕ್ಷಗಳ ನೇತೃತ್ವವನ್ನು ಜನ ಒಪ್ಪಿಕೊಳ್ಳುವಷ್ಟು ಪ್ರಬುದ್ಧರಾಗಿದ್ದಾರೆಂದು ತಿಳಿಯಬೇಕೆ ? ಈ ಮುಂತಾದ ಪ್ರಶ್ನೆಗಳಿಗೆ ಉತ್ತರ ಕಾಣುವುದು ತುರ್ತಾದ ವಿಷಯ.

* * *

ಬೂರ್ಶ್ವಾ ಪ್ರಜಾಪ್ರಭುತ್ವ ಪ್ರಕ್ರಿಯೆಯಲ್ಲಿ, ಬಡಜನರ ಒಟ್ಟು ಸಂಖ್ಯೆ ಶೇಕಡ ೩೦, ಅಷ್ಟೆ, ಎಂದಾದರೆ - ನಾವು ಅದು ಶೇಕಡ ೪೫ಕ್ಕೂ ಹೆಚ್ಚು ಅನ್ನುತ್ತೇವೆ, ಹಾಗಿರಲಿ – ಈ ಶೇಕಡ ೩೦ ಜನರನ್ನು ನಿರಂತರ ಹೊರಗಿಟ್ಟು ಉಳಿದವರು ತಮ್ಮ ರಾಜಕೀಯವನ್ನು ನಡೆಸಿಕೊಳ್ಳಲು ಶಕ್ತರಾಗಬಲ್ಲರೆ ? ಅದರಲ್ಲೂ ಈ ಶೇಕಡ ೩೦ ಯಾವ ರೀತಿಯಲ್ಲೂ ಸಾಮಾನ್ಯ ಹಿತಾಸಕ್ತಿಯನ್ನು ಪ್ರತಿಬಿಂಬಿಸುವ ಒಂದೇ ಬ್ಲಾಕ್ ಆಗಿ ಇಲ್ಲದಿರುವುದು ಸದ್ಯಕ್ಕಂತೂ ಸ್ಪಷ್ಟ. ಈ ಜನರಲ್ಲಿ ಉದಿಸಿ ಬರುವ ಪ್ರಗತಿಗಾಮಿ ಬುದ್ಧಿವಂತ ಜನರು ಆಡಳಿತವರ್ಗದವರೊಡನೆ ಬಹುಬೇಗ ಸೇರಿಕೊಳ್ಳುವ ಪ್ರವೃತ್ತಿಯನ್ನು ಇತ್ತೀಚೆಗೆ ಹೆಚ್ಚು ಹೆಚ್ಚು ಹೊರಗೆಡವಲಾರಂಭಿಸಿರುವುದು ಒಂದು ದುರಂತ. ದಲಿತ ಚಳುವಳಿ ಎಂಬುದು ಎಡಪಂಥೀಯ ಚಳುವಳಿಗೆ ಪರ್ಯಾಯವಲ್ಲ, ಅವೆರಡೂ ಪರಸ್ಪರ ಪೂರಕ ಹಾಗೂ ದಲಿತ ಪದ ಕೇವಲ ಜಾತಿಶ್ರೇಣಿಯ ಕೆಳಸ್ತರಕ್ಕೆ ಮಾತ್ರ ಅನ್ವಯಿಸುವುದಲ್ಲ, ಅದು ಎಲ್ಲ ಜಾತಿಯೊಳಗಿನ ಶೋಷಿತ ಬಡವರನ್ನು ಪ್ರತಿನಿಧಿಸುವ ಪದ. ಜಾತಿಗೆ ಮೀರಿದ ವರ್ಗದ ಸಂಬಂಧ ಅದು. ಇದರ ಆಧಾರದ ಮೇಲೆ ಸಂಘಟನೆಗೆ ಇಳಿದರೆ, ಅದರ ಸಂಖ್ಯೆ ಹಿಗ್ಗಿ, ಅದು ಇದೇ ಬೂರ್ಶ್ವಾ ಪ್ರಜಾಪ್ರಭುತ್ವದ ಒಳಗೂ ಅಧಿಕಾರ ಪಡೆಯುವಂಥ ಚಳುವಳಿ ನಡೆಸಬಹುದು. ಹಾಗೂ ಈ ಸಮಾಜದ ಪರಿವರ್ತನೆಯನ್ನು ತರಬಲ್ಲ ಕ್ರಾಂತಿಕಾರಿ ಶಕ್ತಿಯಾಗಬಹುದು. ಅಂಥ ವಿಶಾಲ ತಳಹದಿಯ ಸಂಘಟನೆಗೆ ಇಂದು ಸೂಕ್ತಕಾಲ ಒದಗಿಬಂದಿದೆ. ಈ ಶಕ್ತಿಯ ಬೆಳವಣಿಗೆಯನ್ನು ಇಷ್ಟುದಿನ ಒಡಕು ನೀತಿಗಳಿಂದ ತಡೆಹಿಡಿದಿರುವ ಬೂರ್ಶ್ವಾ ವರ್ಗ, ದೇಶದಲ್ಲೂ, ಜಗತ್ತಿನಾದ್ಯಂತವೂ ತಾನೆ ಬಿಕ್ಕಟ್ಟಿಗೆ ಸಿಕ್ಕಿ, ಶಿಥಿಲವಾಗಿದೆ, ಶಕ್ತಿಹೀನವಾಗಿದೆ. ಅದು ದುರ್ಬಲವಾಗಿರುವಾಗ ಅದನ್ನು ಬಗ್ಗುಬಡಿಯುವುದು ಸಾಧ್ಯ. ಅವರು ತಮ್ಮ ಕಡೆಗೆ ಸೆಳೆದುಕೊಂಡ ಸಾಕಷ್ಟು ಸಂಖ್ಯೆಯ ಕೆಳ ಮಧ್ಯಮ ವರ್ಗದವರು ಈಗ ಬಡತನರೇಖೆಯನ್ನು ವಾಪಸ್ ಮುಟ್ಟಿದ್ದಾರೆ. ರೊಚ್ಚಿಗೆದ್ದಿದ್ದಾರೆ. ಅವರೂ ಹೋರಾಟಕ್ಕಾಗಿ ಜಂಟಿ ಸಂಘಟನೆಯಲ್ಲಿ ಸೇರಬಲ್ಲವರು. ಸಾಂಪ್ರದಾಯಿಕ ಹಣೆಪಟ್ಟಿಯನ್ನು ಕಿತ್ತು, ಹೊಸ ಹೆಸರಿನಲ್ಲೇ ಆದರೂ ಸರಿ, ಒಂದು ಸಂಘಟನೆಗೆ ಇಂದು ಸದವಕಾಶ ಒದಗಿಬಂದಿದೆ. ಕೇವಲ ನ್ಯಾಯಾಲಯದ ತೀರ್ಪುಗಳಿಂದ, ಅವು ಕ್ರಾಂತಿಕಾರವೇ ಆದರೂ, ಸಮಾಜ ಪರಿವರ್ತನೆ ಆಗುವುದಿಲ್ಲ, ಆದರೆ ಅವು ಪ್ರೇರಣೆ ನೀಡಬಲ್ಲವು. ಇಂಥ ಕೆಲವು ದಿಶಾಸೂಚಕ ನ್ಯಾಯಾಸ್ಥಾನದ ಹೇಳಿಕೆಗಳನ್ನು ನೀಡುವ ಕೆಲವು ನ್ಯಾಯಾಧೀಶರಿಗೆ ನಾವು ಕೃತಜ್ಞರು. ಆದರೆ ಅವರು ಹೀಗೆ ಮುಂದುವರಿಯುವುದು ದುರದೃಷ್ಟದಿಂದ ಈ ವ್ಯವಸ್ಥೆಯೊಳಗೆ ಸಾಧ್ಯವಾಗುವುದಿಲ್ಲ ಉದಾಹರಣೆಗೆ, ಭ್ರಷ್ಟಾಚಾರದ ವಿರುದ್ಧ ನಮ್ಮಲ್ಲಿ ಹೋರಾಟಗಳಿಗೆ ಕೊರತೆಯಿಲ್ಲ ಭಾರತ ಕಮ್ಯುನಿಸ್ಟ್ ಪಕ್ಷ ಕಳೆದ ಆರು ದಶಕಗಳಲ್ಲಿ ಹಲವಾರು ಬಾರಿ ಹಲವು ಕ್ಷೇತ್ರಗಳಲ್ಲಿನ ಭ್ರಷ್ಟಾಚಾರವನ್ನು ಬಹಿರಂಗ ಮಾಡಿದೆ, ಚಳುವಳಿ ನಡೆಸಿದೆ. ಅದು ಎಲ್ಲಕ್ಕಿಂತ ಮುಖ್ಯವಾಗಿ ಬೊಟ್ಟು ಮಾಡಿದ್ದು ವಾಣಿಜ್ಯಲೋಕದವರು ಲೂಟಿಮಾಡುವ ಸಾರ್ವಜನಿಕ ಸಂಪತ್ತು ಮತ್ತು ಅದಕ್ಕೆ ನೆರವಾಗುವಂಥ ಸರ್ಕಾರದ ನೀತಿಗಳ ವಿರುದ್ಧ. ಆದರೆ ಮಾಧ್ಯಮಗಳಾಗಲಿ, ಸಿವಿಲ್ ಸೊಸೈಟಿಗಳಾಗಲಿ, ಮರಿಗಾಂಧಿಗಳಾಗಲಿ ಇದಕ್ಕೆ ಬೆಂಬಲ ಸೂಚಿಸಿ ಕಣಕ್ಕೆ ಇಳಿಯಲಿಲ್ಲ. ಒಂದು ಕಾರಣ ಅದು ಎಡಪಕ್ಷಗಳಿಗೆ ರಾಜಕೀಯವಾಗಿ ಬೆಂಬಲ ಗಳಿಸಿಬಿಟ್ಟರೆ ಎಂಬ ಹೆದರಿಕೆ ಇದ್ದಿರಬಹುದು. ಆದರೆ ಇಂದು ಈ ಸಿವಿಲ್ ಸೊಸೈಟಿ ಮುಖವಾಡದಲ್ಲಿ ಭುಗಿಲೆದ್ದಿರುವ ರಂಪಕ್ಕೆ ಕಾರಣ ವೇನಿರಬಹುದು ? ಅದೇನೂ ಅಷ್ಟು ರಹಸ್ಯ ವಿಷಯವಲ್ಲ. ಆಳುವ ವರ್ಗದವರನ್ನು ಹಿಡಿದಾಡಿಸುವ ವಾಣಿಜ್ಯಲೋಕದ ಅಧಿಪತಿಗಳ ಸಂಸಾರದಲ್ಲೇ ಒಡಕಾಗಿರುವ ಸಂದರ್ಭ ಇದು. ಲೂಟಿಯ ಪ್ರಯೋಜನ ತಾತಾ, ರಿಲೈಯನ್ಸ್ ಮತ್ತಿತರರೆಲ್ಲರಿಗೂ ಸಮಾನವಾಗಿ ಆಗಲಿಲ್ಲ, ಕೆಲವರಿಗೆ ವಿಪರೀತ ಹೆಚ್ಚಾಗಿ ಸಿಕ್ಕಿ, ಕೆಲವರಿಗೆ ಹೋಲಿಕೆಯಿಂದಾಗಿ ತಮಗೆ ಸಿಕ್ಕಿದ್ದು ಕಡಿಮೆ, ಇದು ಅನ್ಯಾಯ ಎನಿಸಿದೆ. ತಾವು ಲಾಬಿಮಾಡಿ ಅಧಿಕಾರಕ್ಕೆ ತಂದ ಮಂತ್ರಿಗಳು, ಮಹಾಜನ್‌ನಿಂದ - ಮಾರನ್ - ಶೌರಿ - ರಾಜಾವರೆಗೆ, ರಾಜಾ - ತಾತಾ - ರಾಡಿಯಾ ಪ್ರಸಂಗದಲ್ಲಿ ಹೊರಬಿದ್ದಂತೆ, ತಮಗೆ ನ್ಯಾಯ ಮಾಡಿಲ್ಲ ಎನ್ನುವ ಆಕ್ರೋಶ ಉಂಟಾಗಿದೆ. ಲೂಟಿ ಮಾಡುವವರೆ ಒಬ್ಬರನ್ನೊಬ್ಬರು ದೂಷಿಸುತ್ತಾ ರಹಸ್ಯಗಳನ್ನು ಬಿಟ್ಟುಕೊಟ್ಟಿದ್ದಾರೆ. 'ಸ್ಪಿಲ್ಲಿಂಗ್ ದಿ ಬೀನ್ಸ್' ಅನ್ನಾರಲ್ಲ, ಅದೇ ಇದು. ತಲೆತಲಾಂತರದಿಂದ ನಂಬರ್ ಒನ್ ಶ್ರೀಮಂತ ಎನಿಸಿಕೊಂಡಿದ್ದ ತಾತಾ ಮನೆತನ ಈ ಹಂತಕ್ಕೆ ಏರಲು ಶತಮಾನವೇ ಬೇಕಾಯ್ತು. ನಿನ್ನೆ ಹುಟ್ಟಿದ ಅಂಬಾನಿ ಮನೆತನ, ಯಾವ ಯಾವುದೋ ಮಾರ್ಗ - ಅಪಾಮಾರ್ಗಗಳನ್ನನುಸರಿಸಿ ಒಂದೆರಡು ದಶಕದಲ್ಲಿಯೇ ತಾತಾವನ್ನು ಹಿಂದೆ ಹಾಕುವುದು ಅಂದರೇನು ? ಆದ್ದರಿಂದ ರಹಸ್ಯಗಳು ಹೊರಚಲ್ಲಿದುವು. ಸಾರ್ವಜನಿಕರಿಗೆ ಮಾತಿಗೆ ಸುದ್ದಿ ಸಿಕ್ಕಿತು. ಆದರೆ ಈ ಮನೆತನಗಳ ಬೆಂಬಲದ ರಾಜಕೀಯ ಪಟುಗಳಿಗೆ ಬಿಸಿಯನ್ನು ಸೈರಿಸಲಾಗದೆ ಪರದಾಟವಾಗಿದೆ. ಅವರು ತಾವು ಯಾರ ಬುಗುರಿಯೂ ಅಲ್ಲ ಅಂತ ತೋರಿಸಬೇಕಾಗಿದೆ. ಬ್ರಿಟನ್ನಿನಲ್ಲಿ ಮುರ್ಡೋಕನ ಮಾಧ್ಯಮದಿಂದ ಎಲ್ಲ ರಾಜಕೀಯ ಪಕ್ಷಗಳೂ ಪ್ರಯೋಜನ ಪಡೆದಿವೆ. ಆದರೆ ಈಗ ಒಗ್ಗಟ್ಟಿನಿಂದ ಅವನನ್ನು ನಿಯಂತ್ರಿಸಲು ಮುಂದುವರಿಯುವುದೂ ಇದೇ ರೀತಿಯದು. ಭ್ರಷ್ಟಾಚಾರ ವಿರೋಧಿ ಚಳುವಳಿಯ ಬಗ್ಗೆ ಭ್ರಮೆಗೊಳಗಾಗುವ ಗೆಳೆಯರು ಒಂದು ವಿಷಯ ನೆನಪಿನಲ್ಲಿಡಬೇಕು. ಭ್ರಷ್ಟಾಚಾರದಿಂದ ಬಂಡವಾಳ ಸಂಗ್ರಹವಾಗದೆ ಬಂಡವಾಳ ವ್ಯವಸ್ಥೆ ನಡೆಸಲಾಗುವುದಿಲ್ಲ, ಅಂದರೆ ವ್ಯವಸ್ಥೆ ಬದಲಾಗದೆ ಇದು ಪರಿಹಾರವಾಗುವುದಲ್ಲ. ಭ್ರಷ್ಟಾಚಾರ ಅದರ ಮರ್ಮಸ್ಥಾನ. ಈ ಚಳುವಳಿಗಳ ಮೂಲಕ ಅದಕ್ಕೊಂದು ಪೆಟ್ಟು ನೀಡುವುದು ಅಗತ್ಯ. ಆದರೆ ಅದು ಮಾರಣಾಂತಿಕವೂ, ನಿರ್ಣಾಯಕವೂ ಅಲ್ಲ. ಇಲ್ಲಿಂದ ಮುಂದುವರಿದ ಚಳುವಳಿಗಳು ಇದಕ್ಕೆ ಅಗತ್ಯ. ನಾವು ಮಾತನಾಡುತ್ತಿರುವ ಲಂಚ ಬಡವ ರೇಷನ್ ಕಾರ್ಡಿಗೆ ನೀಡುವ ಲಂಚದಂಥ ವಿಷಯವಲ್ಲ. ರಾಜಾ - ತಾತಾ - ಮಾರನ್- ಅಂಬಾನಿ ಮುಂತಾದ ಸಂದರ್ಭದ ಲಂಚಗಳ ವಿಷಯ. ಒಂದು ನೌಕರಶಾಹಿಯ ಭ್ರಷ್ಟತನ, ಇನ್ನೊಂದು ಬಂಡವಾಳಶಾಹಿಯ ಬೃಹತ್ ಭ್ರಷ್ಟತನ.




### ಮೇ ಸಂಚಿಕೆ

''ವಿಜಯನಗರದಲ್ಲಿ ಬಡತನ'' ಲೇಖನ ಕುರಿತು : ವಿಜಯನಗರವು ಒಂದು ಮರೆತುಹೋದ ಸಾಮ್ರಾಜ್ಯವಾಗಿತ್ತು, ಸಿವೆಲ್ ಕನ್ನಡಿಗರಿಗೆ ಅದನ್ನು ಪರಿಚಯಿಸಿದರು. ಇಲ್ಲಿಯ ಎಲ್ಲ ಪರಂಪರೆಗಳೂ ಅಲ್ಲಿದ್ದರೆ ಆಶ್ಚರ್ಯ ಪಡಬೇಕಾಗಿಲ್ಲ. ಎಲ್ಲ ದೀಪಗಳ ಕೆಳಗೆ ಕತ್ತಲಿರುವಂತೆ ಅಲ್ಲಿಯೂ ಕತ್ತಲು ಇತ್ತು. ಹರಿಜನರು ಊರ ಹೊರಗಿರುತ್ತಿದ್ದರು, 'ಸಂಬೋಳಿ' ಎಂದು ಕೂಗಿಕೊಂಡು ಊರಲ್ಲಿ ಬರುತ್ತಿದ್ದರು. ಸಂವಿಧಾನ ೧೯೫೦ರಲ್ಲಿ ಜಾರಿಯಾದರೂ ಅಸ್ಪೃಶ್ಯತೆ - ಈ ದೇಶವನ್ನು ಬಿಟ್ಟುಹೋಗಿಲ್ಲ. ಹಳ್ಳಿಗಳಲ್ಲಿ ಇದು ಇನ್ನೂ ಜೀವಂತವಾಗಿಯೇ ಇದೆ. ಪಂಜಾಬಿನಲ್ಲಿ ಈಗಲೂ ಹರಿಜನರು 'ಸಂಬೋಳಿ' ಎಂದು ಕೂಗಿಕೊಂಡು ಬರುವ ರೂಢಿ ಜಾರಿಯಲ್ಲಿದೆಯಂತೆ. ರಾಣೇಬೆನ್ನೂರು ತಾಲೂಕಿನ ಹರಿಜನರು ಕೆಲವು ತಿಂಗಳುಗಳ ಹಿಂದೆ ತಹಸೀಲದಾರರಿಗೆ ಮನವಿಯನ್ನು ಅರ್ಪಿಸಿದ್ದರು. ಅದರಲ್ಲಿ ಪ್ರತಿಸಾರೆ ನಾವು ರಾಣೇಬೆನ್ನೂರಿಗೇ ಬಂದು ಕ್ಷೌರ ಮಾಡಿಸಿಕೊಂಡು ಹೋಗಲು ಆಗುವುದಿಲ್ಲ, ಆದ್ದರಿಂದ ಹಳ್ಳಿಗಳಲ್ಲಿ ಕ್ಷೌರ ಮಾಡುವ ವ್ಯವಸ್ಥೆಯನ್ನು ಸರಕಾರ ಮಾಡಿಕೊಡಬೇಕು ಎಂದು ವಿನಂತಿಸಿಕೊಂಡಿದ್ದರು. ೨೦೧೧ರಲ್ಲಿ ಈ ವ್ಯವಸ್ಥೆ ಇನ್ನೂ ಜೀವಂತವಾಗಿದೆ ಎಂದು ಗಮನಿಸಿದಾಗ ವಿಜಯನಗರದಲ್ಲಿ ಇದ್ದುದು ಸಹಜ ಎನಿಸುತ್ತದೆ. ಇರಬಾರದಾಗಿತ್ತು, ಇತ್ತು. ಧರ್ಮವನ್ನು ರಕ್ಷಿಸಿದರೆ ಧರ್ಮ ಅವರನ್ನು ರಕ್ಷಿಸುತ್ತದೆ ಎಂದು ರಾಜರಿಗೆ ಬ್ರಾಹ್ಮಣರು ಹೇಳುತ್ತಿದ್ದರು, ಅವರು ಹೇಳಿದ್ದೇ ಧರ್ಮವಾಗುತ್ತಿತ್ತು. ವಿಜಯನಗರದ ಸಂಸ್ಥಾಪಕರು ಕುರುಬರು. ಅವರಿಗೆ ಮೊದಲು ಸಹಾಯಮಾಡಿದ ವ್ಯಕ್ತಿ, ಕ್ರಿಯಾಶಕ್ತಿ ಎಂಬ ಶೈವ ಗುರು. ಆದರೆ ನಂತರ ಬ್ರಾಹ್ಮಣರಾದ ವಿದ್ಯಾರಣ್ಯರು ವಿಜಯನಗರದ ರಾಜರ ಗುರುಗಳಾಗುತ್ತಾರೆ. ಈಗಲೂ ಶೃಂಗೇರಿ ಮಠದಲ್ಲಿ ಹೋಗಿ ಸಿರಿಗೆರೆ ಮಠದ ಬಗ್ಗೆ ಕೇಳಿದರೆ, ಅವರು ಅದು ಶೂದ್ರ ಮಠವೆಂದು ಹೇಳುತ್ತಾರೆ ಎನ್ನುವ ದಾಖಲೆ ನನ್ನ ಹತ್ತಿರವಿದೆ. ವಿಷಯ ಹೀಗಿರುವಾಗ ಬ್ರಾಹ್ಮಣ, ಶೂದ್ರ ಎನ್ನುವ ಈ ವಿಚಾರ ಬೇಗ ಸಾಯುವುದಿಲ್ಲ.

ನಮ್ಮ ದೇಶವನ್ನು ಇನ್ನೂ ಮನು ಆಳುತ್ತಿದ್ದಾನೆ. ಮೇರಾ ದೇಶ್ ಮಹಾನ್ ಹೈ !

ರಾಣೆಬೆನ್ನೂರು **ಪ್ರೊ|| ಎ. ಸಿ. ಹಿರೇಬಡೆಯರ್**

ಶ್ರೀ. ಎಸ್. ಮಂಜುನಾಥ್ ಅವರ ''ವಿಜ್ಞಾನ ಮತ್ತು ಕನ್ನಡ'' ಎಂಬ ಲೇಖನವು ತುಂಬ ಅರ್ಥಪೂರ್ಣವಾಗಿ ಮೂಡಿಬಂದಿದೆ. ''ಮಾತೃಭಾಷೆಯಲ್ಲಿ ಓದಿದ್ದು ಮೈಗೆ ಹತ್ತುವುದು. ಆಧುನಿಕ ವಿಜ್ಞಾನವನ್ನು ನಮ್ಮ ಭಾಷೆಗಳ ಮೂಲಕ ಕಲಿಯುವುದು ಸಾಧ್ಯವಿಲ್ಲವೆನ್ನುವುದು ಮೂಢನಂಬಿಕೆ'' ಎಂಬ ಹಿರಿಯ ಸಾಹಿತಿಗಳ ಮಾತು ಸತ್ಯವಾದದ್ದು. ಏಕೆಂದರೆ ಕನ್ನಡ ಮಾಧ್ಯಮದಲ್ಲಿ ಓದಿದ ಎಷ್ಟೋ ವಿದ್ಯಾರ್ಥಿಗಳು ವಿಜ್ಞಾನದ ವಿವಿಧ ಕ್ಷೇತ್ರಗಳಲ್ಲಿ ತಮ್ಮದೇ ಆದ ಕೊಡುಗೆಗಳನ್ನು ಮತ್ತು ಸೇವೆಯನ್ನು ನೀಡಿದ್ದಾರೆ, ನೀಡುತ್ತಿದ್ದಾರೆ. ''ಜನಪ್ರಿಯ ವಿಜ್ಞಾನ ಕವನಗಳು'' ಎಂಬ ಅದೇ ಲೇಖಕರ ಕೃತಿ ವಿಜ್ಞಾನವನ್ನು ಜನಪ್ರಿಯಗೊಳಿಸುವುದರ ಜೊತೆಗೆ ಮೂಢನಂಬಿಕೆಯ ವಿರುದ್ಧದ ಸ್ಪಷ್ಟ ನಿಲುವುಗಳನ್ನೊಳಗೊಂಡು ವಿನೂತನ




ಹಾಗೂ ವಿಶಿಷ್ಟ ಸಾಹಿತ್ಯ ಪ್ರಕಾರವೆನಿಸುತ್ತದೆ. ಅದ್ಭುತವಾಗಿ ಇನ್ನು ವಿಜ್ಞಾನವನ್ನು ಜನಪ್ರಿಯಗೊಳಿಸುವಲ್ಲಿ ಮಾಧ್ಯಮಗಳ ಪಾತ್ರ ಅಷ್ಟಕ್ಕಷ್ಟೆ. ಇಂದು ಖಾಸಗಿ ಕನ್ನಡ ದೃಶ್ಯ ಮಾಧ್ಯಮಗಳಲ್ಲಿ ವಿಜ್ಞಾನದ ಕುರಿತಾದ ಯಾವ ಕಾರ್ಯಕ್ರಮಗಳೂ ಪ್ರಸಾರವಾಗುತ್ತಿಲ್ಲ. ಎಲ್ಲೆಲ್ಲೂ ಮೌಢ್ಯವನ್ನು ಹೆಚ್ಚಿಸುವ ಜ್ಯೋತಿಷ್ಯ, ವಾಸ್ತು, ಸಂಖ್ಯಾಶಾಸ್ತ್ರಗಳೇ ಪ್ರಸಾರವಾಗುತ್ತಿವೆ. ಹೀಗಿರುವಾಗ ಯಾವ ಖಾಸಗಿ ವಾಹಿನಿಗಳಿಗೆ ವಿಜ್ಞಾನ ಮತ್ತು ವಿಜ್ಞಾನಿಗಳ ನೆನಪಾದೀತು ? ಇವತ್ತಿನವರೆಗೂ ಒಬ್ಬ ವಿಜ್ಞಾನಿಯ ಸಂದರ್ಶನ ಪ್ರಸಾರವಾಗಿಲ್ಲವೆಂದರೆ ವಿಜ್ಞಾನದ ಬಗ್ಗೆ ಇರುವ ಕಾಳಜಿ ಎಷ್ಟಿದೆ ಎಂಬುದು ತಿಳಿಯುತ್ತದೆ.

ಬಳ್ಳಾರಿ **ಡಾ|| ಬಿ. ಎಂ. ಶಿವಶಾಂತಲಾ**

### ಜೂನ್ ಸಂಚಿಕೆ

'ಪ್ರಾಚೀನ ಭಾರತೀಯ ಸಮಾಜದಲ್ಲಿ ತಿಕ್ಕಾಟಗಳು' ಎಂಬ ಲೇಖನದಲ್ಲಿ ಲೇಖಕರು ಆರ್ಯಪೂರ್ವ ಸಮಯದಿಂದ ಉಪನಿಷತ್ ಸಮಯದವರೆಗಿನ ಬದಲಾವಣೆಯನ್ನು ಮಾರ್ಮಿಕವಾಗಿ ವಿವರಿಸಿದ್ದಾರೆ. ವೈದಿಕ ಸಂಸ್ಕೃತಿಯ ಉಗಮ, ಅದಕ್ಕೆ ಪೂರಕ ಮತ್ತು ವಿರೋಧವಾಗಿ ಹುಟ್ಟಿಕೊಂಡ ವಿಚಾರಗಳು, ಜೈನ-ಬೌದ್ಧ ಧರ್ಮಗಳ ಹುಟ್ಟು, ಅವುಗಳ ಸಮಸ್ಯೆ, ಎಲ್ಲವೂ ಚರ್ಚಿಸಲ್ಪಟ್ಟಿವೆ. ನಮ್ಮ ಪೂರ್ವಜರು ಅನುಭವಿಸಿದ ವಿಚಾರ ಸ್ವಾತಂತ್ರ್ಯ ಕಂಡು ನಮಗೆ ಆಶ್ಚರ್ಯವಾಗದೇ ಇರದು.

ಪ್ರೊ|| ಬಿ. ವಿ. ವೀರಭದ್ರಪ್ಪನವರು ವೀರಶೈವ ಮಹಾಸಭೆಯ ೨೨ನೆಯ ಅಧಿವೇಶನ ಕುರಿತ ತಮ್ಮ ಲೇಖನದಲ್ಲಿ ವೀರಶೈವ ಧರ್ಮದ ಉಗಮ, ಕರ್ನಾಟಕದಲ್ಲಿ ಧರ್ಮದ ಬೆಳವಣಿಗೆ, ಮಠಗಳ ಸಂಸ್ಕೃತ ಭಾಷೆಯ ಮೋಹ, ವೈದಿಕ ಧರ್ಮದ ಕಡೆಗೆ ವಾಲುವಿಕೆ, ಬಸವಣ್ಣನವರ ನಂತರದಲ್ಲಿ ವೀರಶೈವ ಹಾಗೂ ವೀರಶೈವ-ಲಿಂಗವಂತರ ತಿಕ್ಕಾಟ ಇತ್ಯಾದಿ ವಿಷಯಗಳ ಬಗ್ಗೆ ಕೂಲಂಕಷವಾಗಿ ಚರ್ಚಿಸಿದ್ದಾರೆ. ಆದರೆ ಅಧಿವೇಶನದಲ್ಲಿ ತೆಗೆದುಕೊಂಡ ನಿರ್ಣಯ ಮಾತ್ರ ಆತಂಕಕಾರಿಯಾಗಿದೆ. ಯಾವುದೇ ರಾಜಕೀಯ ಪಕ್ಷದಲ್ಲಿರುವ ವೀರಶೈವ ರಾಜಕಾರಣಿಗೆ ತೊಂದರೆಯಾದರೆ ಎಲ್ಲ ಮಠಗಳು ಒಂದಾಗಿ ಆ ರಾಜಕಾರಣಿಯ ಸಹಾಯಕ್ಕೆ ಬರುವ ವಿಚಾರ ಕಳವಳಕಾರಿಯಾಗಿದೆ. ಈ ನಿರ್ಣಯವು ಪ್ರಜಾತಂತ್ರದ ಮೂಲಭೂತ ತತ್ವವನ್ನೇ ನಾಶಗೊಳಿಸುತ್ತದೆ.

ಕಾಂದಿವಿಲಿ ಪೂರ್ವ (ಮುಂಬಯಿ) **ಹ. ಶ್ರೀ. ಆಡೂರ**

### ಚಂದ್ರಗ್ರಹಣದ ರೋಮಾಂಚನ

೧೫-೦೬-೨೦೧೧ರಂದು ರಾತ್ರಿ ಸುಮಾರು ೧೧.೪೫ಕ್ಕೆ ಆಕಾಶದಲ್ಲಿ ಚಂದ್ರನನ್ನು ವೀಕ್ಷಿಸಿದಾಗ ನನಗೆ ಮಾವ (ಜಿ. ಟಿ. ನಾರಾಯಣರಾವ್)ನ ನೆನಪಾಯಿತು. ಜುಲೈ ೨೦೦೦ದಲ್ಲಿ ಚಂದ್ರಗ್ರಹಣ ಬಂದಿತ್ತು. ಆಗ ನಾನು ಏಳಲು ಸೋಮಾರಿತನವಾಗಿ ನೋಡಿರಲಿಲ್ಲ. ಬೆಳಿಗ್ಗೆ ಮಾವ ಗ್ರಹಣ ನೋಡಿದ್ದರ ಬಗ್ಗೆ ವಿವರಿಸುವಾಗ ಛೇ ನೋಡಬೇಕಿತ್ತು ಎನಿಸಿತು. ಮುಂದೆ ಬರುವ ಗ್ರಹಣವನ್ನು ನೋಡಲೇಬೇಕೆಂದು ಆಗಲೇ ಶಪಥ ಮಾಡಿದ್ದೆ. ಇಂಥ ದೀರ್ಘಾವಧಿಯ ಚಂದ್ರಗ್ರಹಣ ಇನ್ನು ಘಟಿಸುವುದು ೨೧೪೧ರಲ್ಲಿ. ಆಗ ನೋಡಲು ಹೇಗೂ ಸಾಧ್ಯವಿಲ್ಲ. ನೋಡಬೇಕೆಂದಾದರೆ ಮುಂದಿನ ಜನ್ಮ, ಅದರನಂತರದ ಜನ್ಮ ಎತ್ತಬೇಕು. ಅದರಲ್ಲೆಲ್ಲ ನಂಬಿಕೆ ಇಲ್ಲದ ಕಾರಣ ಈ ಜನುಮದಲ್ಲೇ ನೋಡಿ ಆನಂದಿಸುತ್ತೇನೆಂದು ಮಲಗದೇ ಕಾದಿದ್ದು ಗ್ರಹಣ ವೀಕ್ಷಣೆ ಮಾಡಿದೆ. ಖಗೋಳದ ಬಗ್ಗೆ ಅಜ್ಞಾನಿಯಾದ ನಾನು ಆಕಾಶ ನೋಡುತ್ತ ಚಂದ್ರಗ್ರಹಣ ನೋಡಿ ಸಂತೋಷಪಟ್ಟೆ. ರಾತ್ರಿ ೧೧.೩೦ಕ್ಕೆ ಚಂದ್ರನ ಸುತ್ತ ಕೆಂಪು ಪ್ರಭಾವಲಯ ಗೋಚರ. ನಿಜಕ್ಕೂ ಸುಂದರ ಆ ನೋಟ. ನೀರವ ರಾತ್ರಿಯಲ್ಲಿ ಚಳಿಗಾಳಿ ಬೀಸುತ್ತಿರಲು, ಆಕಾಶ ನೋಡುವುದೇ ಒಂದು ರೋಮಾಂಚನದ ಅನುಭವ. ೧೧.೫೦ಕ್ಕೆ ಸ್ವಲ್ಪಭಾಗ ಕಪ್ಪು ಗೋಚರ. ೧೨.೧೦ಕ್ಕೆ ಭಾಗಶಃ ಗ್ರಹಣ. ೧೨.೨೦ ದಾಟುವಾಗ ಅರ್ಧಭಾಗ ಕಪ್ಪು. ೨.೨೦ಕ್ಕೆ ಭಾಗಶಃ ಪೂರ್ಣಗ್ರಹಣ ವೀಕ್ಷಿಸಿದೆ. ಕತ್ತಲು ತುಂಬಿತ್ತು. ನಿಜಕ್ಕೂ ನಗರಗಳಲ್ಲಿ ಬೀದಿದೀಪ ಉರಿಯದೆ ಇರುತ್ತಿದ್ದರೆ ಗ್ರಹಣ ಇನ್ನೂ ಚೆನ್ನಾಗಿ ಕಂಡುಬರುತ್ತಿತ್ತು ಎಂದೆನಿಸಿತು. ಮೋಕ್ಷದ ತನಕ ಕೂರಲು ಸಾಧ್ಯವಾಗಲಿಲ್ಲ. ನಿದ್ರೆ ಆವರಿಸಿತು.

''ಭಯವೇಕೆ ಖಗ್ರಾಸ ಚಂದ್ರಗ್ರಹಣಕ್ಕೆ ?'' ಎಂಬ ಶೀರ್ಷಿಕೆಯ ಲೇಖನವನ್ನು ಸ್ಥಳೀಯ ಪತ್ರಿಕೆಯಲ್ಲಿ ಆರ್. ಎಂ. ಮಧು ದೀಕ್ಷಿತ್ ಎಂಬ ಜ್ಯೋತಿಷಿಗಳು ಬರೆದಿದ್ದರು.

ಅವರು ವಿವರಿಸುತ್ತ, 'ಯಾವ ವಿಚಾರದಲ್ಲಿ ನಮಗೆ ಹೆಚ್ಚಿನ ಮಾಹಿತಿ ತಿಳಿದಿರುವುದಿಲ್ಲವೋ ಆ ವಿಚಾರದ ಬಗ್ಗೆ ಭಯ ಉಂಟಾಗುವುದು ಸಹಜ. ಹಾಗೆಯೇ ಸೂರ್ಯಗ್ರಹಣ ಹಾಗೂ ಚಂದ್ರಗ್ರಹಣದ ಬಗೆಗೂ ಜನತೆಯಲ್ಲಿ ಭಯ ಇದ್ದೇ ಇದೆ. ಖಗ್ರಾಸ ಚಂದ್ರಗ್ರಹಣ ಆಕಾಶಕಾಯಗಳ ನಡುವೆ ಘಟಿಸುವ ಒಂದು ಸಹಜ ಕ್ರಿಯೆ. ಚಂದ್ರ ಮತ್ತು ಸೂರ್ಯನ ನಡುವೆ ಭೂಮಿ ಬರುವುದರಿಂದ ನಡೆಯುವಂಥ ಕ್ರಿಯೆ ಅಷ್ಟೆ' ಇತ್ಯಾದಿ ಇತ್ಯಾದಿ ಬರೆದು, ಕೊನೆಗೆ 'ಗ್ರಹಣಗಳ ಬಗ್ಗೆ ಭಯಬಿಟ್ಟು ನೋಡಿ ಆನಂದಿಸಿ' ಎಂದು ಲೇಖನ ಮುಗಿಸಿದ್ದರು. ಜ್ಯೋತಿಷಿಯೊಬ್ಬರು ಸರಿಯಾಗಿ ಬರೆದರಲ್ಲ, ವೈಜ್ಞಾನಿಕವಾಗಿ ಜನರಿಗೆ ತಿಳಿವಳಿಕೆ ಮೂಡಿಸಲು ಸಹಕಾರಿಯಾದರಲ್ಲ ಎಂದು ಲೇಖನ ಓದಿ ಬಹಳ ಸಂತೋಷಪಟ್ಟೆ. ಇತ್ತ ನಾನು ಸಂತಸದಲ್ಲಿ ಉಬ್ಬುತ್ತಿರಬೇಕಾದರೆ ನನ್ನ ಗಮನ ಲೇಖನದ ಕೆಳಗೆ ಇರುವ ಬಾಕ್ಸ್ ಕಡೆ ಹರಿಯಿತು. ''ಜೇಷ್ಠ, ಮೂಲ ನಕ್ಷತ್ರದಲ್ಲಿ ಚಂದ್ರಗ್ರಹಣ ಆಗುತ್ತಿರುವುದರಿಂದ ಈ ನಕ್ಷತ್ರದವರು ಶಾಂತಿ ಪೂಜಾದಿಗಳನ್ನು ಆಚರಿಸಬೇಕು. ವೃಶ್ಚಿಕ, ಕುಂಭ, ಮೀನ, ಸಿಂಹ, ಕನ್ಯಾ ಮತ್ತು ತುಲಾ ರಾಶಿಯವರು ಗ್ರಹಣ ನಿಮಿತ್ತ ಶಾಂತಿ ಪೂಜಾದಿಗಳನ್ನು ಆಚರಿಸಬೇಕು. ಇದು ವೈಜ್ಞಾನಿಕವೂ ಕೂಡ ಹೌದು'' (ಕಾಗುಣಿತ ತಪ್ಪುಗಳು ಅವರವೇ) ಎಂದು ದಪ್ಪ ಅಕ್ಷರದಲ್ಲಿ ಬರೆದಿರುವುದನ್ನು ಕಂಡು ಸಂತೋಷವೆಂಬ ಬಲೂನಿನಿಂದ ಸಂಪೂರ್ಣ ಗಾಳಿ ಹೋಗಿ ಭ್ರಮನಿರಸನವಾಯಿತು. ಭಯಬಿಟ್ಟು ನೋಡಿ ಎನ್ನುವುದು ಒಂದುಕಡೆ, ಇಂಥ ನಕ್ಷತ್ರದವರು ಶಾಂತಿ ಪೂಜೆ ಮಾಡಿಸಿ ಎನ್ನುವುದು ಇನ್ನೊಂದು ಕಡೆ. ಎಂಥ ವಿಪರ್ಯಾಸವಿದು! ನನ್ನದು ವೃಶ್ಚಿಕ ರಾಶಿ. ಖುಷಿಯಿಂದ ಗ್ರಹಣ ನೋಡಿದೆ. ಶಾಂತಿಯಾಗಲಿ ಪೂಜೆಯಾಗಲಿ ಏನೂ ಮಾಡಿಸಲಿಲ್ಲ. ಗ್ರಹಣದಿಂದ ನನಗೇನೂ ತೊಂದರೆಯಾಗಲಿಲ್ಲ. ಆದರೂ ಹೀಗೆ ಜನರನ್ನು ಹಾದಿ ತಪ್ಪಿಸುವ ಲೇಖನಗಳನ್ನು ಜವಾಬ್ದಾರಿಯಿರುವ ಪತ್ರಿಕೆಗಳು ಏಕೆ ಪ್ರಕಟಿಸುತ್ತವೆಯೋ? ಪತ್ರಿಕೆಗಳ ಅಮೂಲ್ಯ ಪುಟಗಳನ್ನು ಹಾಳುಗೈಯುವ ಪರಿಗೆ ನಗಬೇಕೋ ಅಳಬೇಕೋ ಗೊತ್ತಾಗುತ್ತಿಲ್ಲ.

ಮೈಸೂರು **ಮಾಲಾ**

### ಜುಲೈ ಸಂಚಿಕೆ

ಶ್ರೀ ಈಶ್ವರಯ್ಯ ಅವರು 'ತುಷಾರ' ಮಾಸಿಕದ ಮೂಲಕ ಅನೇಕ ಮಂದಿ ಅನುವಾದಕರನ್ನು ಬೆಳಕಿಗೆ ತಂದಿದ್ದಾರೆ. ಬೆಳೆಸಿದ್ದಾರೆ. ನನ್ನ ಅನುಭವ ಹೇಳುವುದಾದರೆ, ಮೊದಮೊದಲು ಮನದಾಳದ ಅದಮ್ಯ ಪ್ರೇರಣೆಯಿದ್ದಾಗ ಮಾತ್ರ ಅನುವಾದಕ್ಕೆ ಪ್ರಯತ್ನಿಸುತ್ತಿದ್ದೆ. ಈಶ್ವರಯ್ಯ ಅವರು ನನ್ನೊಡನೆ ಪೊಟ್ಟೆಕ್ಕಾಟ್ ಅವರ ಒಂದು ಮಲಯಾಳ ಕತೆಯನ್ನು ಕನ್ನಡಕ್ಕೆ ಅನುವಾದಿಸಿ ಕೊಡಲು ಒತ್ತಾಯಿಸಿದ್ದರಿಂದಲೆ ನಾನು ''ಚುಕ್ಕಿ ಜಿಂಕೆ'' ಎಂಬ ಕತೆಯನ್ನು ಭಾಷಾಂತರಿಸಿದ್ದೆ. ಅದಕ್ಕೆ ಓದುಗರಿಂದ ಬಂದ ಪ್ರಶಂಸೆಯೇ ನನ್ನಲ್ಲಿ, 'ಅಗತ್ಯವೆನಿಸಿದರೆ ಯಾವುದೇ ಮಲಯಾಳ ಕೃತಿಯನ್ನೂ ಕನ್ನಡಕ್ಕೆ ಭಾಷಾಂತರಿಸಬಲ್ಲೆ' ಎಂಬ ಅನಿಸಿಕೆಯನ್ನು ಮೂಡಿಸಿದ್ದು. ಒಂದು ಮಾಸಪತ್ರಿಕೆಯ ಸಂಪಾದಕ ಎಂಬ ನೆಲೆಯಲ್ಲಿ ಈಶ್ವರಯ್ಯ ಅವರು ಪ್ರತಿ ತಿಂಗಳೂ ತುಷಾರ ಮಾಸಿಕದಲ್ಲಿ ಪ್ರಕಟಣೆ ಬಯಸಿ ಬರುತ್ತಿದ್ದ ಬರೆಹಗಳನ್ನು ಆಯಾ ತಿಂಗಳಲ್ಲೇ ಕೂಲಂಕಷವಾಗಿ ಪರಿಶೀಲಿಸಿ ಸೂಕ್ತ ನಿರ್ಧಾರ ತೆಗೆದುಕೊಳ್ಳುತ್ತಿದ್ದರು. ಅವರು ಮರಳಿಸುತ್ತಿದ್ದ ಬರೆಹದಲ್ಲಿ ಒಂದೇ ಒಂದು ಗುರುತೂ ಹಾಕುತ್ತಿರಲಿಲ್ಲ. ಅದರ ಅಗತ್ಯ ಕಂಡುಬಂದಾಗ ಬೇರೆಯೆ ಕಾಗದ - ಗುಂಡುಸೂಜಿ ಬಳಸುತ್ತಿದ್ದರು. ಅವರ ಸೂಚನೆಗಳಿಂದ ಬರೆಹಗಾರನಿಗೆ ಆಗುತ್ತಿದ್ದ ಪ್ರಯೋಜನ ಎಷ್ಟು ಮಹತ್ವದ್ದೆಂದು ಬಲ್ಲವನೇ ಬಲ್ಲ.

ಮಣಿಪಾಲ ***ಕೆ. ಕೆ. ನಾಯರ್***

### ಸ್ಪಷ್ಟನೆ

ನನ್ನ 'ಭ್ರಷ್ಟಾಚಾರದ ವಿರುದ್ಧ ಕುಬ್ಜನಾಗುತ್ತಿರುವ ಹೋರಾಟ' ಲೇಖನದ ಕಡೆಯ ಎರಡನೆ ಪ್ಯಾರಾದಲ್ಲಿ ''...ಎಂಬ ಗಾಂಧೀಜಿ ಮಾತನ್ನು ಲೂಯಿ ಫಿಶರ್ ದಾಖಲಿಸಿದ್ದಾರೆ'' ಎಂದು ಮುದ್ರಿತವಾಗಿದೆ. ಅದು ಸರಿಯಲ್ಲ. ಗಾಂಧೀಜಿಯವರನ್ನು ಬಂಧಿಸಲು ಆತ್ಮಸ್ಥೈರ್ಯ ವಿರದಿದ್ದ ಬ್ರಿಟಿಷ್ ಮಿಲಿಟರಿ ಅಧಿಕಾರಿಯಾಗಿದ್ದ ಜಾನ್ ಕ್ರಿಸ್ಟಿಯಾನ್ ಸ್ಮುಶ್ ಕೇಳಿದ ಸಲಹೆಗೆ ಆಕ್ಸ್‌ಫರ್ಡ್‌ನ ಪ್ರೊ॥ ಗಿಲ್‌ಬರ್ಟ್‌ಮರ್‍ರೆ ನೀಡಿದ ಎಚ್ಚರಿಕೆ ರೂಪದ ಸಲಹೆ ಅದಾಗಿದೆ. ಅದನ್ನು ಲೂಯಿ ಫಿಶರ್ ತಮ್ಮ ''ದಿ ಲೈಫ್ ಆಫ್ ಮಹಾತ್ಮ ಗಾಂಧಿ'' ಕೃತಿಯಲ್ಲಿ (ಪುಟ-೧೧೮) ದಾಖಲಿಸಿದ್ದಾರೆ.

ಹಾಸನ **ಜ. ಹೊ. ನಾರಾಯಣಸ್ವಾಮಿ**

''ಬಯಲ ಭಾವ'' ಎಂಬ ಡಾ॥ ಬಿದರಿ ಚಂದ್ರಕಲಾ ಬರೆದಿರುವ ಕವನದಲ್ಲಿ ಈ ಸಾಲುಗಳು: ಜಂಗುಳಿಯ ಗೋಜಿಲ್ಲ, ಅರಿವೆಯಾ ಹಂಗಿಲ್ಲ, ಬಯಲ ಆಲಯದಿ, ಮರೆತು ಲೋಕಾಂತ, ಓತು ಏಕಾಂತ; ಮತ್ತೆ ''ಮರಳು ಹೆಜ್ಜೆ, ಮಸಗುವ ಛಾಯೆ, ಸಾರಿವೆ ಜೀವನ, ನಶ್ವರ ನಶ್ವರ'' ಎಂಬ ಸಾಲುಗಳಿಂದ ನನ್ನ ಮನಸ್ಸಿನಲ್ಲಿ ಹೊಸ ಹೊಸ ವಿಚಾರಗಳು ನೆನಪಿಗೆ ಬರಲು ಪ್ರಾರಂಭವಾದವು. ಕವನವನ್ನು ಬರೆದವರಿಗೆ ನನ್ನ ಅಭಿನಂದನೆಗಳು.

ಜಮಖಂಡಿ *ಶ್ರೀಧರ ಪಾಂಡು ಬಿರಾದಾರ*

### ಪ್ರಮಾಣವೋ ಪ್ರಮಾದವೋ ?

ಜೂನ್ ೨೭ರಂದು ಧರ್ಮಸ್ಥಳದಲ್ಲಿ ನಮ್ಮ ಹಾಲೀ ಮತ್ತು ಮಾಜಿ ಮುಖ್ಯಮಂತ್ರಿಗಳಾಗಿರುವ ಯೆಡ್ಯೂರಪ್ಪ ಮತ್ತು ಕುಮಾರಸ್ವಾಮಿಯವರು ಹಿಂದೆ ಜೊತೆಗಿದ್ದುಕೊಂಡು ತಮ್ಮೊಳಗೆ ಮಾಡಿಕೊಂಡಿದ್ದ ಮತ್ತು ಬಹುಶಃ ತಮ್ಮಿಬ್ಬರಿಗೆ ಮಾತ್ರ ತಿಳಿದಿರುವ ತಮ್ಮ ತಮ್ಮ ದುರ್ವ್ಯವಹಾರಗಳ ಕುರಿತು ಪ್ರಮಾಣ ವಚನ ಸ್ವೀಕರಿಸುವ ಕಾರ್ಯ ನಡೆಯಲಿದೆ ಎಂಬ ಪ್ರಚಾರ ನಡೆದಿತ್ತು. ಈಗ ಅದರ ಬದಲು ಕೇವಲ ಮನಸ್ಸಾಕ್ಷಿಯಷ್ಟೇ ಪ್ರದರ್ಶನವಾಯಿತೆಂದು ವರದಿಯಾಗಿದೆ. ಅವರಿಬ್ಬರ ದುರ್ವ್ಯವಹಾರಗಳೆಲ್ಲವೂ ಬಯಲುಗೊಳ್ಳುವುದೆಂಬ ಭೀತಿಯಿಂದ ಅವರು ಈ ನೆವವನ್ನು ಮುಂದೊಡ್ಡಿದ್ದಾರೆ ಎಂದು ತೋರುತ್ತದೆ. ಅದಕ್ಕೆ ಪೂರಕವಾಗಿ ಕೆಲವು ಮಠಾಧೀಶರು ತಮ್ಮ ಸಲಹೆಗಳನ್ನು ಕೊಟ್ಟಿರುವುದೂ ಪೂರ್ವ ಯೋಜಿತವೆಂಬಂತೆಯೇ ಭಾಸವಾಗುತ್ತದೆ.

ಧರ್ಮಸ್ಥಳದಲ್ಲಿ ಪ್ರಮಾಣ ಮಾಡುವುದರ ಬಗ್ಗೆ ರಾಷ್ಟ್ರಕವಿ ಕುವೆಂಪುರವರು ಒಂದು ಸುಂದರವಾದ ಮತ್ತು ಅರ್ಥಪೂರ್ಣವಾದ ಕವನವನ್ನೇ ಬರೆದಿರುವರು. ಅದು ಪ್ರಸ್ತುತ ಸಂದರ್ಭದಲ್ಲಿ ನೆನಪಿಸುವುದು ಸೂಕ್ತವೆನಿಸುತ್ತಿದೆ. ಕುವೆಂಪುರವರು ಧರ್ಮಸ್ಥಳಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ವೀರೇಂದ್ರ ಹೆಗ್ಗಡೆಯವರ ಹಿರಿಯರಾದ ಮಂಜಯ್ಯ ಹೆಗ್ಗಡೆಯವರು ಆಡಳಿತೆಯನ್ನು ನಡೆಸುತ್ತಿದ್ದರು. ಇಂದಿಗಿಂತಲೂ ಅಂದು ಧರ್ಮಸ್ಥಳದ ಮಹತ್ವದ ಬಗ್ಗೆ ಜನರ ಭೀತಿ ಅಧಿಕವಿತ್ತು. ಧರ್ಮಸ್ಥಳದಲ್ಲಿ ಸಾಮಾನ್ಯ ಜನರು ಆಚರಿಸುತ್ತಿದ್ದ ಹರಕೆ ಸಂದಾಯಗಳ ರೀತಿ ನೀತಿಗಳನ್ನು ಖುದ್ದಾಗಿ ಕಂಡು ಅದು ಅಮಾನವೀಯವೆಂದು ಮನನೊಂದು ಧರ್ಮಸ್ಥಳ ಎಂಬ ಒಂದು ಕವನವನ್ನು ಸ್ಥಳದಲ್ಲೇ ರಚಿಸಿ ಅದನ್ನು 'ಇಕ್ಷು ಗಂಗೋತ್ರಿ' ಎಂಬ ತನ್ನ ಕವನ ಸಂಕಲನದಲ್ಲಿ ಪ್ರಕಟಿಸಿದ್ದಾರೆ. ಅದರ ಕೆಲವು ಸಾಲುಗಳು ಹೀಗಿವೆ :

ಹೃದಯ ಧರ್ಮಸ್ಥಳದಿ ನಿನ್ನಂತರಾತ್ಮನಿರೆ, ಅಂಜುತಿಹೆ ಏಕೆ ? ...

ಅಲ್ಲಿ ಧರ್ಮಸ್ಥಳದಿ ಹೇಳಿಗೆಯ ಹಾವಿನೊಲು, ದೇಗುಲಕೆ ವಶನೆ ಹೇಳ್ ಮಂಜುನಾಥ ?

[ನಿನ್ನ ಅಂತರಾತ್ಮದಲ್ಲಿ ನಿಜವಾಗಿಯೂ ಮಂಜುನಾಥನು ಇರುವುದಾದರೆ ಹಾವಾಡಿಗನ ಹೇಳಿಗೆಯಂತಿರುವ ಧರ್ಮಸ್ಥಳದ ದೇಗುಲದಲ್ಲಿ ಮಂಜುನಾಥ ಬಂಧಿಯಾಗಿ ಇರುವನೇನು ?]

ನಿನ್ನ ಭಯದ ಉರಿಗೊಳ್ಳಿ ನಿನಗೆ ಅದುವೇ ಪಂಜುರ್ಲಿ; ನಿನ್ನ ಅಳುಕೇ ನಿನಗೆ ಅಣ್ಣಪ್ಪ ಭೂತ !

[ನಿನ್ನ ಭಯವೆಂಬ ಉರಿಯುವ ಕೊಳ್ಳಿಯೇ ನಿನ್ನನ್ನು ಪಂಜುರ್ಲಿಯಂತೆ ಕಾಡುತ್ತದೆ, ನಿನ್ನ ಅಳುಕೇ ನಿನಗೆ ಅಣ್ಣಪ್ಪ ಭೂತದಂತೆ ಕಾಡುತ್ತದೆ.]

ಎಲ್ಲಿ ಮತ್ಸರವು ಅಳಿದು ಮೈತ್ರಿ ಮೂಡುವಲ್ಲಿ ಮೂಡಿತೆಂದೇ ತಿಳಿಯೋ ಧರ್ಮಸ್ಥಳ. ಸುಲಿಗೆ ವಂಚನೆ ಕಳೆದವನ ಮನವೇ ಮಂಜುನಾಥನ ಮಂಚ, ಹೃದಯಕಮಲ !]

[ಎಲ್ಲಿ ಮತ್ಸರವು ಅಳಿದು ಗೆಳೆತನವು ಮೂಡುವುದೋ ಅಲ್ಲಿ ನಿಜವಾದ ಧರ್ಮಸ್ಥಳ ಮೂಡುತ್ತದೆ ಎಂದು ತಿಳಿ. ಸುಲಿಗೆ, ವಂಚನೆ, ಹಿಂಸೆಗಳನ್ನು ಕಳೆದವನ ಮನಸ್ಸೇ ಮಂಜುನಾಥನ ಪೀಠ !]

ಮೂಢ ಹೃದಯದ ಗೂಢ ಗಾಢಾಂಧಕಾರವನ್ನು ಹೊರದೂಡದೆಯೆ ರೂಢಿ ಎಂಬ ನೆವನದಿ ಕಾಣಿಕೆಯ ಹೆಸರಿಟ್ಟು ಕಾಂಚನವನೆಳೆದುಕೊಳೆ ಜ್ಯೋತಿ ಮೂಡುವುದೆಂದೋ ಜಡದ ಜಗದಿ ?

[ಮೂಢರ ಹೃದಯಗಳ ನಿಗೂಢ ಗಾಢಾಂಧಕಾರವನ್ನು ಕಾಣಿಕೆ ಎಂಬ ಹೆಸರಲ್ಲಿ ಕಾಂಚನವನ್ನು ಸೆಳೆಯುವ ತಂತ್ರಕ್ಕೆ ಪ್ರೋತ್ಸಾಹ ಕೊಟ್ಟರೆ ಜಗತ್ತಿನಲ್ಲಿ ಜ್ಞಾನ ಜ್ಯೋತಿ ಮೂಡುವುದು ಎಂದು ?]

ಹೆಮ್ಮೆಯನು ಬಿಡು, ಹಿರಿಯ! ದಮ್ಮಯ್ಯನಿಡು ಜಿನಗೆ ! ನಿನ್ನಂತೆ ಸಂಸ್ಥೆಯೂ ನಶ್ವರವದು !

[ಧರ್ಮಸ್ಥಳದ ಹಿರಿಯನೇ, ಅಹಂಭಾವವನ್ನು ತೊರೆದು ಜಿನನಿಗೆ ಶರಣಾಗು, ನೀನಾಗಲಿ ನಿನ್ನ ಸಂಸ್ಥೆಯಾಗಲಿ ಶಾಶ್ವತವೇನಲ್ಲ!]

ಧರ್ಮಕ್ಕೆ ಧರ್ಮಸಂಸ್ಥೆಗೆ ನಿಂದೆ ನನದಲ್ಲ;

ಧರ್ಮವೇಷದ ಅಧರ್ಮಕ್ಕೆ ಮುನಿದೆ, ನಿಜದ ಧರ್ಮಕೆ ಇದೆಕೋ ಕೈ ಮುಗಿದೆ, ಮಣಿದೆ, ಹಿರಿದು ಕಿರಿದೆನ್ನದೆ!

[ಧರ್ಮ ಮತ್ತು ಧರ್ಮ ಸಂಸ್ಥೆಗಳಿಗೆ ನಾನು ನಿಂದಿಸುವುದಿಲ್ಲ, ಧರ್ಮದ ಹೆಸರಲ್ಲಿ ನಡೆಯುವ ಅಧರ್ಮಕ್ಕೆ ನನ್ನ ಮುನಿಸು, ನಿಜವಾದ ಧರ್ಮಕ್ಕೆ ನಾನು ತಲೆಬಾಗುತ್ತೇನೆ ಮತ್ತು ಕೈ ಮುಗಿಯುತ್ತೇನೆ]

ಇದು ಕುವೆಂಪುರವರ ಶ್ರೇಷ್ಠ ಕವನಗಳಲ್ಲೊಂದು ಎಂದೆನಿಸಿದೆ. ಧರ್ಮಸ್ಥಳದಲ್ಲಿ ಪ್ರಮಾಣ ವಚನ ಸ್ವೀಕರಿಸುವುದು, ಆಣೆ ಇಡುವುದು ಧರ್ಮದ ಹೆಸರನ್ನು ಮೌಢ್ಯಕ್ಕೆ ತಳ್ಳುವ ಕ್ರಿಯೆಯೆಂದೂ, ಅರ್ಧ ಶತಮಾನಗಳ ಹಿಂದೆಯೇ ಕುವೆಂಪುರವರು ಸಾರಿದ್ದರು. ಹಾಗಿರುವಾಗ ಜನ ನಾಯಕರೆಂದರಲ್ಲಿ ನಡೆಯುವ ಅಧರ್ಮವೆಂದೂ, ಜನರೆನಿಸಿಕೊಂಡಿರುವ ಯೆಡ್ಯೂರಪ್ಪ ಮತ್ತು ಕುಮಾರ ಸ್ವಾಮಿಯವರ ಕುಕೃತ್ಯಕ್ಕೆ ಅಸಹ್ಯಪಡುತ್ತೇವೆ ಮತ್ತು ಖಂಡಿಸುತ್ತೇವೆ. ಏನಿದ್ದರೂ ಎಲ್ಲ ಅವ್ಯವಹಾರಗಳನ್ನು ಬಯಲು ಮಾಡುವುದು ಅವರ ಆದ್ಯ ಕರ್ತವ್ಯವಾಗಿದೆ. ಆದುದರಿಂದ ಅವುಗಳನ್ನು ನಮ್ಮ ಸಂವಿಧಾನಕ್ಕನುಗುಣವಾಗಿ ಶಾಸನಸಭೆಗಳಲ್ಲಿಯೋ, ನ್ಯಾಯಾಲಯಗಳಲ್ಲಿಯೋ ಮಂಡಿಸಿ ಸೂಕ್ತಕ್ರಮ ಕೈಗೊಳ್ಳುವ ಜವಾಬ್ದಾರಿ ಅವರದ್ದಾಗಿರುತ್ತದೆ. ಮತ್ತು ಇವುಗಳ ಕುರಿತು ಪೂರ್ಣ ಮಾಹಿತಿಯನ್ನು ಪಡೆಯುವ ಹಕ್ಕು ನಾಗಕರಿಗಿದೆ. ಇದಕ್ಕೆ ಅವರು ಬದ್ಧರಾಗಿ ತಮ್ಮ ಜವಾಬ್ದಾರಿಗಳನ್ನು ನಿರ್ವಂಚನೆಯಿಂದ ಪಾಲಿಸುತ್ತಾರೆ ಎಂದು ಹಾರೈಸುತ್ತೇವೆ.

ಮಂಗಳೂರು — ಬಿ. ವಿ. ಕಕ್ಕಿಲ್ಲಾಯ

'ಪಾಕೀಸ್ತಾನ: ಇತ್ತ ದರಿ, ಅತ್ತ ಹು(ಪು)ಲಿ' (-ಸೀಯಾರ್ಕೆ). ಈ ಗಾದೆಯ ಉದ್ಧೃತಿಯನ್ನು ಗಮನಿಸಿದಾಗೆಲ್ಲ, ಬೇರೊಂದು ಸಂದರ್ಭದಲ್ಲಿ ಕುವೆಂಪು ಆಡಿರುವ ಮಾತೊಂದು ನೆನಪಾಗುತ್ತದೆ: "ಹುಲಿಯನ್ನೆ ಏರಿ ದರಿಯನ್ನು ದಾಟುವ ಸಾಹಸ ಮಾಡಬೇಕು!"

ಅಂದ ಹಾಗೆ, ಬಹುಮುಖ ಸಾಮರ್ಥ್ಯದ ಲಿಂಗದೇವರು ಹಳೆಮನೆ ಕನ್ನಡ ಎಂ.ಎ.ದಲ್ಲಿ ನನ್ನ ಪರೋಕ್ಷ (ಏಕಲವ್ಯ) ವಿದ್ಯಾರ್ಥಿಯಾಗಿದ್ದರು. ನನ್ನ ಬಗೆಗೆ ಅವರು ಒಂದೆಡೆ ಮಾಡಿರುವ ಹೊಗಳಿಕೆ ಇಲ್ಲಿ ಬೇಡ!

ಮೈಸೂರು — ಸಿಪಿಕೆ

**ಜಾವೇದ್ ಅಖ್ತರ್‌ರವರ ಅದ್ಭುತ ಉಪನ್ಯಾಸ ಕುರಿತು :**

ಈ ಉಪನ್ಯಾಸದ ಸಂಗ್ರಹಾನುವಾದ ನಿಜಕ್ಕೂ ಸಂಗ್ರಹಕ್ಕೆ ಯೋಗ್ಯವಾದ ಲೇಖನ. ಭಾರತದ ಪ್ರತಿಯೊಬ್ಬ ಪ್ರಜ್ಞಾವಂತ ನಾಗರಿಕ ಈ ನಿಟ್ಟಿನಲ್ಲಿ ಚಿಂತಿಸಬೇಕಾಗಿದೆ.

ಮುಖ್ಯವಾಗಿ ಶ್ರೀಮಂತರನ್ನು ಹಾಗೂ ಮೇಲ್ಮಧ್ಯಮ ವರ್ಗದವರನ್ನು ಅನುಸರಿಸುತ್ತಿರುವ ನಮ್ಮ ಕೆಳಮಧ್ಯಮ ವರ್ಗದವರು ಯೋಚಿಸಬೇಕಾಗಿದೆ.

ಆಹ್ವಾನಿತರಲ್ಲಿದ್ದ ಶ್ರೀರವಿಶಂಕರ್‌ರ ಪ್ರತಿಕ್ರಿಯೆಯನ್ನು ತಿಳಿಯುವ ಕುತೂಹಲವಿದೆ.

ಹೆಬ್ಬಾಳ — ಬಿ. ಆರ್. ಕೃಷ್ಣಮೂರ್ತಿ

## ಸಾಹಿತಿ ಮಾಹಿತಿ ಕೋಶ

ಈಗಾಗಲೇ ಸಮಕಾಲೀನ ಕನ್ನಡ ಲೇಖಕ - ಲೇಖಕಿಯರ ಪರಿಚಯಾತ್ಮಕ ಮಾಹಿತಿಯನ್ನೊಳಗೊಂಡ ಸಾಹಿತಿ - ಮಾಹಿತಿಯ ಭಾಗ - ೮ರ ಪ್ರಕಟಣೆಯ ಸಿದ್ಧತೆ ನಡೆದಿದೆ. ಒಂದು ಕೃತಿ ಪ್ರಕಟವಾಗಿದ್ದರೂ ಸಾಕು. ಹಿರಿ-ಕಿರಿ ಲೇಖಕ-ಲೇಖಕಿಯರಿಂದ ಕೋಶಕ್ಕೆ ಮಾಹಿತಿ ಆಹ್ವಾನಿಸಲಾಗಿದೆ. ವಿವರಗಳಿಗಾಗಿ :

**ಸಂಪಾದಕರು**

೫೩/೪ ಡಬ್ಲ್ಯೂ, ೨೩ನೇ ಅಡ್ಡರಸ್ತೆ

ಸೋಮೇಶ್ವರ ಬಡಾವಣೆ, ಹುಳಿಮಾವು

ಬನ್ನೇರುಘಟ್ಟ ರಸ್ತೆ

ಬೆಂಗಳೂರು - ೫೬೦ ೦೭೬

ದೂರವಾಣಿ : ೨೬೪೮೮೧೬೭೨

ಈ ವಿಳಾಸದೊಂದಿಗೆ ಸಂಪರ್ಕಿಸಲು ಕೋರಿದೆ.

## ಸಾಲುಮರದ ತಿಮ್ಮಕ್ಕ




ಹಸಿದ ಬದುಕಿನ
ಒಡಲಿಗೆ ನೋವನ್ನುಣಬಡಿಸಿದವಳು
ಬಾಳ ಪಯಣದಲ್ಲಿ ನೊಂದು ಬೆಂದವಳು
ಕಷ್ಟಗಳ ಹಿಂಡಿ ಕುಡಿದು
ಭವದ ತೃಷೆಯ ನೀಗಿಸಿದವಳು.

ಗುಡಿಸಲೊಳಗೆ ಕಂಡ
ಕನಸುಗಳು,
ಎದೆಯೊಳಗೆ ನಾಟಿ
ಮಣ್ಣಿನ ಮೇಲೆ ಹಸಿರು ಚಿತ್ರಗಳಾಗಿ
ಅರಳಿ ನಿಂತವು
ಉಸಿರ ನೀಡಲು!

ಕರುಳ ಕೊರೆದ 'ಬಂಜೆ' ಎಂಬ
ಪದಕ್ಕೆ ಉತ್ತರ ಕೊಟ್ಟವಳು!
ಮೈಲುಗಟ್ಟಲೆ ಸಸಿಗಳ ನೆಟ್ಟು,
ಪ್ರೀತಿ, ವಾತ್ಸಲ್ಯದ ಧಾರೆಯನೆರೆದು,
ಜತನದಿಂದ ಪೊರೆದು,
ತಾಯಿಯಾದಳು ತಿಮ್ಮಕ್ಕ 'ಸಾಲು ಸಾಲು ಮರಗಳಿಗೆ' ...

ನೆರಳಾದಳು ನಾಡಿಗೆ.
ತಿಮ್ಮಕ್ಕನ ಬದುಕೆಂದರೆ
ನಮ್ಮ ಕಣ್ಮುಂದೆ ಪ್ರಜ್ವಲಿಸುವ 'ದೀವಿಗೆ... !'

**ಸಂತೋಷ ಅಂಗಡಿ**
ಲಕ್ಷ್ಮೀ ನಗರ, ಬದಾಮಿ, ಬದಾಮಿ - ೫೮೭ ೨೦೧
ಬಾಗಲಕೋಟ ಜಿಲ್ಲೆ



# ಹಳೆಯ ಮನೆ

೧

ಆ ಮನೆ ಒಂದು ಕಾಲದಲ್ಲಿ ಶ್ರೀಮಂತರಾಗಿದ್ದ, ಆದರೆ ಈಗ ಬಡವರಾಗಿರುವಂಥವರಿಗೆ ಸೇರಿದ್ದು. ದಿನದಿಂದ ದಿನಕ್ಕೆ ಅದು ಬಡತನದಿಂದ ಘಾಸಿಗೊಂಡಿದೆ. ಗೋಡೆಯ ಗಿಲಾವು ಕಳಚಿ ಹೋಗಿದೆ; ಗುಬ್ಬಚ್ಚಿಗಳು ಅಲ್ಲಲ್ಲಿ ಒಡೆದಿರುವ ನೆಲದ ಮೇಲೆ ಕುಳಿತು ಧೂಳಿನಲ್ಲಿ ರೆಕ್ಕೆ ಬಡಿಯುತ್ತಿವೆ; ದುರ್ಗಾಮಾತೆಯ ದೇವಸ್ಥಾನದಲ್ಲಿ ಪಾರಿವಾಳಗಳು ಒಡ್ಡೊಡ್ಡಾದ ಮೋಡಗಳಂತೆ ದಟ್ಟೈಸಿವೆ.

ಮನೆಯ ಉತ್ತರ ಭಾಗದಲ್ಲಿ ಬಾಗಿಲ ಒಂದು ಪಟ್ಟಿ ಮುರಿದುಬಿದ್ದಿದ್ದು ಅದಕ್ಕೆ ಯಾರೂ ಗಮನ ಕೊಟ್ಟಿಲ್ಲ. ಬಾಗಿಲ ಇನ್ನೊಂದು ಪಟ್ಟಿ - ತಡೆಯಲಾಗದ ದುಃಖದಿಂದ ಎಂಬಂತೆ - ಗಾಳಿಗೆ ಅಲುಗಾಡುತ್ತಿದೆ, ಆದರೆ ಅದನ್ನು ಯಾರೂ ಗಮನಿಸುವುದಿಲ್ಲ.

ಅದು ಮೂರಂತಸ್ತಿನ ಮನೆ. ಆದರೆ ಐದು ಕೋಣೆಗಳಲ್ಲಿ ಮಾತ್ರ ಜನ ವಾಸವಾಗಿದ್ದಾರೆ; ಉಳಿದವೆಲ್ಲ ಮುಚ್ಚಿವೆ. ಆ ಮನೆ ಎಂಬತ್ತೈದು ವರ್ಷದ ಮುದುಕನಂತಿದೆ. ಚಿಲಕ ಹಾಕಿರುವ ಅವನ ಹಳೆಯ ನೆನಪುಗಳು ಅವನ ಇಡೀ ಬದುಕನ್ನು ಒಳಗೊಂಡಿರುವಂಥದ್ದು; ಈಗಿನ ಜನಸಂಚಾರ ಕೇವಲ ಒಂದು ಕೋಣೆಯಲ್ಲಿ ಮಾತ್ರ.

ಮಧ್ಯವಯಸ್ಕ ಮನೆಗೆಲಸದವಳೊಬ್ಬಳು ಆ ಮನೆಯಲ್ಲಿ ಇಡೀ ದಿನ ಕೆಲಸ ಮಾಡುತ್ತಾಳೆ, ಆ ಗೃಹಿಣಿಯ ಜೊತೆ ಜಗಳವಾಡುತ್ತಾಳೆ, ಮತ್ತು ''ನಾನು ಈ ಕೆಲಸ ಬಿಟ್ಟುಹೋಗ್ತೀನಿ'', ಅನ್ನುತ್ತಾಳೆ. ಆದರೆ ಹೋಗುವುದಿಲ್ಲ.

೪

ಮನೆಯ ಈ ಭಾಗದಲ್ಲಿ ಪ್ರತಿದಿನವೂ ಸ್ವಲ್ಪ ಸ್ವಲ್ಪವಾಗಿ ರಿಪೇರಿ ಕೆಲಸ ನಡೆಯುತ್ತದೆ. ಕಿಟಕಿಗೆ ಪೇಪರನ್ನು ಅಂಟಿಸಲಾಗಿದೆ. ವರಾಂಡಾದ ಬಿರುಕು ಬಿದ್ದ ಕಂಬಿಗಳ ಸಂದುಗೊಂದುಗಳಲ್ಲಿ ಕಡ್ಡಿಗಳನ್ನು ಇಡಲಾಗಿದೆ. ಬೆಡ್‌ರೂಮಿನಲ್ಲಿ ಮುರಿದು ಹೋಗಿರುವ ಕಿಟಕಿಯನ್ನು ಇಟ್ಟಿಗೆಯ ಆಧಾರದಿಂದ ನಿಲ್ಲಿಸಲಾಗಿದೆ. ಗೋಡೆಗಳಿಗೆ ಸುಣ್ಣ ಬಳಿಯಲಾಗಿದೆ, ಆದರೆ ಕಪ್ಪುಕಲೆಗಳನ್ನು ಅಳಿಸಲಾಗಿಲ್ಲ.

ಟೆರೇಸಿನ ಮೇಲಿನ ಕುಂಡದಲ್ಲಿ ಒಂದು ನಿಸ್ತೇಜ ಕ್ರೋಟನ್ ಗಿಡ ಬೆಳೆದಿದೆ. ಜಗತ್ತಿಗೆ ಮುಖ ತೋರಿಸಲು ಅದಕ್ಕೆ ನಾಚಿಕೆ. ಅದರ ಪಕ್ಕದಲ್ಲೇ ಮನೆಯ ಅಸ್ತಿಭಾರದಿಂದ ಮೇಲೆದ್ದ ಅರಳಿಮರ ಬೆಳೆದು ನಿಂತಿದೆ; ಅದರ ಎಲೆಗಳು ಆ ಗಿಡವನ್ನು ಮೂದಲಿಸುತ್ತಿರುವಂತೆ ಕಾಣುತ್ತಿದೆ.

ಇಲ್ಲಿದೆ ದೊಡ್ಡ ಶ್ರೀಮಂತಿಕೆಯ ದೊಡ್ಡ ಬಡತನ.

ತನ್ನ ಬಡತನವನ್ನು ಮುಚ್ಚಿಕೊಳ್ಳಲು ಪ್ರಯತ್ನಪಟ್ಟು ತನ್ನ ಮಾನವನ್ನು ಕಳೆದುಕೊಂಡಿದೆ.

ಉತ್ತರ ಭಾಗದ ಕೋಣೆಗಳನ್ನು ಯಾರೂ ನೋಡಿಲ್ಲ. ಆದರೂ ಕೀಲಿಲ್ಲದ ಆ ಬಾಗಿಲು ಗಾಳಿಯ ಹೊಡೆತಕ್ಕೆ ಧಡಧಡ ಬಡಿಯುತ್ತಿರುತ್ತದೆ. ಅದು ಅಸ್ಪೃಶ್ಯನೊಬ್ಬನು ಎದೆ ಬಡಿದುಕೊಳ್ಳುವಂತಿದೆ.



ಗಿಲಾವು ಬಿದ್ದುಹೋದ ಮತ್ತು ಇಟ್ಟಿಗೆಗಳು ಕಾಣುವಂತೆ ಸುಣ್ಣಬಣ್ಣವಿಲ್ಲದ ಆ ಮನೆಯು ರಸ್ತೆಯ ಪಕ್ಕದಲ್ಲಿ ಒಬ್ಬ ಹುಚ್ಚನು ಹುಚ್ಚುಚ್ಚಾದ ಹಚ್ಚಡವನ್ನು ಮೈಗೆ ಸುತ್ತಿಕೊಂಡು ಅದಕ್ಕೂ ಗಮನ ಕೊಡದೆ, ಬೇರೆಯವರಿಗೂ ಗಮನ ಕೊಡದೆ ನಿಂತಿರುವಂತೆ ಕಾಣುತ್ತದೆ.

೨

ಒಂದು ದಿನ ಬೆಳಿಗ್ಗೆಯೇ ರಸ್ತೆಯ ಪಕ್ಕ ಹೆಂಗಸರ ಅಳುವಿನ ಧ್ವನಿಗಳು ಕೇಳಿಸುತ್ತಿದ್ದವು. ನಮಗೆ ಗೊತ್ತಾದದ್ದೇನೆಂದರೆ ಆ ಮನೆಯ ಕಿರಿಯ ಮಗ – ಒಂದು ನಾಟಕದ ಕಂಪನಿಯಲ್ಲಿ ರಾಧಿಕೆಯ ಪಾತ್ರ ಮಾಡಿ ಜೀವನ ನಡೆಸುತ್ತಿದ್ದವನು – ತನ್ನ ಹದಿನೆಂಟನೇ ವಯಸ್ಸಿನಲ್ಲಿ ಅವತ್ತು ಸತ್ತಿದ್ದನೆಂಬ ವಿಷಯ.

ಹೆಂಗಸರು ಸುಮಾರು ದಿನ ಅತ್ತರು; ಆಮೇಲೆ ಅವರ ಸಮಾಚಾರವೇನೂ ಗೊತ್ತಾಗಲಿಲ್ಲ.

ಅದರ ನಂತರ ಎಲ್ಲಾ ಬಾಗಿಲುಗಳಿಗೆ ಚಿಲಕ ಹಾಕಲಾಯಿತು.

ಆದರೆ ಉತ್ತರ ಭಾಗದ ಆ ಹಾಳಾಗಿದ್ದ ಮತ್ತು ವಿಧವೆಯಂತಿದ್ದ ಬಾಗಿಲು ಮುರಿದು ಬೀಳಲೂ ಇಲ್ಲ, ಅದನ್ನು ಯಾರೂ ಮುಚ್ಚಲೂ ಇಲ್ಲ; ಅದು ಒಂದು ಒಡೆದುಹೋದ ಹೃದಯದಂತಿದ್ದು, ಗಾಳಿಯ ಹೊಡೆತಕ್ಕೆ ಬಡಿಯುತ್ತಿರುತ್ತದೆ.

೩

ಒಂದು ದಿನ ಸಾಯಂಕಾಲ ಆ ಮನೆಯಲ್ಲಿ ಮಕ್ಕಳ ಭಾವೋದ್ರೇಕದ ಧ್ವನಿಗಳು ಕೇಳಿಬಂದವು.

ವರಾಂಡದಿಂದ ಇಳಿಬಿದ್ದ ಒಂದು ಕೆಂಪು ಅಂಚಿನ ಸೀರೆ ನಮಗೆ ಕಂಡುಬಂದಿತು.

ಇಷ್ಟು ಕಾಲವಾದ ಮೇಲೆ ಆ ಮನೆಯ ಒಂದು ಭಾಗವನ್ನು ಬಾಡಿಗೆಗೆ ಕೊಡಲಾಗಿದೆ. ಬಾಡಿಗೆದಾರನ ಆದಾಯ ತುಂಬ ಕಡಿಮೆ, ಆದರೆ ಮಕ್ಕಳು ಜಾಸ್ತಿ. ಬಳಲಿ ಬೆಂಡಾದ ತಾಯಿಗೆ ಸಿಟ್ಟು ಬರುತ್ತಿರುತ್ತದೆ, ಆ ಮಕ್ಕಳನ್ನು ಅವಳು ಹೊಡೆಯುತ್ತಾಳೆ. ಅವು ಅಳುತ್ತಾ ನೆಲದ ಮೇಲೆ ಬಿದ್ದು ಹೊರಳಾಡುತ್ತವೆ.


ಮೂಲ : **ರವೀಂದ್ರನಾಥ ಠಾಕೂರ್**

ಅನುವಾದ : **ಪ್ರೊ|| ಶ್ರೀನಿವಾಸ್ ವಿ. ಸುತ್ರಾವೆ**

ನಂ. ೭೩, 'ಶ್ರೀ ಲಕ್ಷ್ಮಿ ವೆಂಕಟೇಶ್ವರ ನಿಲಯ'

(ನ್ಯಾಷನಲ್ ಕಾನ್ವೆಂಟ್ ಹತ್ತಿರ)

ಎಸ್. ನಿಜಲಿಂಗಪ್ಪ ಬಡಾವಣೆ, ದಾವಣಗೆರೆ - ೫೭೭ ೦೦೪

ಮ. ಶ್ರೀ. ಮುರಳಿಕೃಷ್ಣ

# ಸಾರ್ವಜನಿಕ ಸಂಪನ್ಮೂಲಗಳ ಖಾಸಗೀಕರಣ 'ಕನ್ನಡಗಂಗಾ'ದ ದುರಂತ

**ಪ್ರ**ಸ್ತುತ ನಮ್ಮ ರಾಜ್ಯದಲ್ಲಿ ಕುಡಿಯುವ ನೀರಿನ ಖಾಸಗೀಕರಣ ಪ್ರಕ್ರಿಯೆ ಯಾವ ಪರಿಯಲ್ಲಿ ಸಾಗುತ್ತಿದೆ ಎಂಬುದನ್ನು ಆಳವಾಗಿ ವಿಶ್ಲೇಷಿಸಿದಾಗ ಗಾಬರಿಯಾಗುತ್ತದೆ. ಬಡವರಿಗೆ ಜೀವಜಲವೂ ಗಗನಚುಕ್ಕೆಗಳಾಗುತ್ತವೆಯೋ ಏನೋ ಎಂಬ ಆತಂಕ ಪ್ರಜ್ಞಾವಂತರನ್ನು ಕಾಡತೊಡಗಿದೆ. ನಮ್ಮ ರಾಜ್ಯದ ದೊಡ್ಡ ಶಹರುಗಳಾದ ಹುಬ್ಬಳ್ಳಿ, ಧಾರವಾಡ, ಗುಲ್ಬರ್ಗಾ, ಬೆಳಗಾವಿಗಳಲ್ಲಿ ಫ್ರಾನ್ಸ್ ಮೂಲದ ವಿನೋಲಿಯಾ ಎಂಬ ಕಂಪನಿ ನೀರು ಪೂರೈಸುವ ಗುತ್ತಿಗೆ ಪಡೆದು ಈಗಾಗಲೇ ಕಾರ್ಯನಿರತವಾಗಿದೆ. ಟಾಟಾ ಕಂಪನಿಯ ಅಂಗಸಂಸ್ಥೆಯಾದ ಜಸ್ಕೋ ಕಂಪನಿ ಮೈಸೂರಿನಲ್ಲಿ ನೀರನ್ನು ಸರಬರಾಜು ಮಾಡುತ್ತಿದೆ. ಈಗ ನಮ್ಮ ಘನ ರಾಜ್ಯ ಸರ್ಕಾರ ನೀರು ಖಾಸಗೀಕರಣ ಪ್ರಹಸನದ ಎರಡನೇ ಅಂಕವನ್ನು ಜನತೆಯ ಮುಂದಿಡಲು ನಕ್ಷೆ ತಯಾರಿಸಿದೆ. ನಮ್ಮ ರಾಜ್ಯದ ೧೬ ಪಟ್ಟಣಗಳಿಗೆ ಖಾಸಗಿ ಯೋಜನೆಯಡಿ ನೀರು ಪೂರೈಸಲು ಸರ್ಕಾರ ವಿಶ್ವ ಬ್ಯಾಂಕಿನಿಂದ ೬೦೨.೨೦ ಕೋಟಿ ರೂ.ಗಳ ಸಾಲ ಪಡೆಯಲಿದೆ. ಈ ದಿಶೆಯಲ್ಲಿ ಜೂನ್ ೨೩, ೨೦೧೦ರಂದು ಸರ್ಕಾರ ಅಧಿಸೂಚನೆಯನ್ನು ಹೊರಡಿಸಿದೆ. ಮಂಡ್ಯ, ತುಮಕೂರು, ವಿಜಾಪುರ, ಶಿವಮೊಗ್ಗ, ಸೇಡಂ, ಸಂಕೇಶ್ವರ, ಚಿಟಗುಪ್ಪಿ, ಹುಕ್ಕೇರಿ, ಹುಮ್ನಾಬಾದ್, ಮಾಲೂರು, ತಿಪಟೂರು, ಕುಶಾಲನಗರ, ಕಡೂರು, ಬೀರೂರು, ತೀರ್ಥಹಳ್ಳಿ ಮತ್ತು ಶ್ರೀರಂಗಪಟ್ಟಣದಂಥ

ಕೆಲವು ವರ್ಷಗಳ ಹಿಂದೆ ಮಧ್ಯಪ್ರದೇಶದಲ್ಲಿ ಒಂದು ನದಿಯನ್ನೇ ಒಬ್ಬ ಖಾಸಗಿ ವ್ಯಕ್ತಿಗೆ ಮಾರಲಾಯಿತು. ನಮ್ಮ ರಾಜ್ಯದಲ್ಲಿ ಜಾರಿಯಾಗಲು ಸಿದ್ಧಪಡಿಸಿರುವ ನೀರಿನ ಖಾಸಗೀಕರಣ ಯೋಜನೆಯನ್ನು ಗಮನಿಸಿದರೆ, ಮುಂಬರುವ ದಿನಗಳಲ್ಲಿ ನದಿಗಳೂ ಹರಾಜಾಗುತ್ತವೆಯೋ ಏನೋ! ಇರಲಿ, ಈ ಖಾಸಗೀಕರಣ ಯೋಜನೆಯಿಂದ ಜನರಿಗೆ ೨೪ ಗಂಟೆ ನೀರು ದೊರಕುತ್ತದೆ ಎಂಬ ಆಮಿಷವನ್ನು ಸರ್ಕಾರ ಜನತೆಯ ಮುಂದಿಟ್ಟಿದೆ. ಸರ್ಕಾರ ಈ ಕನಸನ್ನು ಮಾರಲು ಸರ್ವಸಿದ್ಧತೆಗಳನ್ನೂ ಮಾಡಿಕೊಂಡಿದೆ. ಶ್ರೀಮಂತರು ಮತ್ತು ಮಧ್ಯಮ ವರ್ಗದ ಮಂದಿಗೆ ಇದು ಕರ್ಣಾನಂದಕರವಾಗಿ ಕೇಳಿಸಬಹುದು. ಆದರೆ ಸಮಾಜದ ಕೆಳಸ್ತರದ ಜನ, ಕೊಳಗೇರಿ ನಿವಾಸಿಗಳು, ದಾರಿದ್ರ್ಯದಿಂದ ನಲುಗುತ್ತಿರುವ ಅಪಾರ ಜನಸ್ತೋಮದ ನೆಮ್ಮದಿಯ ನಾಳೆಗಳನ್ನು ಕಸಿಯುವ ಇಂತಹ ಯೋಜನೆಗಳು ಬೇಕೇ ?



ಜಿಲ್ಲಾ, ತಾಲ್ಲೂಕು ಮತ್ತು ಹೋಬಳಿ ಕೇಂದ್ರಗಳಿಗೆ ಈ ಯೋಜನೆಯಡಿ ನೀರನ್ನು ಪೂರೈಸಲಾಗುತ್ತದೆ. ಈ ಯೋಜನೆಗೆ 'ಕನ್ನಡಗಂಗಾ' ಎಂಬ ಆಕರ್ಷಕ ಹೆಸರನ್ನು ಇಡಲಾಗಿದೆ. ಮುಂದೆ ಇಡೀ ಕರ್ನಾಟಕಕ್ಕೆ ಖಾಸಗೀಕರಣಕ್ಕೆ ಒಳಗಾದ ನೀರನ್ನು ಸರಬರಾಜು ಮಾಡಲಾಗುತ್ತದೆ.

ಕೆಲವು ವರ್ಷಗಳ ಹಿಂದೆ ಮಧ್ಯಪ್ರದೇಶದಲ್ಲಿ ಒಂದು ನದಿಯನ್ನೇ ಒಬ್ಬ ಖಾಸಗಿ ವ್ಯಕ್ತಿಗೆ ಮಾರಲಾಯಿತು. ನಮ್ಮ ರಾಜ್ಯದಲ್ಲಿ ಜಾರಿಯಾಗಲು ಸಿದ್ಧಪಡಿಸಿರುವ ನೀರಿನ ಖಾಸಗೀಕರಣ ಯೋಜನೆಯನ್ನು ಗಮನಿಸಿದರೆ, ಮುಂಬರುವ ದಿನಗಳಲ್ಲಿ ನದಿಗಳೂ ಹರಾಜಾಗುತ್ತವೆಯೋ ಏನೋ! ಇರಲಿ, ಈ ಖಾಸಗೀಕರಣ ಯೋಜನೆಯಿಂದ ಜನರಿಗೆ ೨೪ ಗಂಟೆ ನೀರು ದೊರಕುತ್ತದೆ ಎಂಬ ಆಮಿಷವನ್ನು ಸರ್ಕಾರ ಜನತೆಯ ಮುಂದಿಟ್ಟಿದೆ. ಸರ್ಕಾರ ಈ ಕನಸನ್ನು ಮಾರಲು ಸರ್ವಸಿದ್ಧತೆಗಳನ್ನೂ ಮಾಡಿಕೊಂಡಿದೆ. ಶ್ರೀಮಂತರು ಮತ್ತು ಮಧ್ಯಮ ವರ್ಗದ ಮಂದಿಗೆ ಇದು ಕರ್ಣಾನಂದಕರವಾಗಿ ಕೇಳಿಸಬಹುದು. ಆದರೆ ಸಮಾಜದ ಕೆಳಸ್ತರದ ಜನ, ಕೊಳಗೇರಿ ನಿವಾಸಿಗಳು, ದಾರಿದ್ರ್ಯದಿಂದ ನಲುಗುತ್ತಿರುವ ಅಪಾರ ಜನಸ್ತೋಮದ ನೆಮ್ಮದಿಯ ನಾಳೆಗಳನ್ನು ಕಸಿಯುವ ಇಂತಹ ಯೋಜನೆಗಳು ಬೇಕೇ? ನಮ್ಮ ರಾಷ್ಟ್ರದ ಇಡೀ ನೀರು ಸರಬರಾಜು ವ್ಯವಸ್ಥೆಗೆ ಉದ್ಯಮದ ಆಯಾಮ ದೊರೆತರೆ ಸುಮಾರು ೧೩ ಲಕ್ಷ ಕೋಟಿಯಷ್ಟು ಮೊತ್ತದ ವ್ಯವಹಾರವಾಗುತ್ತದೆ ಎಂಬುದು ಸದ್ಯದ ಅಂದಾಜು. ಆದುದರಿಂದ ಖಾಸಗಿ ಉದ್ಯಮಕ್ಕೆ ಈ ಯೋಜನೆ ಚಿನ್ನದ ಅಥವಾ ಪ್ಲಾಟಿನಂ ಮೊಟ್ಟೆಗಳನ್ನು ಇಡುವ ಕೋಳಿಯಾಗಿದೆ! ಸರ್ಕಾರ ಅವರ ನೆರವಿಗೆ ಮುಂದಾಗಿದೆ.

'ಕನ್ನಡಗಂಗಾ' ಯೋಜನೆ ಅನುಷ್ಠಾನಗೊಳ್ಳಲಿರುವ ಊರುಗಳನ್ನು ಗಮನಿಸಿದಾಗ ಸಾಮಾನ್ಯ ಅಂಶವೊಂದು ತಿಳಿದುಬರುತ್ತದೆ. ಈ ೧೬ ಪಟ್ಟಣಗಳಲ್ಲಿ ಹೆಚ್ಚಿನವು ಇರುವುದು ಜಲಮೂಲಗಳ ಸಮೀಪದಲ್ಲೇ. ಕುಶಾಲನಗರ, ಮಂಡ್ಯ ಮತ್ತು ಶ್ರೀರಂಗಪಟ್ಟಣದ ಸುತ್ತಮುತ್ತ ಪ್ರದೇಶದಲ್ಲಿ ಕಾವೇರಿ ಹರಿಯುತ್ತಾಳೆ. ಕುಶಾಲನಗರದ ಬಳಿ ಹಾರಂಗಿ ಜಲಾಶಯವಿದೆ. ತೀರ್ಥಹಳ್ಳಿ, ಶಿವಮೊಗ್ಗ ತುಂಗಾ ನದಿಯ ದಡದಲ್ಲಿಯೇ ಇವೆ. ಅಲ್ಲದೆ ಶಿವಮೊಗ್ಗೆಗೆ ತಾಗಿದಂತೆಯೇ ಇವೆ ಗಾಜನೂರು ಮತ್ತು ಭದ್ರಾ ಅಣೆಕಟ್ಟುಗಳು. ಬಾಗೂರು-ನವಿಲೆ ಸುರಂಗದ ಮೂಲಕ ಹೇಮಾವತಿ ತುಮಕೂರಿನ ಜನರಿಗೆ ನೀರುಣಿಸಿ ಅವರನ್ನೂ ತಣಿಸುತ್ತಿದ್ದಾಳೆ. ಬಿಜಾಪುರದ ಸ್ವಲ್ಪ ದೂರದಲ್ಲಿದೆ ಆಲಮಟ್ಟಿ ಅಣೆಕಟ್ಟು ಮತ್ತು ಕೃಷ್ಣಾ ನದಿ. ಹುಮ್ನಾಬಾದ್ ಶಹರಿನ ಬಳಿ ಇದೆ ಕಾರಂಜಾ ನದಿ ಮತ್ತು ಅಣೆಕಟ್ಟು. ಹಾಗೆಯೇ ಹುಕ್ಕೇರಿ, ಸಂಕೇಶ್ವರಗಳ ಸಮೀಪ ಘಟಪ್ರಭಾ ಹರಿಯುತ್ತದೆ. ಅಲ್ಲೂ ಅಣೆಕಟ್ಟಿದೆ. ಈಗಾಗಲೇ ಲಭ್ಯವಿರುವ ಜಲಮೂಲವನ್ನು ಬಳಸಿ ಖಾಸಗಿ ಲಾಭ ಪಡೆಯುವುದು ಅದೆಂಥ ಉದ್ಯಮ? ನೀರಿಲ್ಲದ ಕಡೆ ನೀರು ತರಬಲ್ಲದೆ ಖಾಸಗಿ ಉದ್ಯಮ? ಈ ಸ್ಥಳಗಳ ಪುರಸಭೆ, ನಗರಸಭೆ ಮತ್ತು ಪಟ್ಟಣ ಪಂಚಾಯತಿಗಳಿಗೆ ಜಲಮೂಲಗಳಿಂದ ನೀರನ್ನು ಸಾರ್ವಜನಿಕ ಸೇವೆಯೆಂದು ಸರಬರಾಜು ಮಾಡಲು ಸಾಧ್ಯವಾಗುವುದಿಲ್ಲವೇ? ಇದಕ್ಕಾಗಿ ಹಣ ಸಂಗ್ರಹಿಸಲು ಬೇರೆ ಮಾರ್ಗಗಳು ಇರಲಿಲ್ಲವೇ? ಇವುಗಳ ಬಗೆಗೆ ಅಧ್ಯಯನಗಳು ನಡೆದಿವೆಯೇ?



ತಳಮಟ್ಟದ ಸರ್ಕಾರಿ ಯಂತ್ರಗಳಿಂದ ಸಾರ್ವಜನಿಕರಿಗೆ ಮಾಹಿತಿಗಳನ್ನು ನೀಡಲಾಗಿದೆಯೇ? ಇಂಥಾ ಪ್ರಶ್ನೆಗಳಿಗೆ ಸರ್ಕಾರ ಉತ್ತರ ನೀಡಲು ಸಿದ್ಧವಿದೆಯೇ?

ಇಲ್ಲಿ ಒಂದು ಅಂಶವಂತೂ ಸ್ಪಷ್ಟ. ಅದೆಂದರೆ, ಪಾರದರ್ಶಕತೆಯ ಕೊರತೆ. ವಿಶ್ವಬ್ಯಾಂಕ್ ಕೃಪಾಪೋಷಿತ ಖಾಸಗೀಕರಣಕ್ಕೆ ಕುಮ್ಮಕ್ಕು ನೀಡುವ ಯೋಜನೆಗಳೆಲ್ಲಾ ತರಾತುರಿಯಲ್ಲಿ ಜಾರಿಯಾಗುತ್ತವೆ. ತಳಮಟ್ಟದಲ್ಲಿ ಪ್ರಜಾಪ್ರಭುತ್ವವಾದಿ ಪ್ರಕ್ರಿಯೆಗಳಿಗೆ ತಿಲಾಂಜಲಿ ನೀಡಿ ಜನರಿಂದ ಮಹತ್ತರವಾದ ಅನೇಕ ಮಾಹಿತಿಗಳನ್ನು ಮರೆಮಾಚಲಾಗುತ್ತದೆ. ಈ ಯೋಜನೆಯೂ ಅವುಗಳಿಗೆ ಹೊರತಾಗಿರುವುದಿಲ್ಲ. ಗಣಿಗಾರಿಕೆ, ಭೂಹಗರಣಗಳಿಗೆ ಹೆಸರುವಾಸಿಯಾಗಿರುವ ಈ ಸರ್ಕಾರ ಪಂಚಭೂತಗಳಲ್ಲಿ ಒಂದಾದ ನೀರಿನ ಕ್ಷೇತ್ರದಲ್ಲಿ ಹಗರಣದಲ್ಲಿ ಸಿಲುಕುವ ಸಾಧ್ಯತೆಗಳು ಈಗ ಸ್ಪಷ್ಟ. ಆದರೆ ಜನರ ಸ್ಥಿತಿ ಹದಗೆಟ್ಟಾದ ಮೇಲೇನು?

ನಮ್ಮ ರಾಷ್ಟ್ರದಲ್ಲಿ ಶಿಕ್ಷಣ, ಆರೋಗ್ಯ, ಸಾರಿಗೆ, ಆರ್ಥಿಕ ಕ್ಷೇತ್ರ, ಕೈಗಾರಿಕೆ, ಚಿಲ್ಲರೆ ವ್ಯಾಪಾರಗಳು... ಇವೇ ಮುಂತಾದ ವಲಯಗಳಲ್ಲಿ ಬಹುರಾಷ್ಟ್ರೀಯ ಕಂಪನಿಗಳು ತಮ್ಮ ಏಕಸ್ವಾಮ್ಯವನ್ನು ಸ್ಥಾಪಿಸಲು ಎಲ್ಲ ಬಗೆಯ ಹುನ್ನಾರಗಳನ್ನೂ ಮಾಡುತ್ತಿವೆ. ಇದರಲ್ಲಿ ದೇಶೀಯ ಖಾಸಗಿ ರಂಗದ ಶಕ್ತಿಗಳು ವಿದೇಶೀ ಕಂಪನಿಗಳ ಬಾಲಬಡುಕರಾಗಿವೆ. ಇವುಗಳ ಜೊತೆ ಅಧಿಕಾರಿಗಳು ಮತ್ತು ರಾಜಕಾರಣಿಗಳು ಶಾಮೀಲಾಗಿದ್ದಾರೆ.

ನೀರು ಹಂಚಿಕೆಯ ವಿಷಯದಲ್ಲಿ, ರಾಷ್ಟ್ರೀಯ ಜಲ ನೀತಿಯ ಅನ್ವಯ ಕುಡಿಯುವ ನೀರು ಮತ್ತು ನೀರಾವರಿಗಳಿಗೆ ಆದ್ಯತೆ ಸಿಗಬೇಕು. ಆದರೆ ಅದು ಸಿಗುತ್ತಿರುವುದು ಕೈಗಾರಿಕೆಗಳಿಗೆ ಮತ್ತು ನಗರ ಪ್ರದೇಶಗಳಿಗೆ ಮಾತ್ರ. ಸ್ಥಳೀಯ ಮಟ್ಟದಲ್ಲಿ ನೀರು ತಲುಪುವ ವಿಚಾರದಲ್ಲಿ ಇರುವ ಅಸಮಾನತೆ ಹೆಚ್ಚುತ್ತಿದೆ. ಇದರಿಂದ ನೀರಿನ ಬಳಕೆಯ ವಿಷಯದಲ್ಲಿ ಸಂಘರ್ಷಗಳೂ ಜರುಗಲಿವೆ. ನಗರ ಮತ್ತು ಗ್ರಾಮೀಣ ಪ್ರದೇಶಗಳು, ಕೃಷಿ ಮತ್ತು ಕೈಗಾರಿಕೆಯಂಥ ಕ್ಷೇತ್ರಗಳು, ಅನುಕೂಲಕರ ವರ್ಗ ಮತ್ತು ಅಂಚಿನಲ್ಲಿರುವ ವರ್ಗಗಳು, ಕೆಳ ಮತ್ತು ಮೇಲು ಜಾತಿಗಳು ಮತ್ತು ವಿವಿಧ ರಾಜ್ಯಗಳ ನಡುವೆ ಕಾದಾಟಗಳು ಪ್ರಾರಂಭವಾಗಿವೆ. ಇಂತಹ ಜ್ವಲಂತ ಸಮಸ್ಯೆಗಳಿರುವಾಗ, ಖಾಸಗಿ ನೀರು ಕಂಪನಿಗಳ ಪ್ರವೇಶಕ್ಕೆ ಎಲ್ಲ ರೀತಿಯ ಬೆಂಬಲವನ್ನು ಸರ್ಕಾರಗಳು ನೀಡುತ್ತಿವೆ. ನಗರ ಮತ್ತು ಅರೆ-ನಗರ ಪ್ರದೇಶಗಳಲ್ಲಿ ಕುಡಿಯುವ ನೀರು ಮತ್ತು ಕೈಗಾರಿಕೆಗಳ ಬಳಕೆಗಾಗಿ ಬೇಕಾಗಿರುವ ನೀರಿನ ಅವಶ್ಯಕತೆಗಳು ಜಾಸ್ತಿಯಾಗುತ್ತಿವೆ. ಆದರೆ ಅದನ್ನು ಸಮರ್ಪಕವಾಗಿ ಪೂರೈಸಲು ಸ್ಥಳೀಯ ಮಟ್ಟದ ಆಡಳಿತ ಸಂಸ್ಥೆಗಳಿಗೆ ಸಾಧ್ಯವಾಗದೆ ಇರುವುದಕ್ಕೆ ಕಾರಣ ಅವುಗಳಲ್ಲಿ ರಾರಾಜಿಸುತ್ತಿರುವ ದುರಾಡಳಿತ. ಅದನ್ನೇ ಬೊಟ್ಟು ಮಾಡಿ ತೋರಿಸುತ್ತ ಈ ಸಮಸ್ಯೆಗೆ ಸೂಕ್ತ ಪರಿಹಾರವೆಂದರೆ ನೀರಿನ ಖಾಸಗೀಕರಣ ಎಂಬುದು ಈ ಪ್ರಕ್ರಿಯೆಯ ಪರವಾಗಿರುವವರ ಸಮರ್ಥನೆ. ನೀರಿಗೂ ದುಬಾರಿ ಹಣ ನೀಡುವಂತಹ ಪರಿಸ್ಥಿತಿ ಬಂದರೆ ...ಕೊಳ್ಳುವ ಶಕ್ತಿ ಇರದ ವಂಚಿತ ಸಮುದಾಯಗಳ ಪಾಡೇನು?

ನೀರಿನ ಖಾಸಗೀಕರಣವೆಂದರೆ, ಅದರ ಹಿಂದೆ ಲಾಭ ಗಳಿಸುವ ಏಕೈಕ ಉದ್ದೇಶವಿದೆ. ಅದು ನೀರಿನ ವ್ಯಾಪಾರೀಕರಣವೇ ಸರಿ. ಇಲ್ಲಿ ನೀರು ಸರಕೀಕರಣಕ್ಕೆ ಒಳಗಾಗುತ್ತದೆ. ಇದು ಭವಿಷ್ಯ ಮಾರುಕಟ್ಟೆಗೂ ಹೋದೀತು! ಜೀವಜಾಲದ ಸುತ್ತ ಶೋಷಣೆ, ಭ್ರಷ್ಟಾಚಾರಗಳು ಬೆಳೆಯುತ್ತವೆ. ನೀರು ಪ್ರಬಲ ವರ್ಗದವರ ಅಸ್ತ್ರವಾಗುತ್ತದೆ. ಈ ಋಣಾತ್ಮಕ ಬೆಳವಣಿಗೆಗಳನ್ನು ತಪ್ಪಿಸಲು ನೀರನ್ನು ಸಾರ್ವಜನಿಕ ಹಿತಕ್ಕಾಗಿ ಸೂಕ್ತವಾಗಿ ಸಂರಕ್ಷಿಸಬೇಕು, ಪೋಷಿಸಬೇಕು, ಹಂಚಬೇಕು ಮತ್ತು ಜವಾಬ್ದಾರಿಯಿಂದ ಬಳಸಬೇಕು. ಅದು ಎಲ್ಲರ ಕೈಗೆಟಕುವಂತೆ ಆಗಬೇಕಿರುವುದು ವರ್ತಮಾನದ ತುರ್ತು.

೨೦೦೨ರಲ್ಲಿ ಸರ್ಕಾರ ರಾಜ್ಯದ ಜಲನೀತಿಯನ್ನು ಕರ್ನಾಟಕ ನಗರ ಪ್ರದೇಶಗಳ ಕುಡಿಯುವ ನೀರು ಮತ್ತು ನಿರ್ಮಲೀಕರಣ ನೀತಿಯ (ಕರ್ನಾಟಕ ಅರ್ಬನ್ ಡ್ರಿಂಕಿಂಗ್ ವಾಟರ್ ಆ್ಯಂಡ್ ಸ್ಯಾನಿಟೇಶನ್ ಪಾಲಿಸಿ) ಮೂಲಕ ಪ್ರಸ್ತುತಪಡಿಸಿತು. ಈ ನೀತಿಯ ಪ್ರಸ್ತಾವನೆಯಲ್ಲಿ ''ಜನತೆಗೆ ಬೇಕಾದ ಮತ್ತು ಅವರು ಸ್ವಇಚ್ಛೆಯಿಂದ ಬೆಲೆ ತೆರುವ ಸಾರ್ವತ್ರಿಕ ಜಲ ಮತ್ತು ನಿರ್ಮಲೀಕರಣದ ಸೇವೆಗಳನ್ನು ಖಾತ್ರಿಗೊಳಿಸಬೇಕು'' ಎಂದು ಹೇಳಿಕೆಯಿದೆ. ಇದು ವಿರೋಧಾಭಾಸದಿಂದ ಕೂಡಿದೆ: ಏಕೆಂದರೆ ಸಾರ್ವತ್ರಿಕ ಸರಬರಾಜು ಇರಬೇಕು ಎಂದು ಹೇಳುತ್ತಲೇ ಅದಕ್ಕಾಗಿ ಷರತ್ತುಪೂರ್ವ ಹಣ ಪಾವತಿಯಾಗಬೇಕು ಎಂದೂ ತಿಳಿಸಲಾಗಿದೆ. ಒಂದೋ, ಸರಬರಾಜು ಸಾರ್ವತ್ರಿಕವಾಗಿರಬೇಕು ಅಥವಾ ಷರತ್ತುಪೂರ್ವಕವಾಗಿರಬೇಕು. ಈ ನೀತಿಯನ್ನು ಹೀಗೆ ವ್ಯಾಖ್ಯಾನಿಸಬಹುದೇನೋ. ಉದಾಹರಣೆ, ಖಾಸಗಿ ಈಜುಕೊಳಕ್ಕೆ ನೀರು ಬೇಕಾದರೆ, ಅದು ಹಣ ಸಂದಾಯವಾಗುತ್ತಿರುವವರೆಗೆ ದೊರಕುತ್ತದೆ. ಆದರೆ

ನಿಮಗೆ ಕುಡಿಯುವುದಕ್ಕೆ ನೀರು ಬೇಕಾದರೆ, ಹಣ ಸಂದಾಯ ಮಾಡಿದರೆ ಮಾತ್ರ ಅದು ಲಭ್ಯವಾಗುತ್ತದೆ. ನೀರು ಜನತೆಯ ಆಸ್ತಿ ಎಂಬ ಮೂಲಭೂತ ಕಲ್ಪನೆಗೆ ವಿರುದ್ಧವಾದ ನಿಲುಮೆಯಿದು. ನಮ್ಮ ರಾಜ್ಯದ ನೀರಿನ ಖಾಸಗೀಕರಣಕ್ಕೆ ಶಂಕುಸ್ಥಾಪನೆ ಹಾಕಿದ್ದು ಈ ಜಲನೀತಿಯ ಜಾರಿಯಿಂದ ಎಂದು ಹೇಳಿದರೆ ತಪ್ಪಾಗುವುದಿಲ್ಲ. ನಮ್ಮ ರಾಜ್ಯದ ಹೆಚ್ಚಿನ ನಗರವಾಸಿಗಳು ಬಡವರು, ಜನತೆಗೆ ನೀರು ಬೇಕು, ಅವರು ಸ್ವಯಿಚ್ಛೆಯಿಂದ ಅದಕ್ಕಾಗಿ ಹಣ ಪಾವತಿಸುತ್ತಾರೆ ಎಂಬುದಕ್ಕೆ ಯಾವುದೇ ಸಾಕ್ಷ್ಯಾಧಾರಗಳಿಲ್ಲ. ಅವರ ಮೂಲಭೂತ ಅವಶ್ಯಕತೆಗಳಲ್ಲಿ ನೀರಿಗೆ ಮಹತ್ತರವಾದ ಸ್ಥಾನವಿದೆ. ಜೀವನ ನಿರ್ವಹಿಸುವುದಕ್ಕೆ ಅದು ಅವರಿಗೆ ಬೇಕೇ ಬೇಕು. ಆದುದರಿಂದ, ಅವರು ಅದಕ್ಕಾಗಿ ಹಣ ಪಾವತಿಸುತ್ತಾರೆಯೇ ಹೊರತು, ಸ್ವಯಿಚ್ಛೆಯಿಂದಲ್ಲ ಎಂಬ ಅಂಶವನ್ನು ಮನಗಾಣಬೇಕು. ಈ ಪರಿಸ್ಥಿತಿಯನ್ನು ನೀರಿನ ಖಾಸಗೀಕರಣಕ್ಕೆ ಅನುಕೂಲಕರವಾಗುವಂತೆ ತಿರುಚಿವೆ ಕರ್ನಾಟಕ ಅರ್ಬನ್ ಇನ್‌ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಫೈನಾನ್ಸ್ ಕಾರ್ಪೊರೇಶನ್, ಕರ್ನಾಟಕ ಅರ್ಬನ್ ವಾಟರ್ ಸಪ್ಲೈ ಆ್ಯಂಡ್ ಸಿವರೇಜ್ ಬೋರ್ಡ್ ಮತ್ತು ಬೆಂಗಳೂರು ವಾಟರ್ ಸಪ್ಲೈ ಆ್ಯಂಡ್ ಸಿವರೇಜ್ ಬೋರ್ಡ್‌ಗಳಂಥ ಸಂಸ್ಥೆಗಳು. ಈ ಜಲನೀತಿಯು ರಾಜ್ಯವನ್ನು ಒಂದು ಪ್ರವರ್ತಕನ ರೂಪದಲ್ಲಿ ಕಾಣುತ್ತದೆ. ರಾಜ್ಯದಲ್ಲಿ ಲಭ್ಯವಿರುವ ನೀರಿನ ಸಂಪನ್ಮೂಲಗಳನ್ನು ಸಂಘಟಿಸಬೇಕು, ನಂತರ ಕುಡಿಯುವ ನೀರನ್ನು ಖಾಸಗಿ ಶಕ್ತಿಗಳಿಗೆ ಹಸ್ತಾಂತರಿಸದೆ ಅದನ್ನು ವಾಣಿಜ್ಯೀಕರಣ ಆಯಾಮದೊಳಗೆ ಒಳಪಡಿಸಬೇಕೆಂಬುದೇ ಇದರ ಹಿಂದಿರುವ ಇರಾದೆ.

ನಮ್ಮ ರಾಜ್ಯದ ಜಲಖಾಸಗೀಕರಣ ನೀತಿಯ ಹಿಂದೆ ವಿಶ್ವದ ಅರಕ್ಷಕ ಅಮೇರಿಕಾದ ಹುನ್ನಾರವಿರುವುದು ಸ್ಪಷ್ಟವಾಗುತ್ತಿದೆ. ಅಮೇರಿಕಾ ಸರ್ಕಾರ ಮತ್ತು ಆ ರಾಷ್ಟ್ರದ ಬಲಾಢ್ಯ ಕಾರ್ಪೊರೇಟ್ ಕಂಪೆನಿಗಳ ಪ್ರಕಾರ ನಮ್ಮ ರಾಷ್ಟ್ರದಲ್ಲಿ ಸುಮಾರು ೫೦ ಮಿಲಿಯನ್ ಡಾಲರ್‌ಗಳಷ್ಟು ಮೊತ್ತದ ಮಾರುಕಟ್ಟೆ ಇದೆ. ''ಮಾರಿಯ ಕಣ್ಣು ಹೋತದ ಮೇಲೆ'' ಎಂದು ಹೇಳ್ತಾರಲ್ಲಾ ಹಾಗೆ ಇದು ಅಮೇರಿಕಾದ ಪಾಲಿಗೆ ಅತಿ ಅತ್ಯಾಕರ್ಷಕ ಕ್ಷೇತ್ರವಾಗಿದೆ. ಕಳೆದ ಕೆಲವು ವರ್ಷಗಳಿಂದ ನಮ್ಮ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ವಿಶ್ವದ ದೊಡ್ಡಣ್ಣನಿಗೆ ದೊಗ್ಗು ಸಲಾಮು ಹಾಕುತ್ತಲೇ ಬರುತ್ತಿವೆ.

ಇತ್ತೀಚೆಗೆ, ಅಂದರೆ ಮಾರ್ಚ್ ೨೦೧೧ರಲ್ಲಿ ಅಮೇರಿಕಾ ನೀರು ವ್ಯಾಪಾರ ನಿಯೋಗವೊಂದು ಬೆಂಗಳೂರಿಗೆ ಭೇಟಿ ನೀಡಿತು. ಆ ನಿಯೋಗದಲ್ಲಿ ೧೬ ಕಾರ್ಪೊರೇಟ್ ಕಂಪೆನಿಗಳಿದ್ದುವು. ನೀರಿನ ಖಾಸಗೀಕರಣವನ್ನು ವಿರೋಧಿಸುತ್ತಿರುವ ಕೆಲವು ಸಂಘಟನೆಗಳ ಪ್ರತಿನಿಧಿಗಳನ್ನು ರಾಜ್ಯದ ನಗರಾಭಿವೃದ್ಧಿ ಸಚಿವ ಸುರೇಶ್ ಕುಮಾರ್ ಫೆಬ್ರುವರಿ ೨೩, ೨೦೧೧ರಂದು ಭೇಟಿ ಮಾಡಿದರು. ಆ ಸಂದರ್ಭದಲ್ಲಿ ಸಂಘಟನೆಗಳು ಈ ನಿಯೋಗದ ಭೇಟಿ ಕುರಿತು ಪ್ರಸ್ತಾಪಿಸಿದವು, ಸಚಿವರಿಗೆ ಅದರ ಸುಳಿವೇ ಇರಲಿಲ್ಲ. ಅಲ್ಲಿದ್ದ ಒಬ್ಬ ಜಲಮಂಡಳಿ ಅಧಿಕಾರಿ ಈ ವಿಷಯಕ್ಕೆ ಸಂಬಂಧಿಸಿದಂತೆ ಒಂದು ಈ-ಮೈಲ್ ಬಂದಿದೆಯೆಂದು ತಿಳಿಸಿದರು! ಹೇಗಿದೆ ನೋಡಿ, ಅಮೇರಿಕಾ ಸರ್ಕಾರ ನಡೆದುಕೊಳ್ಳುವ ರೀತಿ!

ಆ ಈ-ಮೈಲ್ ಓದಿದಾಗಲೇ ತಿಳಿದದ್ದು – ಅಮೇರಿಕಾ ಸರ್ಕಾರದ ವಾಣಿಜ್ಯ ಇಲಾಖೆ ಈ ವ್ಯಾಪಾರ ನಿಯೋಗವನ್ನು ಸಂಘಟಿಸಿತ್ತು ಎಂದು. ಈ ನಿಯೋಗ ಏಕಪಕ್ಷೀಯವಾಗಿ ತಾನು ಭೇಟಿ ಮಾಡುವ ದಿನಾಂಕ, ಏಜೆನ್ಸಿಗಳ ಭೇಟಿ, ಸ್ಥಳಗಳ ವೀಕ್ಷಣೆ ಮುಂತಾದುವುಗಳನ್ನು ನಿರ್ಧರಿಸಿತ್ತು. ಜಲಮಂಡಳಿ ಈ ನಿಯೋಗವನ್ನು ಬರಮಾಡಿಕೊಂಡು, ಅದಕ್ಕೆ ಸೂಕ್ತ ರೀತಿಯಲ್ಲಿ ಸಹಾಯ ಮಾಡುವಂತೆ ಮಾತ್ರ ಈ ಸಂದೇಶದಲ್ಲಿ ತಿಳಿಸಲಾಗಿತ್ತು! ಇದು ಎಲ್ಲ ನಿಯಮಗಳನ್ನು ಗಾಳಿಗೆ ತೂರಿ, ಅಮೇರಿಕಾ ನಡೆದುಕೊಳ್ಳುವ ವೈಖರಿಗೆ ಒಂದು ಉದಾಹರಣೆಯಷ್ಟೆ.

ಈ ಇಡೀ ಪ್ರಕರಣದಲ್ಲಿ ಸಚಿವ ಸುರೇಶ್ ಕುಮಾರ್ ಅವರ ದ್ವಂದ್ವ ನಿಲುವುಗಳು ಬಟಾಬಯಲಾಗಿವೆ. ಅವರು ಪ್ರತಿಭಟಿಸುತ್ತಿರುವ ಸಂಘಟನೆಗಳೊಡನೆ ಮಾತನಾಡುತ್ತ ಸದನದಲ್ಲಿ ವಿರೋಧಪಕ್ಷದ ಸದಸ್ಯನಾಗಿದ್ದಾಗಿಂದಲೂ ನೀರಿನ ಖಾಸಗೀಕರಣವನ್ನು ವಿರೋಧಿಸುತ್ತಿದ್ದೇನೆ ಎಂದು ಫೆಬ್ರುವರಿ ೨೩, ೨೦೧೧ರ ಸಭೆಯಲ್ಲಿ ತಿಳಿಸಿದ್ದರು. ಆದರೆ ನಂತರ ತಮ್ಮ 'ಬ್ಲಾಗ್'ನಲ್ಲಿ ಪ್ರತಿಭಟನಾಕಾರರ ನೀರು ಖಾಸಗೀಕರಣದ ತಿಳಿವಳಿಕೆಯನ್ನು ಪುನರ್ವ್ಯಾಖ್ಯಾನಿಸುತ್ತ ಖಾಸಗೀಕರಣ ಮತ್ತು ಖಾಸಗಿ ಭಾಗವಹಿಸುವಿಕೆಗಳ ನಡುವಿನ ವ್ಯತ್ಯಾಸವನ್ನು ತಮ್ಮದೇ ಆದ ರೀತಿಯಲ್ಲಿ ವಿವರಿಸಿದರು. ಅಂದರೆ ಪ್ರತಿಭಟನಾಕಾರರ ನಿಲುವು ಸಕಾರಾತ್ಮಕವಾಗಿಲ್ಲ ಮತ್ತು ಅಸಮರ್ಥನೀಯ ಎಂಬುದನ್ನು ಸೂಚ್ಯವಾಗಿ ಪ್ರತಿಪಾದಿಸಿದ್ದರು!

ಆಗಲೇ ತಿಳಿಸಿದಂತೆ ಪ್ರಸ್ತುತ ನಮ್ಮ ರಾಜ್ಯದಲ್ಲಿ ಹುಬ್ಬಳ್ಳಿ, ಧಾರವಾಡ, ಬೆಳಗಾಂ



ಮತ್ತು ಗುಲ್ಬರ್ಗಾ ನಗರಗಳಲ್ಲಿನ ನೀರು ಸರಬರಾಜು ಕುರಿತ ಕಾರ್ಯಾಚರಣೆ ಹಾಗೂ ನಿರ್ವಹಣೆಯನ್ನು ಫ್ರೆಂಚ್ ಮೂಲದ ವಿಯೊಲಿಯ ಎಂಬ ಬಹುರಾಷ್ಟ್ರೀಯ ಕಂಪನಿಗೆ ನೀಡಲಾಗಿದೆ. ಮೈಸೂರಿನಲ್ಲಿ ಇಡೀ ನೀರಿನ ಸೇವಾ ಸೌಲಭ್ಯಗಳನ್ನು ನಿರ್ವಹಿಸುತ್ತಿರುವುದು ಟಾಟಾ ಗುಂಪಿನ ಜಸ್ಕೊ ಕಂಪನಿ. ಇದಕ್ಕಾಗಿ ಸರ್ಕಾರ ೧೯೮ ಕೋಟಿ ರೂ.ಗಳನ್ನು ಆ ಕಂಪನಿಗೆ ನೀಡಿದೆ ಎಂದು ಆ್ಯಕ್ಷನ್ ಏಯ್ಡ್ ಸಂಸ್ಥೆಯ ಕ್ಷಿತಿಜ್ ಅರಸ್ ತಿಳಿಸಿದ್ದಾರೆ. ''ಮೈಸೂರಿನಲ್ಲಿ ಸುಮಾರು ೧೧೯ ವರ್ಷಗಳಿಂದ ಸಾರ್ವಜನಿಕ ಕ್ಷೇತ್ರದ ವಾಣಿವಿಲಾಸ್ ವರ್ಕ್ಸ್ ಸಂಸ್ಥೆ ನೀರಿನ ಸರಬರಾಜನ್ನು ಸಮರ್ಪಕವಾಗಿ ನಿರ್ವಹಿಸುತ್ತ ಬಂದಿತ್ತು. ಜಸ್ಕೋ ಕಂಪೆನಿಗೆ ಗುತ್ತಿಗೆ ನೀಡಿದ ರೀತಿಯು ವಿವಾದಾಸ್ಪದವಾಗಿತ್ತು. ೨೦೦೭ರಲ್ಲಿ ಅಂದಿನ ಮೈಸೂರಿನ ಕಮೀಷನರ್ ಆಗಿದ್ದ ಮಣಿವಣ್ಣನ್ ಮೈಸೂರಿನ ಕೌನ್ಸಿಲಿನ ಅವಧಿ ಮುಗಿದಾಗ, ಈ ಕಂಪೆನಿಯ ಜೊತೆ ತರಾತುರಿಯಲ್ಲಿ ಒಪ್ಪಂದ ಮಾಡಿಕೊಂಡರು. ವಾಣಿವಿಲಾಸ್ ವರ್ಕ್ಸ್‌ನ ಮುಖ್ಯ ಇಂಜಿನಿಯರ್, ಖಾಸಗೀಕರಣ ಮಾಡದೆ, ನೀರು ಸರಬರಾಜನ್ನು ಸುಸೂತ್ರವಾಗಿ ನಿರ್ವಹಿಸುವ ಸಾಮರ್ಥ್ಯವಿದೆಯೆಂದು ಲಿಖಿತರೂಪದಲ್ಲಿ ತಮ್ಮ ಅಭಿಪ್ರಾಯವನ್ನು ಮಂಡಿಸಿದರೂ, ಖಾಸಗೀಕರಣಕ್ಕೆ ಚಾಲನೆ ನೀಡಲಾಯಿತು'' ಎಂಬ ಅಂಶವನ್ನು ಅರಸ್ ಬಹಿರಂಗಗೊಳಿಸಿದ್ದಾರೆ.

ಇದು ನೀರಿನ ಖಾಸಗೀಕರಣದ ಸುತ್ತ ಬೆಳೆಯುತ್ತಿರುವ ವಿವಾದದ ಒಂದು ಸ್ಯಾಂಪಲ್, ಅಷ್ಟೆ. ಇದರಲ್ಲಿ ಎಷ್ಟು ಹಗರಣಗಳಾಗಿವೆಯೋ ಬಲ್ಲವರಾರು? ''ನಮಗೆ ನೀರಿನ ಖಾಸಗೀಕರಣ ಬೇಡ'', ಎಂದು ಜನತೆ ಒಕ್ಕೊರಲಿನಿಂದ ರಾಜ್ಯವ್ಯಾಪಿ ಪ್ರತಿಭಟನೆಯನ್ನು ಸಂಘಟಿಸಿದಾಗ ಮಾತ್ರ ಸರ್ಕಾರಕ್ಕೆ ಬಿಸಿ ತಟ್ಟಬಹುದು. ಸಮಷ್ಟಿಯ ಹಿತದೃಷ್ಟಿಯಿಂದ ಹಾಗಾಗುವುದು ಒಳಿತು.

ನೀರಿನ ಖಾಸಗೀಕರಣದ ವಿರುದ್ಧ ಅಲ್ಲಲ್ಲಿ ಪ್ರತಿಭಟನೆಗಳು ಜರುಗಿವೆ. ಆದರೆ ಅವು ಒಂದು ಜನಾಂದೋಳನವಾಗಿ ಪರಿವರ್ತನೆಗೊಂಡಿಲ್ಲ. ಆದಿವಾಸಿಗಳು ಮತ್ತು ಇತರ ಜನಪರ ಚಳವಳಿಗಳ ಹೋರಾಟಗಳಿಂದ ಒರಿಸ್ಸಾದಲ್ಲಿ ವೇದಾಂತ ಕಂಪನಿ ಕಾಲ್ತೆಗೆಯುವ ಪರಿಸ್ಥಿತಿ ಉಂಟಾಗಿದೆ. ೧೯೯೦ರ ದಶಕದ ಮಧ್ಯಭಾಗದಲ್ಲಿ 'ನರ್ಮದಾ ಬಚಾವ್' ಆಂದೋಲನದ ದಿಟ್ಟ ಸಂಘರ್ಷದಿಂದ ಸರ್ದಾರ್ ಸರೋವರ ಅಣೆಕಟ್ಟಿನ ಯೋಜನೆಯಿಂದ ಬಲಾಢ್ಯ ವಿಶ್ವ ಬ್ಯಾಂಕ್ ಹಿಂದೆ ಸರಿಯಿತು. ನೀರಿನ ಖಾಸಗೀಕರಣದ ವಿರುದ್ಧ ಕರ್ನಾಟಕದಲ್ಲೂ ಇಂಥ ಒಂದು ಜನಾಂದೋಳನ ರೂಪುಗೊಂಡು ನೀರಿನ ಖಾಸಗೀಕರಣದ ಈ ಜನವಿರೋಧಿ ಕ್ರಮವನ್ನು ಹಿಮ್ಮೆಟ್ಟಿಸಬೇಕಿದೆ.

*(ಆಕರ : ಕೆಲವು ಮಾಹಿತಿಗಳನ್ನು ಡಾ|| ಸಿದ್ದನಗೌಡ ಪಾಟೀಲ ಅವರ 'ಕನ್ನಡಗಂಗಾ ಎಂಬ ನೀರು ಕುಡಿಸುವ ಯೋಜನೆ' ಎಂಬ ಲೇಖನದಿಂದ ಆಯ್ದುಕೊಳ್ಳಲಾಗಿದೆ.)*

**ಮ. ಶ್ರೀ. ಮುರಳಿಕೃಷ್ಣ**
ನಂ. ೩೮, ೩ನೇ ಕ್ರಾಸ್, ರಾಜ ಗಾರ್ಡನಿಯಾ ಲೇಔಟ್, ತುರಹಳ್ಳಿ
ಸುಬ್ರಹ್ಮಣ್ಯಪುರ ಅಂಚೆ, ಉತ್ತರಹಳ್ಳಿ, ಬೆಂಗಳೂರು - ೫೬೦ ೦೬೧

ಜ್ಞಾನಪೀಠ ಪ್ರಶಸ್ತಿ ವಿಜೇತ ಮರಾಠಿ ಕವಿ

# 'ಕುಸುಮಾಗ್ರಜ'ರ ಮೂರು ಕವಿತೆಗಳು

## ೧. ಅವನು

ನನ್ನ ದಿವಾನ್‌ಖಾನೆಯಲ್ಲಿ
ನಾಲ್ಕು ಜನ ಸಂಗಾತಿಗಳೊಂದಿಗೆ
ಕುಳಿತಿರುವಾಗ,
ನಾನು ನಿನ್ನ ಅಸ್ತಿತ್ವ ನಿರಾಕರಿಸುತ್ತೇನೆ.
ಆಗ ನೀನು ನನ್ನತ್ತ
ಅತ್ಯಂತ ಕುತೂಹಲದಿಂದ ನೋಡುತ್ತಿ
ಆಗಸದ ಬಾಗಿಲು
ಅಷ್ಟಷ್ಟೆ ತೆರೆಯುತ್ತದೆ...
ಅವರೆಲ್ಲ ಹೋದ ನಂತರ
ನನ್ನ ಏಕಾಂತದ ಮೇಲೆ
ಮಸುಕಾಗಿ ಇಳಿದು ಬರುತ್ತಿ
ಎದುರಿಗೆ ಕುರ್ಚಿಯ ಮೇಲೆ ಕೂಡುತ್ತಿ
ಮತ್ತೆ ಹೇಳುತ್ತಿ:
ಅಭಿನಂದನೆ !
ನಿನ್ನ ವಿವೇಚನೆ ಅದ್ಭುತವಾಗಿತ್ತು
ನನ್ನ ಅಸ್ತಿತ್ವದ ಬಗ್ಗೆಯೇ ನಾನು
ಶಂಕಿಸತೊಡಗಿದೆ
ಆದರೆ ನನಗೆ ಚೆನ್ನಾಗಿ ಗೊತ್ತು
ನನ್ನನ್ನು ನಂಬುವವರಲ್ಲಿ ನೀನೊಬ್ಬನೆಂದು.
ಕೇವಲ ನಿನ್ನ ದಿವಾನ್‌ಖಾನೆ –
ನಿನ್ನ ಹೃದಯದಿಂದ
ದೂರವಾಗಿದೆ, ಅಷ್ಟೆ!





## ೨. ಸೂರ್ಯಾಸ್ತ

ಈ ಸೂರ್ಯಾಸ್ತ –
ಬಂಗಾರದ ವಿರಾಟ್ ಗರುಡ
ನಿಶ್ಶಬ್ದ... ನಿಗೂಢ...
ಗಿರಿ ಶಿಖರದ ನೆತ್ತಿಯ ಮೇಲೆ
ಇಳಿಯುತ್ತಿದ್ದಾನೆ...!
ಕೆನ್ನೀಲಿಯ ಮೇಘ ಪಂಖಗಳು
ಗಲಿಬಿಲಿಯಾಗಿ ಬಡಿಯುತ್ತಲೆ
ಕರುಣೆದುಂಬಿದ ಕಣ್ಣುಗಳಿಂದ
ಭೂಮಿಯನ್ನು ನೋಡುತ್ತಿದ್ದಾನೆ.
ಕೊನೆಗೆ –
ಯಾವುದೋ ಅಂತಸ್ಥ ಆದೇಶದಿಂದೆಂಬಂತೆ
ಪಂಖಗಳನ್ನು ಹರಡುತ್ತ
ಇಡೀ ಆಕಾಶದ ತುಂಬ ಆವರಿಸಿ
ಪಶ್ಚಿಮದ ದಿಗಂತಕ್ಕೆ ಜಾರುತ್ತಾನೆ !
ಶುಕ್ರತಾರೆ –
ಆಕಾಶದ ಹೆಬ್ಬಾಗಿಲಲಿ ನಿಂತು
ದಿಗ್ಭ್ರಮೆಗೊಂಡು ನೋಡುತ್ತದೆ
ನಿರುಕಿಸುತ್ತದೆ
ಕಂಪನಗೊಳ್ಳುತ್ತದೆ !

## ೩. ನಟ

ನಾಂದಿಯನಂತರ –
ಪರದೆ ಮೇಲೇರಿದಾಗ
ಸಾವಿರ ರಂಗುರಂಗಿನ ಶಬ್ದಗಳು
ತುಂಬಿ ತುಳುಕುತ್ತಿದ್ದವು ನನ್ನೊಳಗೆ
ಅಸಂಖ್ಯ ಭಾವಾಭಿನಯಗಳು –
ಭಯ, ಆಶೆ, ನಿರೀಕ್ಷೆ
ಒಳಗೊಳಗೇ ತಡಕಾಡುತ್ತಿದ್ದವು !
ಈಗ ನಾಟಕ ಸಮಾಪ್ತಿಯ ನಂತರ –
ಖಾಲಿ ಥೇಟರಿನಲ್ಲಿದ್ದೇನೆ
ರಂಗದಿಂದ ನಿಷ್ಕ್ರಮಿಸಲು
ಸಿದ್ಧನಾಗಿದ್ದೇನೆ !
ಖಾಲಿ ಥೇಟರಿನಂತೆಯೇ !
ನಾನು ಆಡಿದ ಮಾತುಗಳು
ಸುತ್ತ ತೇಲುತ್ತಿವೆ
ಧೂಳು ಗಾಳಿಯಲಿ
ಅರಳೆಗುಂಜುಗಳಂತೆ
ಭಾವಾಭಿನಯಗಳು
ಖಾಲಿ ಕುರ್ಚಿಗಳ ಕೈಗಳಿಗೆ
ಬಲವಾಗಿ ಅಂಟಿಕೊಳ್ಳುತ್ತವೆ !
ಸಂತೋಷ ಹಾಗೂ ದುಃಖದ ಕ್ಷಣಗಳು
ನನ್ನವೇ ಸೃಷ್ಟಿಗಳು
ಗೋಡೆಗಳ ಮೂಲೆಗಳಲ್ಲಿ
ಇನ್ನೂ ಕಂಪಿಸುತ್ತಿವೆ !
ಮಳೆಯ ಹನಿಗಳು
ಗಿಡದ ಟೊಂಗೆಗಳ
ಮೇಲೆ ಉದುರುತ್ತಿವೆ !
ಇದೆಲ್ಲ –
ನನ್ನ ಪೊಳ್ಳು ಅಸ್ತಿತ್ವವನ್ನು
ರೂಪಿಸುತ್ತಲಿದೆ !
ನಾನು ದುಃಖಿಸಲಾರೆ –
ಈ ಪ್ರದರ್ಶನ ಮುಗಿದದ್ದಕ್ಕೆ;
ಆದರೆ ಮುಗಿದದ್ದೇನೆಂದರೆ –
ಮೂರು ತಾಸಿನ ಮಿತಿಗೆ
ಒಳಗೊಂಡ ನನ್ನ ಅಸ್ತಿತ್ವ
ನನ್ನೊಳಗೇ ಇದು ಮುಕ್ತಾಯವಾಗಿದೆ
ಈಗ ನಾನು ವಿರಮಿಸುವೆ
ನನ್ನ ಅಸ್ತಿತ್ವದ ಅಣುಗಳು
ಪ್ರೇಕ್ಷಕರೊಂದಿಗೆ ಮನೆಗೆ ಹೋಗಿವೆ
ಮತ್ತೆ ಅಸಂಖ್ಯಾತ
ನೆನಪುಗಳಾಗಿ ಮರಳಲು
ಎಂಬುದು ನನಗೆ ಗೊತ್ತಿದೆ !



ಕನ್ನಡಕ್ಕೆ : ಡಾ|| ಪಂಚಾಕ್ಷರಿ ಹಿರೇಮಠ
'ಮೃತ್ಯುಂಜಯ ಕೃಪಾ', ಜಯನಗರ, ಸಪ್ತಾಪುರ
ಧಾರವಾಡ - ೫೮೦ ೦೦೧

ಬಿಜಾಪುರದ ವಕೀಲರೂ ಮಾರ್ಕ್ಸ್‌ವಾದಿ ಚಿಂತಕರೂ ಲೇಖಕರೂ ಆದ ಪಿ. ಎಸ್. ಪಾಟೀಲರು (೧೯೨೮-೨೦೧೦) ನನಗೆ ಪ್ರಿಯವಾದ ವ್ಯಕ್ತಿಗಳಲ್ಲಿ ಒಬ್ಬರು. ಬಿಜಾಪುರಕ್ಕೆ ಹೋದಾಗಲೆಲ್ಲ ಅವರನ್ನು ಕಾಣುವುದು ನನಗೆ ಅಭ್ಯಾಸವಾಗಿತ್ತು. ಪ್ರಖರ ಚಿಂತಕರಲ್ಲಿ ಒಬ್ಬರಾಗಿದ್ದ ಅವರು, ಬಸವಣ್ಣನ ವಚನಗಳನ್ನು ಮಾರ್ಕ್ಸ್‌ವಾದಿ ದೃಷ್ಟಿಕೋನದಿಂದ ವಿಶ್ಲೇಷಣೆ ಮಾಡಿ ರಚಿಸಿದ 'ಬಸವ ಚಳುವಳಿಯ ಭೌತವಾದಿ ಅಧ್ಯಯನ' ಕೃತಿ, ನನಗೆ ಸೆಳೆದಿತ್ತು. ಅವರಾದರೂ ಸೂಫಿಗಳ ಮೇಲೆ ನಾನು ಮಾಡಿದ ಸಂಶೋಧನೆಯನ್ನು ಮೆಚ್ಚಿಕೊಂಡು ಪತ್ರ ಬರೆಯುತ್ತಿದ್ದರು. ಪಾಟೀಲರು ತೀರಿಕೊಂಡು ಇದೇ ಜುಲೈಗೆ ಒಂದು ವರ್ಷ ತುಂಬುತ್ತಿದೆ. ಅವರು ತೀರಿಕೊಳ್ಳುವ ಕೆಲವು ತಿಂಗಳ ಮೊದಲು, ನನ್ನ ಜತೆ ಪ್ರಾಸಂಗಿಕವಾಗಿ ಆಡಿದ್ದ ಮಾತುಕತೆಯನ್ನು ಇಲ್ಲಿ ಕೊಟ್ಟಿರುವೆ. ಇದು ಅವರು ಕೊಟ್ಟ ಪ್ರೀತಿಗೆ ಪ್ರತಿಯಾಗಿ ನಾನು ಸಲ್ಲಿಸುತ್ತಿರುವ ಕೃತಜ್ಞತಾಪೂರ್ವಕ ನೆನಕೆಯಾಗಿದೆ.



# ಪಿ. ಎಸ್. ಪಾಟೀಲರ ಸಂದರ್ಶನ

ಸಂದರ್ಶಕರು : ಡಾ|| ರಹಮತ್ ತರೀಕೆರೆ

**ಸಾರ್, ನಿಮ್ಮ ಹೆಸರಲ್ಲಿರುವ ಪಿ. ಎಸ್. ಎಂದರೆ ಏನು ?**

ಪಾಯಪ್ಪ ಶಿವಪ್ಪ ಪಾಟೀಲ ಅಂತ.

**ಪಾಯಪ್ಪ! ಬಹಳ ಶಿಷ್ಟ ಹೆಸರು. ಹ್ಯಾಗೆ ಬಂತು ಅದು ?**

(ನಗುತ್ತಾ) ಏನೋಪಾ, ನನಗೂ ಗೊತ್ತಿಲ್ಲ. ಬಹುತೇಕವಾಗಿ ಜೈನ್ ಆರಿಜಿನ್ ಇದ್ದಿರಬೇಕು. ನಮ್ಮೂರಲ್ಲಿ ಮಾತ್ರ ಆ ಹೆಸರುಗಳು ಅವ.

**ಯಾವುದು ನಿಮ್ಮೂರು ?**

ನೇಗಿನಹಾಳ ಅಂತ. ಬಾಗೇವಾಡಿ ತಾಲ್ಲೂಕು. ಇಲ್ಲೇ ಬಿಜಾಪುರಕ್ಕ ಸಮೀಪ ಅದ. ನೇಗಿನಹಾಳದ ಪಾಟೀಲ್ಸ್ ನಾವು.

**ತಂದೆಯವರು ಏನು ಮಾಡ್ತಾ ಇದ್ದರು ?**

ಅವರು ಫೌಜುದಾರ್ ಆಗಿದ್ದರು. ಬೆಳಗಾವಿಯಲ್ಲಿದ್ದರು. ಯಾರೂ ಮಾಡಿದ ಕೊಲೆಗೆ ಅವರಿಗೆ ಶಿಕ್ಷೆಯಾಯಿತು. ಮುಂದೆ ಅವರನ್ನ ಐದನೇ ಜಾರ್ಜನ ಪಟ್ಟಾಭಿಷೇಕದ ಕಾಲಕ್ಕ, ೧೯೧೧ರಲ್ಲಿ ಬಿಡುಗಡೆ ಮಾಡಿದರು. ಅಲ್ಲಿಂದ ಅವರು ನೇಗಿನಹಾಳಕ್ಕೆ ಬಂದುಬಿಟ್ಟರು.

**ನಿಮ್ಮ ವಿದ್ಯಾಭ್ಯಾಸ ಎಲ್ಲೆಲ್ಲಾಯ್ತು ?**

ನೇಗಿನಹಾಳದಲ್ಲಿ ಶುರು. ಆಮೇಲೆ ಪಡಗಾನೂರು. ಆಮೇಲೆ ಶಿವಣಗಿ ಅಂತ ಒಂದು ಗ್ರಾಮದಲ್ಲಿ ಏಳನೇ ಇಯತ್ತೆ ತನಕ. ಆಮೇಲೆ ವಿಜಾಪುರಕ್ಕೆ ಬಂದ್ವಿ. ಲಾ ಓದಿದ್ದು ಬೆಳಗಾಂವದೊಳಗ.

**ಲಾ ತಗೊಳ್ಳೋಕೆ ಏನಾದರೂ ವಿಶೇಷ ಕಾರಣ ಇತ್ತಾ?**

(ನಗುತ್ತಾ) ನನಗ ಯಾಕೋ ಈ ಟೀಚರ್ ಜಾಬ್ ಇಷ್ಟ ಇದ್ದಿಲ್ಲ. ಯಾರ ಸಬಾರ್ಡಿನೇಶನ್ ಬ್ಯಾಡ ಅಂತ್ಹೇಳಿ ವಕೀಲಿಗೆ ಬಂದೆ. ವಕೀಲಿ ವೃತ್ತಿಯೊಳಗ ಹೆಚ್ಚು ಸ್ವಾತಂತ್ರ್ಯ ಇತ್ತು. ಇಂಟಲೆಕ್ಚ್ಯುವಲ್ ಗ್ರೋತ್‌ಗೂ ಅವಕಾಶ ಭಾಳ ಇತ್ತು. ಅದು ಐಡಿಯಾಲಜಿಕಲ್ ಗ್ರೋತ್ ಆಗಲಿಕ್ಕೂ ಭಾಳ ಹೆಲ್ಪ್ ಮಾಡ್ತದ.

**ನೀವು ಎಡಪಂಥೀಯ ವಿಚಾರಧಾರೆಯ ಸಂಪರ್ಕಕ್ಕೆ ಯಾವಾಗ ಬಂದಿರಿ ?**

ಸಾಧಾರಣವಾಗಿ ೧೯೪೨-೧೯೪೩ರಲ್ಲಿ ಕ್ವಿಟ್ ಇಂಡಿಯಾ ಮೂಮೆಂಟ್ ನಡದಾಗ, ಜವಾಹರಲಾಲ್ ನೆಹರೂರವರ ಇನ್‌ಫ್ಲುಯೆನ್ಸ್ ನಮ್ಮ ಮೇಲೆ ಭಾಳ ಆಯ್ತು. ಸೋಶಿಯಲಿಸಂ ಕಾಂಟ್ಯಾಕ್ಟಿಗೆ ಬಂದಿವಿ. ಬರ್ತಾ ಬರ್ತಾ ಮುಂದೆ ಕಮ್ಯುನಿಸ್ಟರ ಸಂಪರ್ಕ ಬಂತು. ಎನ್. ಕೆ. ಉಪಾಧ್ಯಾಯ ಅಂತ ಇಲ್ಲೇ ಇದ್ರು ಬಿಜಾಪುರದಾಗ. ಜತಿಗೆ ಎಂ. ಎಂ. ಬಾಲಸಿಂಗ್, ನವಿಲಸಾಬ್ ಅಂತಿದ್ರು.

**ನವಿಲಸಾಬ್ ! ವಿಶೇಷವಾಗಿದೆ ಹೆಸರು.**

ಹೌದು, ಸೋಲಾಪುರ ಕಡೆಯವ್ರು. ಮುಸ್ಲಿಮ್ಸ್. ಪ್ರೈಮರಿ ಸ್ಕೂಲ್ ಟೀಚರ್ ಇದ್ರು. ಆಗಿನ ಕಾಲಕ್ಕೆ ಪೇಟ್ರಿಯಾಟಿಕ್ ಮೂಮೆಂಟಿಗೆ ಎಂಟರ್ ಆದ್ರು. ಮುಂದೆ ಕಮ್ಯುನಿಸ್ಟ್ ಆಗಿದ್ರು. ಇಲ್ಲೇ ವಿಜಾಪುರದೊಳಗ ಬೀಡಿ ವರ್ಕರ್ಸ್ ಆರ್ಗನೈಜ್ ಮಾಡಿದ್ರು. ಅವರ ಇನ್‌ಫ್ಲುಯೆನ್ಸ್ ನಮ್ಮ ಮೇಲೆ ಆಯ್ತು.

**ವಕೀಲಿ ಕೆಲಸ ಅಂದರೆ, ಕಕ್ಷಿದಾರನ ಪರವಾಗಿ, ಅವನದು ತಪ್ಪಿರಲಿ ಸರಿ ಇರಲಿ, ವಾದ ಮಾಡಿ ಗೆಲ್ಲಬೇಕು. ನಿಮ್ಮ ಸೈದ್ಧಾಂತಿಕ ಹಿನ್ನೆಲೆ ಮತ್ತು ವೃತ್ತಿಗಳು ಪರಸ್ಪರ ಡಿಕ್ಕಿ ಹೊಡೆಯುವ ಸನ್ನಿವೇಶ ಎಂದಾದರೂ ಬಂದಿತ್ತಾ ?**

ಇಲ್ಲ ಅಂತಹದ್ದು ಯಾವದೂ ಬರಲಿಲ್ಲ. ನಾನು ನನ್ನ ವರ್ಗಪ್ರಜ್ಞೆ ಉಪಯೋಗ ಮಾಡುವಂತಹ ಪ್ರಸಂಗಾನೇ ಬರಲಿಲ್ಲ. ಆವಾಗ ನೋಡ್ರಿ, ಅಷ್ಟು ಡೀಪ್ ಕನ್ವಿಕ್ಷನ್ ಇರಲಿಲ್ಲ. ನಾವೆಲ್ಲ ಗ್ರೋಯಿಂಗ್ ಯೂತ್ಸ್. ಪ್ರೊಫೆಶನ್ ಮೇಲೆ ಪ್ರೇಮ ಹೆಚ್ಚು ಇತ್ತು, ಐ ಲವ್ಡ್ ದಿ ಪ್ರೊಫೆಶನಲಿಸಂ. ಐ ವಾಸ್ ಎ ಸಕ್ಸೆಸ್‌ಫುಲ್ ಅಂಡ್ ಬಿಜಿ ಲಾಯರ್.

**ಬಸವಣ್ಣನನ್ನು ವರ್ಗಸಂಘರ್ಷದ ದೃಷ್ಟಿಯಿಂದ ವಿಶ್ಲೇಷಣೆ ಮಾಡಿ ಪುಸ್ತಕ ಬರೆದಿರಿ. ಯಾಕೆ ಈ ಪ್ರಯತ್ನ ಮಾಡಬೇಕೆನಿಸಿತು ?**

ನಾವು ಚಿಕ್ಕವರಿದ್ದಾಗ, ಈ ಸಮಾಜವಾದದ ವಿಚಾರಗಳು ಬಂದವಲ್ಲಾ, ಅವು ಭಾಳ ಪರಿಣಾಮ ಬೀರಿದವು. ನನಗೆ ನೆನಪಿರುವ ಹಾಗೆ ಅ. ನ. ಕೃಷ್ಣರಾಯರು ಒಮ್ಮೆ ಇಲ್ಲಿಗೆ ಬಂದಿದ್ರು. ಆಗ ನಾವು ಹೈಸ್ಕೂಲಿನಲ್ಲಿದ್ದಿವಿ. ಅವರ 'ಬಸವಣ್ಣನವರ ಅಮೃತವಾಣಿ' ಆಗ ಪಬ್ಲಿಶ್ ಆಗಿತ್ತು. ಅನಕೃ ಬಿಜಾಪುರದಲ್ಲಿ ಭಾಳ ಕಡೆ ಭಾಷಣ ಮಾಡಿದ್ರು. ಅವರ ಭಾಷಣ ತುಂಬ ಇನ್‌ಸ್ಪೈರಿಂಗ್ ಆಗಿರತಿತ್ತು. ಅವರು ಪದೇಪದೇ ಬಸವಣ್ಣ ಈಜ್ ಅವರ್ ಕಾರ್ಲ್ ಮಾರ್ಕ್ಸ್ ಅಂತಾ ಇದ್ರು. ಆವಾಗಿಂದ ಶುರುವಾಯ್ತು ನೋಡ್ರಿ. ಅವರ ಇನ್‌ಫ್ಲುಯೆನ್ಸ್‌ನಿಂದ ನಾವು ಕನ್ನಡ ಜಾಣ ಪರೀಕ್ಷೆಗೆ ಕೂತ್ವಿ. ಪಾಸಾಗಲಿಲ್ಲ, ಆ ಮಾತು ಬೇರೆ. ಆದರ ಅದರಿಂದ ಕನ್ನಡ ಸಾಹಿತ್ಯದಲ್ಲಿ ಸ್ವಲ್ಪ ನಮಗ ಗತಿ ಬಂತು.

**ಕನ್ನಡದಲ್ಲಿ ನಿಮ್ಮ ಪ್ರಿಯವಾದ ಲೇಖಕರು ಯಾರು ?**

ಕಾವ್ಯದಲ್ಲಿ ಬೇಂದ್ರೆ. ಅವರ ಸ್ಟೈಲ್ ನನಗೆ ಮೋಹಕ ಅನಿಸುತ್ತಿತ್ತು. ಸಂಸ್ಕೃತ ಇರಲಿಲ್ಲ ಏನೂ ಇಲ್ಲ. ಶುದ್ಧ ಕನ್ನಡ ಮತ್ತು ಎಫೆಕ್ಟಿವ್. ಅದರಾಗ ನಮ್ಮ ಗೆಳೆಯರೊಬ್ಬರು ಚಿಂತಾಮಣಿ ಮಾಸ್ತರ್

ಅಂತ ಇದ್ದರು, ಅವರು ಪುಂಖಾನುಪುಂಖವಾಗಿ ಬೇಂದ್ರೆಯವರ ಪದ್ಯಗಳನ್ನ ಹೇಳ್ತಾ ಇದ್ರು.

**ಗದ್ಯದಲ್ಲಿ ?**

ಗದ್ಯದಲ್ಲಿ ನನಗೆ ನೆನಪಿರುವ ಮಟ್ಟಿಗೆ 'ಗಾಂಧಿಮಠದ ಮಹಾಂತರು' ಅನ್ನೋ ಪುಸ್ತಕ. ಆಥರ್ ನೆನಪಿಲ್ಲ. ಗಾಂಧಿ ಆಶ್ರಮದೊಳಗಿನ ಬೇರೆಬೇರೆ ಲೀಡರ್ಸ್ ಬಗ್ಗೆ ಅದರೊಳಗೆ ಚಿತ್ರ ಅದ.

**ಕುವೆಂಪು ಸಾಹಿತ್ಯ ?**

ಓ ಯೆಸ್. ಕುವೆಂಪು ಭಕ್ತ ನಾನು. 'ರಾಮಾಯಣ ದರ್ಶನಂ' ಪೂರ್ತಿ ಓದಲಿಕ್ಕೆ ಆಗಲಿಲ್ಲ. ಅವರದು ಹೈಲಿ ಸ್ಯಾಂಸ್ಕ್ರಿಟೈಜಡ್ ಸ್ಟೈಲಿತ್ತು. ಆದರೆ ಅವರ ಕವನಗಳೆಲ್ಲಾ ಓದಿದ್ದೆ. ಅದರಲ್ಲಿಯ ಸಮಾಜವಾದಿ ಆಶಯಗಳು ಇಷ್ಟ ಆಗಿದ್ದವು.

**ಫ. ಗು. ಹಳಕಟ್ಟಿಯವರು ಸಹ ವಿಜಾಪುರದವರು. ಅವರ ಜತೆ ಸಂಪರ್ಕ ಇತ್ತಾ ?**

ಹೌದ್ರೀ, ಅವರೂ ವಕೀಲರು. ಅವರಲ್ಲಿ ನನಗ ಭಾಳ ಭಕ್ತಿ. ದೇವರು ಇದ್ದಂಗರೀ ಅವರು. ಒಳ್ಳೆಯ ಸದ್‌ಗೃಹಸ್ಥರು. ಅವರಲ್ಲಿ ಅಹಂಕಾರ ಅನ್ನುವದು ಕೇಳಬ್ಯಾಡ್ರಿ. ಅದೇ ಒಂದು ಸಾಕು ಅವರನ್ನ ಶ್ರೇಷ್ಠ ಲಿಂಗಾಯತ ಅನ್ನೋಕೆ. ಅಹಂಕಾರ ಹೋಗದೆ ಲಿಂಗದೊಳಗೆ ಐಕ್ಯ ಆಗೋದಿಲ್ಲ. ಅದಕ್ಕೇ 'ನಿಮ್ಮ ಕಂಡು ನನ್ನ ಮರೆದೆ' ಅಂತಾ ಬಸವಣ್ಣ ಹೇಳ್ತಾನ. ಶರಣತತ್ವದ ಸಾರಸರ್ವಸ್ವ ಅದು. ನೀವು ದೇವರನ್ನ ಕಾಣೋದು ಅಂದರೇನು ? ನಿಮ್ಮನ್ನ ನೀವು ಮರೆಯೋದು ಅಂತಾ.

**ನಿಮ್ಮ ಕಾಲದ ವಕೀಲರಲ್ಲಿದ್ದ ಈ ಸಾಹಿತ್ಯಾಸಕ್ತಿ ಮತ್ತು ಚಿಂತನಶೀಲತೆ ಆಶ್ಚರ್ಯಕರ.**

ಇದು ಬಹಳ ಕಡಿಮೇರೀ. ಈಚೆಗಂತೂ ಭಾಳ ಕಡಿಮೆ ಆಗ್ತಾ ಇದೆ. ಕೋ. ಚನ್ನಬಸಪ್ಪನವರು ನಮ್ಮ ಫ್ರೆಂಡ್. ಇಲ್ಲೇ ವಿಜಾಪುರಕ್ಕ ಡಿಸ್ಟ್ರಿಕ್ಟ್ ಜಡ್ಜ್ ಇದ್ರು. ನನ್ನ ಪುಸ್ತಕಗಳನ್ನು ಭಾಳ ಲವ್ ಮಾಡ್ತಿದ್ದರು. (ನಗುತ್ತಾ) ಮಹದೇವಿಯಕ್ಕನ ಬಗ್ಗೆ ನಾ ಒಂದು ವಾದ ಮಾಡಿದ್ದೆ. ಶ್ರೀಶೈಲಕ್ಕ ಆಕೆ ಎರಡು ಬಾರಿ ಹೋಗಲಿಲ್ಲ, ಹೋಗಿದ್ದು ಒಮ್ಮೆ ಮಾತ್ರ ಅಂತ. ಮೊದಲು ಆಕಿ ನೆಟ್ಟಗ ಹೋಗಿದ್ದು ಶ್ರೀಶೈಲಕ್ಕ. ಅವಾಗ ಇನ್ನೂ ಆಕಿ ವೀರಶೈವ ಇದ್ದಿಲ್ಲ ಸೈದ್ಧಾಂತಿಕವಾಗಿ. ಭಿನ್ನಪೂಜೆ ಇತ್ತು. ಗುಡಿಗೆ ಹೋದಳು. ಆಮೇಲೆ ಕಲ್ಯಾಣಕ್ಕೆ ಬಸವಣ್ಣನ ಹತ್ರ ಬಂದಳು. ಆಗ ಆಕಿಗೆ ಅಭಿನ್ನ ಪೂಜೆಯ ಪರಿಚಯ ಆಯ್ತು. ತಿರುಗಿ ಶ್ರೀಶೈಲಕ್ಕ ಹೋದಳು. ಆದರ ಮಲ್ಲಿಕಾರ್ಜುನನ ಗುಡಿಗೆ ಹೋಗಲಿಲ್ಲ ಅಂತ. ಅದಕ್ಕೆ ಚನ್ನಬಸಪ್ಪನೋರು 'ನೀವು ಇದನ್ನ ಹೆಂಗೆ ಅರ್ಗ್ಯೂ ಮಾಡ್ತೀರಿ ?' ಅಂತಾ ಕೇಳೋರು.

**ಭಿನ್ನ ಮತ್ತು ಅಭಿನ್ನ ಪೂಜೆಯ ವ್ಯತ್ಯಾಸವನ್ನ ಕೊಂಚ ವಿವರಿಸಿ.**

ಲಿಂಗಾಯತರ ಮುಖ್ಯ ತತ್ವ ಅಂತ ಹೇಳಿದರೆ, ಪೂಜಕನಿಂದ ಭಿನ್ನವಾದಂತಹ ಪೂಜ್ಯವಸ್ತು ಇಲ್ಲ. ಅವರ ಪೂಜ್ಯ ವಸ್ತು ಅವರ ಪೂಜಕ ಎರಡೂ ಅಭಿನ್ನ. ಆತ್ಮಪೂಜೆ ಅವರದು. ಈ ಶೈವರು, ಜಾತಿ ಜಂಗಮರು ಇದ್ದಾರಲ್ಲಾ, ಅವರು ಹಳೇ ಸಮಾಜದವರು. ಅವರಲ್ಲಿ ಮುಂದಿಟ್ಟು ಪೂಜೆ ಮಾಡುವಂತಹದ್ದು ಇದೆ. ಮುಸ್ಲಿಮರಿಗೆ ಅದ್ವೈತ ಪೂಜೆ ಅನ್ನೋದೇ ಗೊತ್ತಿಲ್ಲ. ದ್ವೈತ ಅವರು. ಈ ಮಧ್ವಾಚಾರ್ಯ ಏನು ಇದ್ದಾರಲ್ಲಾ, ಹಿ ಈಸ್ ವೆರಿ ಕ್ಲೋಸ್ ಟು ಇಸ್ಲಾಂ ಅಂತ ನನಗ ಸಂಶಯಾರಿ.

**ನೀವು ಶರಣ ತತ್ವವನ್ನ ವಿಶಿಷ್ಟವಾಗಿ ವಿಶ್ಲೇಷಣೆ ಮಾಡ್ಕೊಂಡು ಬಂದಿದ್ದೀರಿ. ಇದರಿಂದ ಯಾರಾದರೂ ವಿರೋಧ ವ್ಯಕ್ತ ಮಾಡಿದ್ದಾರಾ ?**

ಯಾರೂ ವ್ಯಕ್ತ ಮಾಡಿಲ್ಲ. ಬಹಳ ಮಂದಿ ಅದನ್ನ ತಿಳಿಕೊಂಡ ಹಾಂಗೂ ಕಾಣೋದಿಲ್ಲ. ತಿಳಕೊಂಡರೂ ಅಲ್ಲ ಅನ್ನೋ ಧೈರ್ಯ ಯಾರಿಗೂ ಇಲ್ಲ ಇಲ್ಲಿ ತನಕ.

**ನೀವು ಬಸವಣ್ಣನ ವಚನಗಳನ್ನ ಸಮತಾವಾದದ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡ್ತೀರಿ. ಆದರೆ ಭಕ್ತನು ದೈವಕ್ಕೆ ನಿಷ್ಠನಾಗಿರಬೇಕು ಎನ್ನುವುದನ್ನು ಹೆಂಡತಿ ಗಂಡನಿಗೆ ನಿಷ್ಠೆಯಿಂದಿರುವ, ಒಡೆಯನಿಗೆ ಆಳು ನಿಷ್ಠೆಯಿಂದಿರುವ ರೂಪಕಗಳ ಮೂಲಕ ಹೇಳುವ ವಚನಗಳೂ ಇವೆ. ಇವನ್ನು ಹೇಗೆ ವಿಶ್ಲೇಷಿಸ್ತೀರಿ ?**

ನನ್ನ ತಿಳುವಳಿಕೆ ಮಟ್ಟಿಗೆ, ಇದೇನು ನೀವು ಪ್ರಶ್ನೆ ಎತ್ತುತ್ತೀರಿ, ಇದು ಬಸವಣ್ಣನಲ್ಲಿ ಬಹಳ ಮಹತ್ವದ ಪ್ರಶ್ನೆನೇ ಅಲ್ಲ. ಹ್ಯಾಗಂದರೆ, ಈ ನಿಮ್ಮ ಸ್ಲೇವರಿ ಅಥವಾ ಫ್ಯೂಡಲ್ ಸಬಾರ್ಡಿನೇಶನ್ ಅಂತ ಏನಂತೀರಿ, ಅದನ್ನೇ ಅವರು ದಾಸೋಹಂ ಅಂತಾರ. ಮುಖ್ಯ ತತ್ವಾನೇ ದಾಸೋಹಂ. ಇದನ್ನೇ ನಾನು ಏನಂತೀನಿ ಅಂದರ, ಪ್ರಿಮಿಟಿವ್ ಕಮ್ಯುನಿಸಂ ಅಂತ. ಆದರ ಪ್ರೈವಿಟಿಸಂ ಯಾವಾಗ ಬರತದಾ, ಅಂದ ಕೂಡಲೇ ಕಮ್ಯುನ್ ಖಲಾಸ್ ಆಗತದ. ದಾಸ್ಯದ ಮೊದಲ ಅವಸ್ಥೆಯಲ್ಲಿ ಅದು ಈ ಭಾವನೆ ಇರತಿರಲಿಲ್ಲ. ಪ್ರೈವೇಟಿಜಂ ಬರತಿರಲಿಲ್ಲ. ಇನ್ನು ಆಗಿನ ಸೇವಕರು ಹೆಂಗಂದರ ಮನೆ ಮಕ್ಕಳಿದ್ದಂಗ. ಹಳೇ ಕಾಲಕ್ಕ ಆಳುಮಕ್ಕಳು ಇರತ್ತಿದ್ದರಲ್ಲಾ, ಹಂಗ.

**ಇದು ಸಬಾರ್ಡಿನೇಶನ್ನಿನ ಗ್ಲೋರಿಫಿಕೇಶನ್ ಆಗಲ್ಲವಾ ?**

ಆಗಲ್ಲ, ಅದನ್ನ ಆಚೆಕಡೆ ಇಟ್ಟು ನೋಡ್ರಿ. ಆವೊತ್ತು ಆಗಿನ ಪರಿಸ್ಥಿತಿಗೆ ಅಪ್ಪಿತ್ತು. ಆ ಹಿಸ್ಟಾರಿಕಲ್ ಕಾಂಟೆಕ್ಸ್ಟ್‌ನಲ್ಲಿ ನೋಡ್ರಿ. ಅದು ಕ್ಲಾಸ್ ಡಿವಿಜನ್‌ಗೆ ಇನ್‌ಫ್ಲುಯೆನ್ಸ್ ಮಾಡೋಕೆ ಅವಕಾಶ ಕೊಡೋದಿಲ್ಲ. ಯಾಕಂದರ ಮನೆಯೊಳಗ ಸರ್ವೆಂಟ್ ಇರ್ತಾನ. ಮೊದಲ ಮಗ ಅಂತೀನಿ ನಾನು ಅವನಿಗೆ. ಈ ಒಂದು ಭಾವನೆ ಇರ್ತದ. ಮುಂದೆ ಬೇರೆ ಆಗ್ತದ ಬರ್ತಾ ಬರ್ತಾ.

**ಬಸವಣ್ಣನಲ್ಲಿ ನಿಮಗೆ ಬಹಳ ಹಾಂಟಿಂಗ್ ಮಾಡುವಂತಹ ವಚನ ಅಂದರೆ ಯಾವುದು ?**

ಅದೇ 'ನಿಮ್ಮ ಕಂಡು ನನ್ನ ಮರೆದೆ ಕೂಡಲಸಂಗಮದೇವಾ' ಅನ್ನೋ ವಚನ.

**ಯಾಕದು ಬಹಳ ಇಷ್ಟ ?**

ಅದರೊಳಗ, ವೀರಶೈವ ಧರ್ಮದ ಅಭಿನ್ನ ಪೂಜೆ ಅಂತ ನಾನೇನು ಹೇಳಿದೆನಲ್ಲಾ, ಅದರ ಪೂರ್ಣ ಸಾರಾಂಶ ಬಂದುಬಿಡ್ತು ನೋಡ್ರಿ. ಏನಾಗ್ತದ್ರಿ, ನಿಮ್ಮನ್ನು ನೀವು ಮರೆಯಲಿಲ್ಲ ಅಂತಂದರ ನೀವು ಶಿವನಲ್ಲಿ ಐಕ್ಯವಾಗೋಲ್ಲ. ಐಕ್ಯ ಅಂದರೇನು ? ಭಿನ್ನ ತಗೋಬೇಕು. ಅಭಿನ್ನ ಆಗಬೇಕು. ಅಭಿನ್ನ ಆದಾಗಲೇ ಐಕ್ಯ ಆಗೋದು.

**ಬಸವಣ್ಣ ಅಕ್ಕಮಹಾದೇವಿ ಬಿಟ್ಟರೆ ನಿಮಗೆ ಇನ್ಯಾವ ಶರಣರು ಮುಖ್ಯ ಅನಿಸಿದರು ?**

ಅಲ್ಲಮ. ಐ ಲೈಕ್ ಹಿಸ್ ಸ್ಟ್ರಿಕ್ಟ್ ಲಾಜಿಕ್. ಅವನ ಥಿಂಕಿಂಗ್‌ನೊಳಗ ಎಲ್ಲೀ ಆಂಬಿಗ್ಯೂಟಿ ಕಂಡುಬರಲ್ಲ ನೋಡ್ರಿ. ಆ ಒಂದು ಲಾಜಿಕಲ್ ಸ್ಟ್ರೆಂತ್ ಏನದೆಯಲ್ಲಾ ಅದು ಬೇರೆ ಎಲ್ಲೀ ಕಂಡು ಬರಲ್ಲ. ಕನ್ನಡ ಭಾಷೆಯ ಪ್ರಯೋಗದೊಳಗ ಶಕ್ತಿ ಒಂದದ. ಆ ಶಕ್ತಿ ಲೀನವಾಗ್ತದ ಅವನಲ್ಲಿ.

**ಅಲ್ಲಮ ಮತ್ತು ಬಸವಣ್ಣ ನಡುವೆ ಎಲ್ಲಿ ವ್ಯತ್ಯಾಸ ಮಾಡ್ತೀರಿ ?**

ಬಸವಣ್ಣ ವಾದವಿವಾದ ಮಾಡಾಕ ಹೋಗಂಗಿಲ್ಲ. ಕೇಳಬ್ಯಾಡ್ರಿ. ಆದರ ಅಲ್ಲಮ ವಾದ ಮಾಡ್ತಾನ. ಥೇರಿ ಕಟ್ತಾನ.

**ಈಗ ಲಿಂಗಾಯತರಲ್ಲಿ ಕೆಲವರು, ರಾಜಕೀಯವಾಗಿ ಹಿಡಿದಿರುವ ಹಾದಿ, ಅಭಿನ್ನ ಪೂಜೆಯದಲ್ಲ, ಭಿನ್ನ ಪೂಜೆಯದು. ಗುಡಿ ಮತ್ತು ಸ್ಥಾವರ ಆರಾಧನೆಯ ಸಂಸ್ಕೃತಿಯದು.**



ದ್ರೋಹ ! ಬಸವದ್ರೋಹ !! ನೀವು ಮುಂಬಯಿದ್ದು 'ಸಂಗಮ' ಅಂತ ಪತ್ರಿಕೆ ಓದ್ತೀರಿ ಯಾವಾಗಾದ್ರೂ ? ಬಾಂಬೆ ಬಸವೇಶ್ವರ ಅಸೋಸಿಯೇಶನ್ ಅಂತ. ವೀರಶೈವರದ್ದೇ ಅದು. ಎಸ್. ಎನ್. ಪಾಟೀಲರು ಅಂತ್ಹೇಳಿ ಅದರ ಎಡಿಟರ್. ಅವರು ಇದನ್ನ ಬಹಳ ಖಂಡನಾ ಮಾಡ್ತಾ ಹೋಗಿದಾರ, ನೀವು ದ್ರೋಹ ಮಾಡ್ತಾ ಇದೀರಿ ಅಂತ್ಹೇಳಿ. ಲಿಂಗಾಯತರ ಹೆಸರಿನಿಂದ ಇವರೇನು ವೈದಿಕ ಪಕ್ಷಕ್ಕೆ ಹೋಗ್ತಾ ಅದಾರ, ಇದು ಶುದ್ಧದ್ರೋಹ. ಅರ್ಥಾನೇ ಇಲ್ಲ. ಪ್ರಾಕ್ಟಿಕಲ್ ಅಡ್ವಾಂಟೇಜ್ ಬಂದದ ಅಂತ ಅವರಿಗೆ ಸಪೋರ್ಟ್ ಮಾಡ್ತಿದಾರ. ತಾತ್ವಿಕವಾಗಿ ಏನೂ ಅರ್ಥವಿಲ್ಲ. ವೀರಶೈವರು ಇದರ ವಿಚಾರ ಮಾಡಬೇಕಾಗಿದೆ.

**ನಿರಾಕಾರವಾದಿಯಾದ ಇಸ್ಲಾಮಿಗೂ, ಅರಬ್ ಬುಡಕಟ್ಟು ಜನರ ಸಾಕಾರ ದೈವಗಳ ಕೇಂದ್ರವಾಗಿದ್ದ ಮೆಕ್ಕಾದ ಕಾಬಾ ಕಟ್ಟಡವನ್ನು ಬಿಡೋಕೆ ಸಾಧ್ಯವಾಗಲಿಲ್ಲ. ಅಭಿನ್ನ ಪೂಜೆಯ ಕಲ್ಪನೆ ಎಷ್ಟೇ ಮುಖ್ಯವಾಗಿದ್ದರೂ, ಆಕಾರದ ಆರಾಧನೆಯನ್ನ ತಪ್ಪಿಸೋದು ಕಷ್ಟ.**

ಅದನ್ನ ತಪ್ಪಿಸೋಕೆ ಆಗ್ತಾ ಇಲ್ಲ. ಯಾಕಂದ್ರ ಇಡೀ ಲಿಂಗಾಯತರ ಮೂಮೆಂಟೇ ಶೈವ ಮೂಮೆಂಟಿನಿಂದ ಬಂದಿದ್ದು. ಇನ್ನೂ ಹೆಚ್ಚು ರಾಂಗ್ ರೂಟಲಿ ಶೈವ ಪೇಟ್ರಿಯಾಟ್ಸ್ ಅವರಿಗೆ. ಮೈಸೂರು ಕಡೆ ಅಂತೂ ಪೂರ್ಣ ಶೈವೇಟ್ಸ್, ಚಿದಾನಂದಮೂರ್ತಿ ಅಂತೂ ಥರೋಲಿ ಶೈವೇಟ್.

**ಚಿದಾನಂದ ಮೂರ್ತಿ ಅವರು ವೈದಿಕ ಹಿಂದೂ ಧರ್ಮ ಮತ್ತು ವೀರಶೈವ ಧರ್ಮ ಎರಡೂ ಒಂದೇ ಅಂತ ಪ್ರತಿಪಾದನೆ ಮಾಡಿ ಪುಸ್ತಕ ಬರೆದಿದ್ದಾರೆ.**

ನೋಡ್ತಾ ಇದೀನಿ. ಐ ಡೋಂಟ್ ಲೈಕ್ ಇಟ್. ಈ ಜಾತಿಜಂಗಮರು ಏನದಾರ, ಅವರೆಲ್ಲಾ ಶೈವಾಯಿಸ್ಟ್. ಲಿಂಗಾಯತ್ ಅಲ್ವೇ ಅಲ್ಲ.

**ಆದರೆ ಹುಟ್ಟಿನಿಂದ ಜಂಗಮರಾಗಿದ್ದರೂ ಅನೇಕರು ಬಸವತತ್ವವನ್ನ ಪ್ರತಿಪಾದಿಸುವವರು ಸಹ ಇದ್ದಾರೆ.**

ಬಹಳ ಮಂದಿ ಜಂಗಮರು ಬಸವತತ್ವಕ್ಕೆ ಬಂದಾರ. ಈಗ ನಮ್ಮ ಭೂಸನೂರಮಠರು ಅದಾರ. ಆರ್. ಸಿ. ಹಿರೇಮಠರು ಅದಾರ.

**ಶೈವಿಸಂನ ಬೇರುಗಳು ಕರ್ನಾಟಕದಲ್ಲಿ ಬಹಳ ಆಳವಾಗಿವೆ.**

ಹೌದು. ನಮ್ಮ ಕಮ್ಯುನಿಟಿ ತಗೊಳ್ರಿ, ಪಂಚಮಸಾಲಿ ಅಂತ. ಅವರೂ ಶೈವಸಮುದಾಯದವರೇ. ಇವತ್ತಿಗೂನೂ ಅವರಲ್ಲಿ ಶೈವಪ್ರಶಂಸೆ ಭಾಳ ಅದೆ. ಲಿಂಗವನ್ನ ಎದುರಿಟ್ಟುಕೊಂಡು ಪೂಜೆ ಮಾಡ್ತೀವಿ ನಾವು. ಅಭಿನ್ನ ಪೂಜೆ ಮಾಡೋದೇ ಇಲ್ಲ. ಗುಡಿಗಳಿಗೆ ಹೋಗ್ತೀವಿ. ವೀರಶೈವ ಧರ್ಮಕ್ಕೆ ದೇಹ ಬಿಟ್ಟು ದೇವಾಲಯ ಇಲ್ಲ. ಅದರಲ್ಲಿರುವ ಪ್ರಾಣ ಬಿಟ್ಟು ಬೇರೆ ದೇವರು ಇಲ್ಲ. ಬಹಳ ಲಿಂಗಾಯತರಿಗೆ ಇದು ಅರ್ಥ ಆಗ್ತಾ ಇಲ್ಲ. ಅರ್ಥ ಆದೋರು ಸುಮ್ಮನೆ ಕೂಡ್ತಾರ. ತಪ್ಪು ಅಂತಾ ಅನ್ನೋದಿಲ್ಲ.

**ಅಮೂರ್ತ ಪೂಜೆ ಸಾಧಕರಿಗೆ ಸಾಧ್ಯ. ಸಾಮಾನ್ಯ ಜನರಿಗೆ ಆರಾಧನೆಗೆ ಮೂರ್ತವಾದ ಒಂದು ವಸ್ತು ಕಣ್ಮುಂದೆ ಇರಬೇಕೊ ಏನೊ ?**

ನೀವು ಏನೇ ಅನ್ರಿ. ನಾನು ಆಕ್ಷೇಪ ಮಾಡೋದಿಲ್ಲ ಅದಕ್ಕ. ಅಭಿನ್ನ ಪೂಜೆ ಗ್ರಾಸ್ಪ್ ಮಾಡೋದು ಕಠಿಣ ಅದ.

**ವಚನ ಸಾಹಿತ್ಯದಲ್ಲಿ ನೀವು ಮೆಚ್ಚುವ ವಿದ್ವಾಂಸರು ಯಾರು ?**

ಹಳಕಟ್ಟಿಯವರು. ಆರ್. ಸಿ. ಹಿರೇಮಠರೂ ನೆಟ್ಟಗ. ಭೂಸನೂರಮಠ ಪರವಾಗಿಲ್ರಿ.

**ನಿಮ್ಮ ವಚನ ಸಾಹಿತ್ಯದ ಅಧ್ಯಯನಗಳಿಗೆ ಮೆಚ್ಚುಗೆ ಎಲ್ಲೆಲ್ಲಿಂದ ಬಂದಿದೆ ?**

ಬರಲೇಇಲ್ಲ. ಈವರೆಗೂ ಬಂದಿಲ್ಲ. ನಮ್ಮ ಫ್ರೆಂಡ್ಸ್ ಎಲ್ಲಾ ಕೇಳ್ತಾರ – ಯಾಕ್ರೀ ಹಿಂಗೆಲ್ಲಾ ಅಂತಾ. ನಾವು ಪ್ರಯತ್ನಮಾಡಿ ಅಪ್ರಿಸಿಯೇಶನ್ ಮಾಡಿಸಲಿಕ್ಕೆ ಹಚ್ಚಬಾರದು. ತಾನೇ ಆಗ್ತಾವ ಆಗಲಿ.

**ನಿಮ್ಮ ಲೈಬ್ರರಿ ತುಂಬ ಸೋವಿಯತ್ ರಶ್ಯಾದಲ್ಲಿ ಪ್ರಕಟವಾದ ಮಾರ್ಕ್ಸ್‌ವಾದದ ಪುಸ್ತಕ ಇವೆ. ಸೋವಿಯತ್ ಒಕ್ಕೂಟದ ಪತನವನ್ನ ಹೆಂಗೆ ಅರ್ಥೈಸ್ತೀರಿ ?**

ಇಟೀಜ್ ಎ ಫೇಲ್ಯೂರ್ ಆಫ್ ಕಮ್ಯುನಿಸ್ಟ್ಸ್, ನಾಟ್ ಆಫ್ ಕಮ್ಯುನಿಸಂ. ಅದು ಏನಾಯ್ತು, ಮುಂದೆ ಕಮ್ಯುನಿಸ್ಟ್ ಪಾರ್ಟಿಯಲ್ಲಿ ಮಿಡ್ಲ್‌ಕ್ಲಾಸ್ ಕಾನ್ಸಂಟ್ರೇಶನ್ ಭಾಳ ಆಯ್ತು. ಸ್ಟಾಲಿನ್ ನಂತರ ಇವರೆಲ್ಲ ಬಂದ್ರು ನೋಡಿ, ಇವರು ಸ್ಲೋಲಿ ಡೈಲ್ಯೂಟ್ ಆದರು.

**ಸೋವಿಯತ್ ಒಕ್ಕೂಟ ಪತನವಾದಾಗ ನೋವಾಯ್ತಾ ?**

ಸರ್ಟನ್ಲಿ ಆದರೆ ಫ್ರುಸ್ಟ್ರೇಟ್ ಆಗಲಿಲ್ಲ. ಆಯ್ತು, ಇದೂ ಒಂದು ಎಕ್ಸ್‌ಪೆರಿಮೆಂಟ್ ಫೇಲ್ ಆದಂಗಾಯ್ತು. ಮತ್ತೆ ಮಾಡಬೇಕು ಅಷ್ಟೆ. ಮಾಡ್ತಾಮಾಡ್ತಾ ಹೊಸ ಸೋಶಿಯಲ್ ಲೈಫ್ ಮಾಡೆಲ್ ಸಿಗ್ತದ. ಅದು ಒಮ್ಮೆಲೆ ಪರ್ಫೆಕ್ಟ್ ಸಿಸ್ಟಂಗೆ ಬಂದು ಸೆಟ್ಲ್ ಆಗ್ತದ ಅಂತ ಹೇಳೋಕೆ ಬರೋದಿಲ್ಲ. ಹಿಂಗ ಆಕ್ಕೋತಾ ಹೋಗ್ತದ. ಈಗ ಕ್ಯೂಬಾದಾಗ ಇನ್ನೂ ಉಳಿದದ. ಚೈನಾದೊಳಗ ಅರ್ಧಮರ್ಧ ಉಳಿದದ.

ನೇಪಾಳದಲ್ಲಿ ಬರ್ತಾ ಅದ. ಬಾಕಿ ಎಲ್ಲಾ ಕಡೆ ಬರ್ತಾ ಅದ. ಅದರ ಅಗತ್ಯಾನೂ ಅದ. ಇಟೀಜ್ ಎ ನೀಡ್ ಆಫ್ ದಿ ಅವರ್.

**ನೀವು ಹೇಳಿದ್ದೆಲ್ಲ ವಿದೇಶಗಳ ಹೆಸರು. ಆದರೆ ಇಂಡಿಯಾದಲ್ಲಿ ಕಮ್ಯುನಿಸ್ಟ್ ಪಾರ್ಟಿಗಳ ಜನಬೆಂಬಲ ಸಂಕೋಚಗೊಳ್ತಾ ಇದೆ, ಯಾಕಿರಬಹುದು ?**

ಕಮ್ಯುನಿಸ್ಟ್ ಪಾರ್ಟಿಗಳು ಸ್ಟ್ರಾಂಗ್ ಇಲ್ಲ ನಮ್ಮಲ್ಲಿ. ಪಾರ್ಟಿ ಆರ್ಗನೈಜ್ ಮಾಡೋ ಶಕ್ತಿ ಕಡಿಮೆ ಅದ. ಜನರನ್ನ ಆರ್ಗನೈಜ್ ಮಾಡೋದು ಅಂದರ ಸಾಮಾನ್ಯ ಕೆಲಸ ಅಲ್ಲರೀ, ಭಾಳ ದೊಡ್ಡ ಕೆಲಸ ಅದು. ಇಟ್ ಟೇಕ್ಸ್ ಟೈಂ. ಅದರ ಬಗ್ಗೆ ಅವಸರ ಮಾಡೋ ಅವಕಾಶ ಇಲ್ಲ.

**ಬಂಗಾಳದಲ್ಲಿ ಈಗಿರುವ ಕಮ್ಯುನಿಸ್ಟ್ ಸರ್ಕಾರ, ಮಾರುಕಟ್ಟೆ ಆರ್ಥಿಕತೆ ಮತ್ತು ಬಂಡವಾಳ ಶಾಹಿ ಪರವಾದ ನೀತಿಗಳ ಕಡೆ ವಾಲ್ತಾ ಇದೆ. ಇದು ತಪ್ಪೋ ಅನಿವಾರ್ಯವೋ ?**

ಇಂದಿನ ಪರಿಸ್ಥಿತಿಯೊಳಗ ಇದು ಅನಿವಾರ್ಯ ಅಂತ ನನಗನಸ್ತದ. ಇಲ್ಲದಿದ್ದರೆ ಪಾರ್ಟಿ, ಪವರಿಂದ ಈ ಮೊದಲೇ ಹೋಗಿಬಿಡುತ್ತಿತ್ತು. ಸಣ್ಣ ಕಾಂಪ್ರೊಮೈಜ್ ಮಾಡ್ತಾರೆ ಅಂತಾ ಅವರು ಉಳಿದುಕೊಳ್ತಾ ಬಂದಾರ. ಬಹಳ ಸ್ಟ್ರಿಕ್ಟ್ ಆದರ ಖಲಾಸ್ ಆಗ್ತದರೀ.

**ಭಾರತದ ಕಮ್ಯುನಿಸ್ಟ್ ಚಳುವಳಿ, ಕಾರ್ಮಿಕರ ಸಮಸ್ಯೆಯನ್ನ ಕೈಗೆತ್ತಿಕೊಂಡಷ್ಟು, ಗ್ರಾಮೀಣ ದಲಿತರ ಸಮಸ್ಯೆಯನ್ನ ಅಥವಾ ರೈತಾಪಿ ಸಮಸ್ಯೆಯನ್ನ ಕೈಗೆತ್ತಿಕೊಂಡು ಸಂಘಟನೆ ಮಾಡೋಕೆ ಸಾಧ್ಯವಾಗಲಿಲ್ಲ.**

ಹೌದು. ಯಾರೂ ದಲಿತರು ಅಂಥಾ ಒಳ್ಳೆಯ ಕಮ್ಯುನಿಸ್ಟ್ ಆಗಲಿಲ್ಲ. ಎಲ್ಲಿ ಆಗಿದಾರ ಹೇಳಿ ? ಆದರೆ ಟ್ರೇಡ್ ಯೂನಿಯನಿಸಂ ಕೂಡ ನಮ್ಮಲ್ಲಿ ಸೀಮಿತ ಅದ. ಇಂಡಸ್ಟ್ರಿಯಲ್ ಗ್ರೂಪ್ ಹೆಚ್ಚಿಲ್ಲ ನೋಡ್ರಿ. ಅಷ್ಟರಮಟ್ಟಿಗೆ ಪರವಾಗಿಲ್ಲ ಆ ಫೀಲ್ಡ್‌ನೊಳಗೆ ಅದಾರ. ಅಲ್ಲೀನೂ ಈ ಹೊಸ ಕಂಡಿಶನ್‌ನೊಳಗ ಶಾವೆನಿಸ್ಟ್ ಮೂಮೆಂಟ್ಸ್ ಬೆಳೀತಾ ಅದಾವ ನೋಡ್ರಿ ಅವರಲ್ಲಿ.

**ಅಂದರೆ ?**

ಅಂದರ ಜಾತಿ ದುರಭಿಮಾನ. ಶಿವಸೇನಾ ಇಂತಹವೆಲ್ಲ.

**ಭಾರತದಲ್ಲಿ ಕೋಮುವಾದಿ ಪಕ್ಷಗಳಿಗೆ ಕಳೆದ ಎರಡು ಮಹಾ ಚುನಾವಣೆಗಳಲ್ಲಿ ಅಧಿಕಾರ ಹಿಡಿಯಲು ಆಗಿಲ್ಲ. ಆದರೂ ಅವುಗಳ ಸಿದ್ಧಾಂತ ಸಮಾಜದೊಳಗೆ ವ್ಯಾಪಕವಾದ ಒಪ್ಪಿಗೆ ಪಡಕೊಳ್ತಾ ಇದೆ.**

ಹೌದೌದು, ಅದಕ್ಕ ಕಾರಣ ಅಂತ ಹೇಳಿದರ, ಈ ಕಾಂಗ್ರೆಸ್ಸಿನ ಫೇಲ್ಯೂರ್. ಅಲ್ಲಿನ ಮಿಡ್ಲ್‌ಕ್ಲಾಸ್‌ನದ್ದು ಒಂದು ರ‍್ಯಾಡಿಕಲ್ ಭಾಗ ಏನೈತಿ, ಅದು ಆಂಟಿ ಕಮ್ಯುನಿಸ್ಟ್ ಆಗಿ ಬಿಟ್ಟೇತಿ. ಕಾಂಗ್ರೆಸ್ ತೊಗೊಳ್ರೀ. ನೆಹ್ರೂನ ಕಾಂಗ್ರೆಸ್ ಎಲ್ಲಿ? ಮತ್ತ ಈ ಪ್ರಣಬ್ ಮುಖರ್ಜಿಯ ಕಾಂಗ್ರೆಸ್ ಎಲ್ಲಿ? ಅಮೆರಿಕನ್ ಇಂಪೀರಿಯಲಿಸಂ ಮೂಲಕಾನೇ ಎಲ್ಲ ನೋಡ್ತಿರೂ ಈ ಮನಮೋಹನ್ ಸಿಂಗ್, ಸೋನಿಯಾ ಗಾಂಧಿ ಅವರ ಕಾಂಗ್ರೆಸ್ ಎಲ್ಲಿ?

**ಆದರೆ ಇದೇ ನೆಹರೂ ಕಾಂಗ್ರೆಸ್ಸಿನ ಕಾಲದಲ್ಲೇ, ತೆಲಂಗಾಣದಲ್ಲಿ ಕಮ್ಯುನಿಸ್ಟರನ್ನು ಸೇನೆ ಮೂಲಕ ದಮನ ಮಾಡಲಾಯಿತು, ಕೇರಳದಲ್ಲಿ ಕಮ್ಯುನಿಸ್ಟ್ ಸರ್ಕಾರವನ್ನು ಕಿತ್ತುಹಾಕ ಲಾಯಿತು, ಅಲ್ಲವಾ ?**

ನೆಹರೂ ರ‍್ಯಾಡಿಕಲ್ ಇದ್ದಾನ್ರೀ. ಆದರ ತುಸು ಕೌಡಿ ಮಾರ್ಕ್ಸಿಸ್ಟ್ ಇದ್ದ ಅಂವ್ನ. ಆದರ ಅದಕ್ಕೆಲ್ಲ ಕಮ್ಯುನಿಸ್ಟರು ಎಕ್ಸ್‌ಕ್ಯೂಸ್ ಕೊಟ್ರು. ಆದರ ನೆಹರೂಕ್ಕಿಂತಲೂ ಹೆಚ್ಚು ಅಲ್ಲಿಯ ರ‍್ಯಾಂಕ್ ರಿಯಾಕ್ಷನರಿ ಜನ ಕಾಂಗ್ರೆಸ್‌ನೊಳಗ ಏನಿದ್ರು, ಅವರು ಕಮ್ಯುನಿಸ್ಟರನ್ನು ತುಳಿದರು.

**೮೨ ವರ್ಷಗಳ ಸುದೀರ್ಘವಾದ ಜೀವನ ನಡೆಸಿದ್ದೀರಿ. ಈಗ ಹೊರಳಿ ನೋಡುವಾಗ, ಏನನಿಸ್ತದೆ ?**

ಎಲ್ಲೂ ಕೆಟ್ಟ ಮಾಡಿದೆ ಅಂತ ದು:ಖ ಇಲ್ಲ. ಕೆಲವು ತಪ್ಪು ತಡಿ ಆಗ್ತಾವೆ - ಅಧ್ಯಯನದ ಸಂದರ್ಭದಲ್ಲಿ. ಆದರೆ ಒಟ್ಟಿನ ಮೇಲೆ ಐಯಾಮ್ ಸ್ಯಾಟಿಸ್‌ಫೈಡ್.

**ಮುಪ್ಪಿನಲ್ಲಿ ಒಂಟಿತನ ಕಾಡ್ತಿದೆಯಾ ?**

ನನ್ನ ಹೆಂಡ್ತಿ ಸತ್ತಕೂಡಲೆ ನನಗೆ ಹೆಲ್ತ್ ಬಹಳ ಅಫೆಕ್ಟ್ ಆಯ್ತು. ಕಣ್ಣುಗಿಣ್ಣು ಎಲ್ಲ ಕಡಮೆ ಆದವು. ನನಗೆ ಅನಲೈಜ್ ಮಾಡೋಕೆ ಸಾಧ್ಯ ಆಗಿಲ್ಲ. ಐ ಫೀಲ್ ದಿ ಪೇನ್. ನಮ್ಮವರು ಅಂತ ಯಾರೂ ಇಲ್ಲ ನನ್ನ ಕೂಡ.

**ಈ ಒಂಟಿತನವನ್ನ ಹೇಗೆ ಓವರ್‌ಕಂ ಮಾಡ್ತೀರಿ ?**

ಈಗ ನೋಡ್ರಿ, ಇದನ್ನ ನಾನು ಓದೋದರೊಳಗ ಮಾಡ್ತಾ ಇದೀನಿ. ಏನೇ ಕಷ್ಟ ಆದರೂ, ಕಣ್ಣಿಗೇನೇ ತೊಂದರೆಯಾದರೂ, ಓದೋದು ಮಾಡ್ತೀನಿ. ಅಲ್ಲಿ ನನ್ನ ಆಫೀಸ್‌ನೊಳಗ ಇನ್ನೂ ಹೆಚ್ಚಿನ ಪುಸ್ತಕ ಇದಾವರ್ರೀ.

**ದೇವರನ್ನ ನಂಬಿದವರಿಗೆ ಒಂದು ಬಗೆಯ ಸಾವಿನ ಸಿದ್ಧತೆ ಇರ್ತದೆ. ದೈವರಹಿತ ಲೋಕವನ್ನು ನಂಬಿದವರ ಸಿದ್ಧತೆ ಹೇಗೆ ಇರ್ತದೆ ಅಂತ ಕುತೂಹಲವಿದೆ.**

ಏನು ಸಾಯೋದು ಅಂದರ ? ನನಗ ಅದರ ಬಗ್ಗೆ ಏನೂ ಭಯಾನೇ ಇಲ್ಲ. ಸಿದ್ಧವಾಗಿದೀನಿ. ದೇವರು ತೊಗೊಂಡು ಏನು ಮಾಡ್ತೀರಿ ? ಒಂದು ಕಾಲಕ್ಕ ದೇವರ ಪಾವರು ಅಗತ್ಯ ಇತ್ತು. ಅಗತ್ಯ ಇದ್ದಾಗ ಮಾಡಿಕೊಂಡಿವಿಯಲ್ಲಾ. ಅದು ಮುಗಿದು ಹೋಗಿದೆ. ಅದನ್ನೇ ಔಟ್‌ಲೀವ್ ಮಾಡಿವಿ ಅಲ್ಲಾ? ಇದು ನನಗೆ ಬಹಳ ಹಿಗ್ಗಿನ ವಿಷಯ.

**ನನ್ನ ತಲೆಮಾರಿಗೆ ನೀವು ಹೇಳಲೇಬೇಕು ಅಂತನ್ನೊ ಮಾತು ಅಂತ ಇದ್ದರೆ, ಅದು ಯಾವುದು ?**

ಸೈಂಟಿಫಿಕ್ ಔಟ್‌ಲುಕ್ ಬೆಳಸ್ರೀ. ಹ್ಯಾಪಿ ಇರ್ತೀರಿ. ಇದು ನನ್ನ ಅನುಭವ. ಸೈಂಟಿಫಿಕ್ ಔಟ್‌ಲುಕ್ ಇದ್ರ ಭ್ರಮೆ ಇರೋದಿಲ್ಲ ನೋಡ್ರಿ. ಯಾಕ ಬರ್ತದ ಹೇಳಿ ಭ್ರಮೆ ? ಭ್ರಮೆ ಇದ್ದುದರಿಂದಲೇ ಸ್ವೀಕಾರ ಮಾಡೋದು ಅಭ್ಯಾಸ ಆಗಿಬಿಟ್ಟಿರ್‍ತದ. ಭ್ರಮೆ ಹ್ಯಾಗೆ ನಿರ್ಧಾರ ಆಗೋದು ಅಂತ ಮಾರ್ಕ್ಸ್‌ವಾದ ನಮಗ ಹೇಳಿಕೊಡ್ತದ. ಇದರಿಂದ ನಮಗ ಸತ್ಯದ ಸಾಕ್ಷಾತ್ಕಾರ ಯಾವಾಗಲೂ ಇರ್ತದ ನೋಡ್ರಿ. ಎಲ್ಲಿಯಾದ್ರೂ ಮೋಸ ಹೋದೆ, ತಪ್ಪಿಹೋದೆ ಅಂತನ್ನೊ ಪ್ರಶ್ನೇನೇ ಇಲ್ಲ. ಭಾಳ ಅಂದರ ನಾನೇ ಮೋಸ ಹೋಗಬೇಕು. ನಾನೇ ಸರಿಪಡಿಸಿಕೊಳ್ಳಬೇಕು. ವಿಶ್ವಾಸ ಶ್ರದ್ಧೆ ಇದಕ್ಕೆಲ್ಲ ಬೆನ್ನು ಬೀಳೋ ಪ್ರಸಂಗಾನೇ ಬರಂಗಿಲ್ಲ. ನನಗಂತೂ ಎಂದೂ ಬಂದಿಲ್ಲ. ಧರ್ಮದ ಬಗ್ಗೆ ನಾನು ಅಭ್ಯಾಸ ಮಾಡ್ತೀನಿ. ಅಷ್ಟು ಉಂಟು. ಆದರ ನಂಬಲಿಕ್ಕೆ ಹೋಗೋದಿಲ್ಲ. ಜೀವನದಲ್ಲಿ ಏನು ಮಾಡಬೇಕು ಅದನ್ನ ಮಾಡಿದೀನಿ. ಸಾಧ್ಯ ಇದ್ದಷ್ಟು ಮಾಡ್ತಾ ಇದೀನಿ.

*(ಈ ಸಂದರ್ಶನವನ್ನು ಪ್ರಕಟಣೆಗೆ ಸಿದ್ಧಪಡಿಸುತ್ತಿರುವಾಗ, ಅನೇಕ ಮಾಹಿತಿಗಳನ್ನು ಒದಗಿಸಿದ ಶ್ರೀ ಮಹಾಂತ ಗುಲಗಂಜಿ ಹಾಗೂ ಪಿ. ಎಸ್. ಪಾಟೀಲರ ರಾಜಕೀಯ ಶಿಷ್ಯರಾದ ಶ್ರೀ ಬಿ. ಜಿ. ಮನಗೋಳಿ ಅವರ ನೆರವನ್ನು ಸ್ಮರಿಸುತ್ತೇನೆ.)*

ಸಂದರ್ಶಕ : ರಹಮತ್ ತರೀಕೆರೆ
ಎಂ. ಪಿ. ಪ್ರಕಾಶ ನಗರ, ಹೊಸಪೇಟೆ - ೫೮೩ ೨೦೧, ಬಳ್ಳಾರಿ ಜಿಲ್ಲೆ




ರಾಷ್ಟ್ರೀಯ ಪಕ್ಷವಾದ ಬಿ.ಜೆ.ಪಿ.ಗೆ ತನ್ನದೇ ಆದ ಸ್ಪಷ್ಟವಾದ, ರಾಷ್ಟ್ರೀಯ ಆರ್ಥಿಕ ನೀತಿ ಎಂಬುದೇನಾದರೂ ಇದೆಯೇ ?

ಇವತ್ತು ಈ ಪ್ರಶ್ನೆಯನ್ನು ಕೇಳಲು ಮುಖ್ಯವಾದ ಎರಡು ಕಾರಣಗಳಿವೆ. ಅವೆಂದರೆ : ಒಂದು, ಯಾರೇನೆ ಅಲ್ಲಗಳೆದರೂ ಕಾಂಗ್ರೆಸ್‌ಅನ್ನು ಹೊರತುಪಡಿಸಿದರೆ ಬಿ.ಜೆ.ಪಿ.ಯೇ ಅತ್ಯಂತ ದೊಡ್ಡ ಮತ್ತು ರಾಷ್ಟ್ರೀಯ ವ್ಯಾಪ್ತಿಯುಳ್ಳ ಪಕ್ಷವಾಗಿರುವುದು. ಮತ್ತು ಮುಂದೊಂದು ದಿನ ಅದು ಕೇಂದ್ರದಲ್ಲಿ ಅಧಿಕಾರ ಹಿಡಿಯುವ ಎಲ್ಲಾ ಸಾಧ್ಯತೆಗಳು ಇರುವುದು. ಎರಡನೆಯದು, ಇವತ್ತು ತಾನು ಅಧಿಕಾರದಲ್ಲಿರುವ ಗುಜರಾತ್, ಮಧ್ಯಪ್ರದೇಶ, ಜಾರ್ಖಂಡ್, ಉತ್ತರಾಂಚಲ ಮತ್ತು ಕರ್ನಾಟಕದಲ್ಲಿ ಆ ಪಕ್ಷ ತೆಗೆದುಕೊಳ್ಳುತ್ತಿರುವ ನಿರ್ಧಾರಗಳು ಮತ್ತು ಹಣಕಾಸು ಖಾತೆಯನ್ನು ಅದು ನಿರ್ವಹಿಸುತ್ತಿರುವ ರೀತಿ ಅದೊಂದು ನಿರ್ದಿಷ್ಟ ಆರ್ಥಿಕ ನೀತಿಯನ್ನು ಹೊಂದಿದೆಯೇ ಎಂಬ ಅನುಮಾನವನ್ನು ಹುಟ್ಟುಹಾಕಿದೆ.

ಇವತ್ತು ಬಹುತೇಕ ಇತರ ಎಲ್ಲ ರಾಜಕೀಯ ಪಕ್ಷಗಳು ತಮ್ಮ ಕಾರ್ಯಕ್ರಮಗಳ ಬಗ್ಗೆ ಮಾತನಾಡುವಾಗ, ತೋರಿಕೆಗಾದರೂ ಮುಕ್ತ ಆರ್ಥಿಕ ನೀತಿ, ಅಭಿವೃದ್ಧಿ, ಸಾಮಾಜಿಕ ನ್ಯಾಯ, ಗ್ರಾಮೀಣ ಆರ್ಥಿಕ ವ್ಯವಸ್ಥೆಗಳ ಬಗ್ಗೆ ಪ್ರಸ್ತಾಪಿಸುವುದುಂಟು. ಆದರೆ ಇದುವರೆಗೂ ಬಿ.ಜೆ.ಪಿ. ಈ ಯಾವ ವಿಷಯಗಳ ಬಗ್ಗೆಯೂ ಯಾವತ್ತೂ ಗಂಭೀರವಾಗಿ ಪ್ರಸ್ತಾಪಿಸಿಲ್ಲ.

ಈ ಹಿನ್ನೆಲೆಯಲ್ಲಿ ನಾವು ಕಾಂಗ್ರೆಸ್ ಪಕ್ಷದ ಆರ್ಥಿಕ ನೀತಿಯ ಬಗ್ಗೆ ಸಹ ಒಂದು ಇಣುಕು ನೋಟ ಬೀರಬೇಕಾಗುತ್ತದೆ. ಈಗಾಗಲೇ ಕಾಂಗ್ರೆಸ್ ಪಕ್ಷ ತನ್ನ ನೆಹರೂ ಜಮಾನಾದ ಸಮಾಜವಾದವನ್ನು, ಇಂದಿರಾ ಗಾಂಧಿಯವರ 'ಗರೀಬಿ ಹಟಾವೋ' ಮತ್ತು ಸಾಮಾಜಿಕ ನ್ಯಾಯದಂತಹ ಕಾರ್ಯಕ್ರಮಗಳನ್ನು ಎಂದೋ ಕೈಬಿಟ್ಟಿದೆ. ಜೊತೆಗೆ ಮುಕ್ತ ಆರ್ಥಿಕ ನೀತಿಯನ್ನು ಮನಸಾರೆ ಅಪ್ಪಿಕೊಂಡಿದೆ.

ತೊಂಭತ್ತರ ದಶಕದ ಪ್ರಾರಂಭದಲ್ಲಿ ಅವತ್ತಿನ ನರಸಿಂಹರಾವ್ ನೇತೃತ್ವದ ಸರಕಾರ ಮನಮೋಹನ್ ಸಿಂಗ್‌ರ ಮೂಲಕ ಜಾರಿಗೆ ತಂದ ಮುಕ್ತ ಆರ್ಥಿಕ ನೀತಿಯನ್ನು ಚಾರಿತ್ರಿಕ ಅನಿವಾರ್ಯತೆಯೆಂಬ ಸಬೂಬಿನಲ್ಲಿ ಸಮಾಜದ ಬಹುತೇಕ ಸ್ತರಗಳ ಸಮುದಾಯಗಳು ಒಪ್ಪಿಕೊಂಡವು ಅಥವಾ ಒಪ್ಪಿಕೊಳ್ಳುವಂತೆ ಮಾಡಲಾಯಿತು. ಆಗ ವಿರೋಧ ಪಕ್ಷದಲ್ಲಿದ್ದ ಬಿ.ಜೆ.ಪಿ. ಮಾತ್ರ ತನ್ನ ಸಂಘಪರಿವಾರದ ಸ್ವದೇಶಿ ನೀತಿಗನುಗುಣವಾಗಿ ಮುಕ್ತ ಆರ್ಥಿಕ ನೀತಿಯನ್ನು ಕೆಲ ಮಟ್ಟಿಗೆ ವಿರೋಧಿಸಿದಂತೆ ನಾಟಕವಾಡಿತು. ವಿಪರ್ಯಾಸವೆಂದರೆ ತದನಂತರ ಅಧಿಕಾರಕ್ಕೆ ಬಂದ ಬಿ.ಜೆ.ಪಿ. ನೇತೃತ್ವದ ಎನ್.ಡಿ.ಎ. ಸರಕಾರ ಯಾವುದೇ ಸಂಕೋಚ-ಮುಜುಗರಗಳಿಲ್ಲದೆ ಹಿಂದಿನ ಸರಕಾರ ಜಾರಿಗೆ ತಂದ ಮುಕ್ತ ಆರ್ಥಿಕ ನೀತಿಯನ್ನೇ ಮುಂದುವರಿಸಿಕೊಂಡು ಹೋಯಿತು.

ಇದನ್ನು ಸೂಕ್ಷ್ಮವಾಗಿ ಗಮನಿಸಿದರೆ ಮುಕ್ತ ಆರ್ಥಿಕ ನೀತಿಯ ವಿಚಾರದಲ್ಲಿ ಕಾಂಗ್ರೆಸ್ ಮತ್ತು ಬಿ.ಜೆ.ಪಿ. ಎರಡೂ ಪಕ್ಷಗಳ ನಡುವೆ ತಾತ್ವಿಕವಾಗಿ ಅಂತಹ ಭಿನ್ನಾಭಿಪ್ರಾಯಗಳೇನೂ ಇಲ್ಲವೆಂಬುದು ಸ್ಪಷ್ಟವಾಗುತ್ತದೆ.

ಹಾಗಾದರೆ ಪ್ರಾರಂಭದಲ್ಲಿ ಬಿ.ಜೆ.ಪಿ. ಮುಕ್ತ ಆರ್ಥಿಕ ನೀತಿಯನ್ನು ವಿರೋಧಿಸಿದ್ದಾದರೂ ಯಾಕೆ? ಹಾಗೂ ಸಂಘಪರಿವಾರದ ಸ್ವದೇಶಿ ನೀತಿಯನ್ನು ತನ್ನ ಆಯುಧವನ್ನಾಗಿ ಆರಂಭದಲ್ಲಿ ಬಳಸಿದ್ದಾದರೂ ಯಾಕೆ?

ಯಾಕೆಂದರೆ ಬಿ.ಜೆ.ಪಿ.ಗೆ ಮುಕ್ತ ಆರ್ಥಿಕ ನೀತಿಯ ಬಗ್ಗೆಯಾಗಲಿ, ಖಾಸಗಿ ಬಂಡವಾಳದ ಬಗ್ಗೆಯಾಗಲಿ ಆಳದಲ್ಲಿ ಯಾವ ಆಕ್ಷೇಪವೂ ಇಲ್ಲ. ಆದರೆ ಅದು ಬಯಸುವುದು ಮುಕ್ತ ಆರ್ಥಿಕ ನೀತಿ ಮತ್ತು ಖಾಸಗಿ ಬಂಡವಾಳ ತರುವ ಲಾಭ ಏನಿದೆಯೋ ಅದು ತನಗೆ ಮತ್ತು ತನ್ನನ್ನು ಬೆಂಬಲಿಸುವ ಶಕ್ತಿಗಳೇನಿವೆಯೋ ಅವುಗಳಿಗೆ ಮಾತ್ರ ಸಿಗಬೇಕೆಂಬ ಕಾರಣಕ್ಕೆ. ಹೀಗಾಗಿಯೇ ಅದು ಪ್ರಾರಂಭದಲ್ಲಿ ವಿರೋಧಿಸಿದ್ದು ಮುಕ್ತ ಆರ್ಥಿಕ ನೀತಿಯ ಪರಿಣಾಮವಾಗಿ ಬಂದ ವಿದೇಶೀ ಬಹುರಾಷ್ಟ್ರೀಯ ಕಂಪನಿಗಳನ್ನು ಮಾತ್ರ. ಮುಕ್ತ ಆರ್ಥಿಕತೆಯ ಲಾಭ ಸ್ವದೇಶಿ ಬಹುರಾಷ್ಟ್ರೀಯ ಕಂಪನಿಗಳಿಗೆ ದೊರೆಯಬೇಕೆನ್ನುವುದೇ ಅದರ ನಿಜವಾದ ಆಶಯವಾಗಿತ್ತು. ಯಾಕೆಂದರೆ ಜನಸಂಘದ ಕಾಲದಿಂದಲೂ ಬಿ.ಜೆ.ಪಿ.ಗೆ ಬೃಹತ್ ಮೊತ್ತದ ವಂತಿಕೆಗಳನ್ನು ನೀಡುತ್ತ ಬೆಂಬಲಿಸುತ್ತಿದ್ದುದು ಉತ್ತರ ಭಾರತೀಯರ ಒಡೆತನದ ಸ್ವದೇಶಿ ಕಂಪನಿಗಳೇ!

ಹೀಗಾಗಿಯೇ ತನ್ನನ್ನು ಬೆಂಬಲಿಸುವ ಶಕ್ತಿಗಳಿಗೆ ಆರ್ಥಿಕ ಚೈತನ್ಯ ನೀಡಬಲ್ಲಂತಹ ಮುಕ್ತ ಆರ್ಥಿಕತೆಯನ್ನು ಮೇಲ್ನೋಟಕ್ಕೆ ಮಾತ್ರ ವಿರೋಧಿಸುವಂತಹ ನಾಟಕವಾಡುತ್ತ ಬಂದ ಬಿ.ಜೆ.ಪಿ. ಆಳದಲ್ಲಿ ಯಾವುದೇ ಸ್ಪಷ್ಟತೆಯಿಂದ ಅದನ್ನು ಸಾರಾಸಗಟಾಗಿ ವಿರೋಧಿಸುವ ಗೋಜಿಗೆ ಹೋಗಲಿಲ್ಲ.

ಭಾರತದಂತಹ ಮೂರನೇ ಜಗತ್ತಿನ ರಾಷ್ಟ್ರಗಳ ಬಹುತೇಕ ರಾಜಕಾರಣಿಗಳಿಗೆ ವಿದೇಶಿ ಮತ್ತು ಖಾಸಗಿ ಬಂಡವಾಳವೆಂಬುದು ತಮ್ಮ ರಾಜಕೀಯ ಆಶೋತ್ತರಗಳನ್ನು ಪೂರೈಸುವ ಸುವರ್ಣ ಮಾಧ್ಯಮವೆಂಬ ಸತ್ಯ ಗೊತ್ತಾಗಿದೆ. ಬಹುಶಃ ಬಿ.ಜೆ.ಪಿ.ಯ ನಾಯಕರು ಸಹ ಪ್ರಲೋಭನೆಗೆ ಒಳಗಾಗಿದ್ದಾರೆನಿಸುತ್ತಿದೆ.

ಬಿ.ಜೆ.ಪಿ.ಯ ದೃಷ್ಟಿಯಲ್ಲಿ ಆರ್ಥಿಕ ನೀತಿಯೆಂದರೆ ಕೇಂದ್ರ ಮತ್ತು ರಾಜ್ಯಗಳಲ್ಲಿ ಅಧಿಕಾರ ಬಂದಾಗ ಬಜೆಟ್ ಮಂಡಿಸುವುದು ಮಾತ್ರ. ಯಾಕೆಂದರೆ ಬಿ.ಜೆ.ಪಿ. ಜನ್ಮತಾಳಿದ್ದೇ ಸಂಘಪರಿವಾರದ 'ಮತೀಯ ರಾಷ್ಟ್ರೀಯತೆ'ಯ ಸಿದ್ಧಾಂತವನ್ನು ಜಾರಿಗೆ ತಂದು ರಾಜಕೀಯ ಅಧಿಕಾರ ಹಿಡಿಯುವುದಕ್ಕಾಗಿ. ಹೀಗಾಗಿಯೆ ಬಿ.ಜೆ.ಪಿ.ಗೆ ಸಮುದಾಯಕ್ಕೆ ಅಗತ್ಯವಿರುವ ಕೃಷಿ ನೀತಿ, ಶಿಕ್ಷಣ ನೀತಿ, ಕೈಗಾರಿಕಾ ನೀತಿಗಳನ್ನೆಲ್ಲ ಒಳಗೊಂಡಂತಹ ಒಂದು ಸಮಗ್ರ ಆರ್ಥಿಕತೆಯನ್ನು ರೂಪಿಸುವ ಯಾವ ಇರಾದೆಯೂ ಇಲ್ಲ. ರಾಜಕೀಯ ಅಧಿಕಾರ ಪಡೆಯಲು ಅದು ಮತೀಯ ರಾಷ್ಟ್ರೀಯತೆ ಎಂಬ ಭಾವನಾತ್ಮಕ ಅಂಶವನ್ನು ಅವಲಂಬಿಸಿಕೊಂಡಿದೆ. ಜನತೆಯ ಧಾರ್ಮಿಕ ಭಾವನೆಗಳನ್ನು ಕೆರಳಿಸಿ, ಅದನ್ನು ತನ್ನ ಪರವಾದ ಮತಗಳನ್ನಾಗಿ ಪರಿವರ್ತಿಸಿಕೊಂಡು ಅಧಿಕಾರದ ಚುಕ್ಕಾಣಿ ಹಿಡಿಯಲು ಹೊರಟಿರುವ ಬಿ.ಜೆ.ಪಿ.ಗೆ ಆರ್ಥಿಕ ನೀತಿಯ ಹಂಗು ಬೇಕಾಗಿಲ್ಲ. ಹೀಗಾಗಿ ಬೇರೆ ಪಕ್ಷಗಳು ಕನಿಷ್ಠ ತೋರಿಕೆಗಾದರೂ ಮಾತನಾಡುವ ಸಾಮಾಜಿಕ ನ್ಯಾಯ, ಸಂಪತ್ತಿನ ಹಂಚಿಕೆ ಮುಂತಾದ ವಿಷಯಗಳ ಬಗ್ಗೆ ಅದು ಅಪ್ಪಿ-ತಪ್ಪಿಯೂ ಚಕಾರ ಎತ್ತುವುದಿಲ್ಲ.

ಬಿ.ಜೆ.ಪಿ.ಯ ಇಂತಹ ಧೋರಣೆಯಿಂದಲೇ ಇವತ್ತು ಕರ್ನಾಟಕ ಸರಕಾರ ರೈತರ ಕೃಷಿ ಭೂಮಿಯನ್ನು ಎಸ್.ಇ.ಝಡ್.ಗಳಿಗೆ, ಖಾಸಗಿಯವರಿಗೆ, ನೀಡುತ್ತಾ ನಮ್ಮ ಕೃಷಿ ಆಧಾರಿತ ಆರ್ಥಿಕತೆಯನ್ನು ಹಾಳುಗೆಡುವುತ್ತಿರುವುದು, ಹಾಗೂ ಸರಕಾರದ ಹಣವನ್ನು ತನ್ನ ಶ್ರೇಯೋಭಿಲಾಷಿಗಳಿಗೆ, ತನ್ನ ಹಿತ ಕಾಯುವ ಮಠ-ಮಾನ್ಯಗಳಿಗೆ ಬೇಕಾಬಿಟ್ಟಿ ಹಂಚುತ್ತಿರುವುದು.

ವಾಸ್ತವದಲ್ಲಿ ಕಾಂಗ್ರೆಸ್‌ಗೆ ಪರ್ಯಾಯವಾದ ಅತಿ ದೊಡ್ಡ ರಾಜಕೀಯ ಶಕ್ತಿಯಾಗಿರುವ ಬಿ.ಜೆ.ಪಿ. ಈಗಲಾದರೂ ತನ್ನದೇ ಆದ ಒಂದು ಆರ್ಥಿಕ ನೀತಿಯನ್ನು ರೂಪಿಸಿಕೊಳ್ಳಬೇಕಾದ ಅಗತ್ಯವಿದೆ. ಧರ್ಮ ಎಲ್ಲ ಕಾಲಕ್ಕೂ ಮತಗಳಿಕೆಯ ಮಾರ್ಗವಾಗಲಾರದೆಂಬುದನ್ನು ಆ ಪಕ್ಷ ಮನಗಾಣಬೇಕಿದೆ. ಕಾಂಗ್ರೆಸ್‌ಗೆ ಪರ್ಯಾಯವಾಗಿ ಬೆಳೆದು ಉಳಿಯಬೇಕೆಂದರೆ ಅದು ಜನಪರವಾದ ಒಂದು ಸ್ಪಷ್ಟ ಆರ್ಥಿಕ ನೀತಿಯನ್ನು ರೂಪಿಸಿಕೊಳ್ಳುವುದು ಕೇವಲ ಒಳಿತಿಗೆ ಮಾತ್ರವಲ್ಲ, ರಾಷ್ಟ್ರದ ಹಿತಾಸಕ್ತಿಯ ದೃಷ್ಟಿಯಿಂದಲೂ ಅನಿವಾರ್ಯವಾಗಿದೆ. ಈ ನಿಟ್ಟಿನಲ್ಲಿ ಅದು ಯೋಚಿಸುವಂತಾಗಲಿ.

**ಕು. ಸ. ಮಧುಸೂದನ**
ವಿಜಯಾ ಬ್ಯಾಂಕ್ ಮಹಡಿ, ರಂಗೇನಹಳ್ಳಿ - ೫೭೭ ೧೮೮, ಚಿಕ್ಕಮಗಳೂರು ಜಿಲ್ಲೆ

ಕತೆಗಾರರು
'ಚದುರಂಗ'

ಶ್ರೀ ಸುಬ್ರಮಣ್ಯರಾಜೆ ಅರಸು ಕರ್ನಾಟಕದ ಪ್ರಗತಿಶೀಲ ಸಾಹಿತಿಗಳಲ್ಲಿ ಪ್ರಮುಖರು. 'ಚದುರಂಗ' ಹೆಸರಿನಲ್ಲಿ ಕತೆ, ಕಾದಂಬರಿಗಳನ್ನು ಪ್ರಕಟಿಸಿ ಹೆಸರುವಾಸಿಯಾದವರು. 'ಶವದ ಮನೆ' ೧೯೫೦ರಲ್ಲಿ ಪ್ರಕಟವಾದ ಕಥಾಸಂಕಲನದಿಂದ ಆಯ್ದ ಕತೆ, ಇಂದಿಗೂ ಪ್ರಸ್ತುತ. ಪ್ರಗತಿಶೀಲ ಸಾಹಿತ್ಯ ಚಳುವಳಿಯ ೭೫ನೆಯ ವರ್ಷದ ಸಂದರ್ಭದಲ್ಲಿ ಈ ಕತೆ.



# ಶವದ ಮನೆ

ಧಣ್...

ಗೋಡೆಗೆ ಜೋತುಬಿದ್ದ ದೊಡ್ಡ ಗಡಿಯಾರದ ಬಾಯಿ ತೆರೆದು ಚಿಲ್ಲನೆ ಚೀರಿತು.

ಹನ್ನೆರಡೂವರೆ ಗಂಟೆ!

ವಾರ್ಡಿನ ಬಾಗಿಲಿಗೆ ಆತು ಕುಳಿತು ತೂಕಡಿಸುತ್ತಿದ್ದ ಮುನಿಯ ಬೆಚ್ಚಿಬಿದ್ದು ಎಚ್ಚೆತ್ತ.

''ಹಾಳು ಗಡಿಯಾರ! ಯಾಕಾದರೂ ಹಾಕಿದರೋ ಇಲ್ಲಿ? ಇನ್ನೂ ಸರಿಯಾಗಿ ಒಂದು ಗೊರಕೆ ಹೊಡೀನಿಲ್ಲ, ತಟ್ಟಿ, ತಟ್ಟಿ ಎಳಿಸ್‌ತದೆ!''

ವಾರ್ಡ್‌ಬಾಯ್ ಮುನಿಯ ಗಡಿಯಾರವನ್ನೇ ದುರುದುರನೆ ನೋಡಿದ.

ಆದರೆ ಮುನಿಯನ ಕೋಪ ಗಡಿಯಾರದ ಮೇಲೆ ಏನೊಂದೂ ಪರಿಣಾಮ ಮಾಡಿದಂತೆ ತೋರಲಿಲ್ಲ. ಉದ್ವೇಗರಹಿತವಾಗಿ, ತನ್ನ ಪಾಡಿಗೆ ತಾನು ಕಾಲವನ್ನು ಸೂಚಿಸುತ್ತ ಸಾಗಿತ್ತು.

ತನ್ನೊಳಗೆ ಏನೇನೋ ಗೊಣಗಿದ ಮುನಿಯ.

ಆದರೆ ಅಷ್ಟು ರಾತ್ರಿಯಲ್ಲಿ ಬಹಳ ಕಾಲ ಹಾಗೆ ಕೋಪಿಸಿಕೊಂಡಿರಲು ಸಾಧ್ಯವೆ?

ಹೇಗೆ ಸಾಧ್ಯ?

ನಿದ್ದೆಯ ತೊಟ್ಟಿಲು ಒಂದೇ ಸಮನೆ ಅವನ ಕಣ್ಣುಗಳನ್ನು ತೂಗುತ್ತಿತ್ತು. ಬಾಗಿಲಿಗೆ ತಲೆಯೊರಗಿಸಿ ಮತ್ತೆ ಮಲಗಲು ಅನುವಾದ ಮುನಿಯ.

ನಿದ್ದೆ?

ಎಲ್ಲಿ ಬಂತು ನಿದ್ದೆ?

ಅದು ಆಸ್ಪತ್ರೆಯ ಒಂದು ವಾರ್ಡ್ ಅಲ್ಲವೆ? ತಾನು, ರಾತ್ರಿ 'ಡ್ಯೂಟಿ'ಗೆ ನೇಮಕವಾದ ಒಬ್ಬ ವಾರ್ಡ್‌ಬಾಯ್ ಅಲ್ಲವೆ?

...ಅಗೋ! ಬಂದಿತು ಆಗಲೇ 'ಬುಲಾವ್'.

ಹನ್ನೊಂದನೇ 'ಬೆಡ್ಡ'ನ ರೋಗಿ ಕ್ಷೀಣ ಸ್ವರದಲ್ಲಿ ಕೂಗುತ್ತಿದ್ದ. ವಿಧಿಯಿಲ್ಲದೆ, ಬೇಸರದಿಂದ ಎದ್ದು ರೋಗಿಯ ಪಕ್ಕಕ್ಕೆ ಬಂತು ನಿಂತ ಮುನಿಯ.

ರೋಗಿಯ ಸ್ಥಿತಿ ಚಿಂತಾಜನಕವಾಗಿತ್ತು.

ಕಣ್ಣು ಮುಚ್ಚಿದೆ, ನಿದ್ದೆ ಮಾಡುತ್ತಿದ್ದಾನೆ - ಎಂದುಕೊಂಡರೆ, ಅವನ ತೆರೆದ ಬಾಯಿಂದ ಗಳಿಗೆಗೊಂದು ಸಲ ಹೊರಡುತ್ತಿದ್ದ 'ಅಮ್ಮಾ' ಎಂಬ ನರಳಾಟದ ಆರ್ತಸ್ವರ ''ಹುಚ್ಚು, ಈ ಸ್ಥಿತಿಯಲ್ಲಿ ನಿದ್ದೆಯೆಲ್ಲಿ ಬರಬೇಕು?'' ಎಂದು ಅಣಕವಾಡುತ್ತಿತ್ತು.

ಮುನಿಯ ತುಂಬಿದ ಮರುಕದಿಂದ ರೋಗಿಯನ್ನೇ ನಿಟ್ಟಿಸಿ ನೋಡಿದ.

ಏನೋ ಸಂಕಟವಾದಂತಾಯಿತು. ಕೊಂಚ ಹಾಲನ್ನಾದರೂ ಕೊಟ್ಟರೆ ಸಮಾಧಾನವಾಗಬಹುದೆಂದು ಬಗೆದ.

ಆದರೆ ಬಾಯಿಗೆ ಹಾಕಿದ ಹಾಲು ದಕ್ಕದೆ, ಕಟವಾಯಿಂದ ಹರಿದು ಹೊರಗೆ ಚೆಲ್ಲಿಹೋಯಿತು.

ನಿಶ್ಚೇಷ್ಟಿತನಾಗಿ ನಿಂತು ನೋಡುತ್ತಿದ್ದ ಮುನಿಯ. ರೋಗಿಯ 'ಅಮ್ಮಾ, ಅಮ್ಮಾ' ಎಂಬ ಒಂದೊಂದು ಕೂಗೂ ಅವನೆದೆಯ ನಿರಾಸೆಯನ್ನು ವೃದ್ಧಿಸುತ್ತಿತ್ತು.

ನಿಡಿದಾಗಿ ಉಸಿರುಬಿಟ್ಟು ತಾನು ಹಿಂದೆ ಕುಳಿತಿದ್ದ ಜಾಗಕ್ಕೇ ಬಂದು ಕುಳಿತ.

ಮತ್ತೆ ನಿದ್ದೆ ಮಾಡುವುದೇ? ಮಾಡಬಹುದಾಗಿತ್ತು... ಬಂದರಲ್ಲವೇ?

ಸ್ವಲ್ಪ ಕಾಲದ ಹಿಂದೆ ಕವಿದುಬರುತ್ತಿದ್ದ ನಿದ್ದೆಯ ತೆರೆ ಪೂರ್ಣವಾಗಿ ಹರಿದುಹೋಗಿತ್ತು. ಮನಸ್ಸು ಯಾವುದೋ ಯೋಚನೆಯ ಸುಳಿಯಲ್ಲಿ ಚಕ್ರಾಕಾರವಾಗಿ ಸುತ್ತುತ್ತಿತ್ತು.

ಏನು ಯೋಚನೆ?

ಇನ್ನೇನು, ಇದೆಯಲ್ಲ - ಹನ್ನೊಂದನೆ ಬೆಡ್! ಅನಿಷ್ಟ, ಒಂದೇ ತಿಂಗಳಲ್ಲಿ ಮೂರು ರೋಗಿಗಳನ್ನು ಬಲಿ ತೆಗೆದುಕೊಂಡಿತ್ತು.

ಈಗ ನಾಲ್ಕನೆಯ ಆಹುತಿಯನ್ನು ನುಂಗಲು ಸಿದ್ಧವಾಗುತ್ತಿದೆಯೇನೋ?...

ಧಣ್...

ಮತ್ತೆ ಬೆಚ್ಚಿಬಿದ್ದ ಮುನಿಯ.

ಹಾಳು ಗಡಿಯಾರ! ಪುನಃ ಚೀರುತ್ತಾ ಇದೆ. ಒಂದು ಗಂಟೆ, ಒಂದು ಗಂಟೆ ಎಂದು. ಮುನಿಯನ ಮನಸ್ಸಿನ ಭಾರ ಶಾಪದ ರೂಪದಲ್ಲಿ ಗಡಿಯಾರದ ಮೇಲೆ ಹರಿದುಹೋಯಿತು.

ಮುನಿಯ ಸರಿಪಡಿಸಿ ಕುಳಿತುಕೊಳ್ಳುತ್ತಾ, ದೃಷ್ಟಿಯನ್ನು ರೋಗಿಗಳ ಕಡೆಗೆ ಹೊರಳಿಸಿದ.

ಎಲ್ಲ ರೋಗಿಗಳೂ ಶಾಂತರಾಗಿ ಮಲಗಿದ್ದರು. ಹನ್ನೊಂದನೆ ಬೆಡ್ಡೂ ಈಗ ಶಾಂತವಾಗಿತ್ತು.

ಶಾಂತವಾಗಿತ್ತು!

ಏಕೆ?

ಒಂದೇ ಸಮನೆ ಕೇಳುತ್ತಿದ್ದ 'ಅಮ್ಮಾ ಅಮ್ಮಾ' ಎಂಬ ಕೂಗು ಈಗ ಏಕೆ ಕೇಳಿಬರುತ್ತಿಲ್ಲ?

ಏನಾದರೂ...?

ದಡಬಡಿಸಿ ಎದ್ದು ರೋಗಿಯ ಹತ್ತಿರ ಓಡಿ ಬಂದ.

ಓ! ಉಸಿರೆ ಆಡುತ್ತಿಲ್ಲ...

ಏನು ಮಾಡುವುದು ?

ಮಾಡುವುದೇನು - ಹೋಗಿ ಡಾಕ್ಟರನ್ನು ಕರೆತರುವುದು.

ಮುನಿಯ ನೈಟ್‌ಡ್ಯೂಟಿ ಡಾಕ್ಟರ ಕೋಣೆಯನ್ನು ಹೊಕ್ಕಾಗ ಅವರು ನರ್ಸ್ ವಿನ್ನಿಯೊಂದಿಗೆ ಚಕ್ಕಂದವಾಡುತ್ತಿದ್ದರು.

ಮುನಿಯ ಕೆಮ್ಮಿದ.

ಗಳಿಗೆಯ ಹಿಂದೆ ನಿರ್ಭೀತರಾಗಿ ಸರಸವಾಡುತ್ತಿದ್ದ ಡಾಕ್ಟರು ದಿಗಿಲಿನಿಂದ ಒಂದು ಬಾರಿ ನಡುಗಿದರು. ಕೆಮ್ಮಿದಾತ ಮೇಲಧಿಕಾರಿ ಆರ್.ಎಂ.ಓ. ಇರಬೇಕು ಎಂದು ಭಾವಿಸಿದರು. ನಡುಕ ಮತ್ತೂ ಹೆಚ್ಚಿತು.

ವಿನ್ನಿ ನಕ್ಕು ಅವರ ಭುಜದ ಮೇಲೆ ಕೈಯಿಟ್ಟು,

''ಏಕೆ ಹೆದರುತ್ತೀರಿ, ಆತ ಯಾರೂ ಅಲ್ಲ - ನಮ್ಮ ಮುನಿಯ !'' ಎಂದು ಹೇಳಿದಾಗ ಮಾತ್ರ ಅವರಿಗೆ ಹೋದ ಜೀವ ಬಂದಂತಾಯಿತು.

''ನೀನೇನೋ ? -'' ಎಂದು ಕೇಳಿದರು. ಅವರ ಸ್ವರದಲ್ಲಿ ಇನ್ನೂ ಅಪನಂಬಿಕೆಯ ಲೇಪವಿತ್ತು.

''ಹ್ಞೂ, ಸಾರ್.'' ಡಾಕ್ಟರ ಗಾಬರಿ ನೋಡಿ ಮುನಿಯನಿಗೆ ನಗು ಬಂತು.

''ಏನು ಬಂದೆ ?'' - ಗಂಭೀರವಾಗಿ ಕೇಳಿದರು ಡಾಕ್ಟರು. ತಾವು ಡಾಕ್ಟರು, ಆತ ವಾರ್ಡ್‌ಬಾಯ್ - ಎಂಬ ಧ್ವನಿ ಬೆರೆತಿತ್ತು ಅವರ ಪ್ರಶ್ನೆಯಲ್ಲಿ.

''ಹನ್ನೊಂದನೆಯ ಬೆಡ್ಡು, ಸಾರ್ -''

''ಏನು ಹನ್ನೊಂದನೆಯ ಬೆಡ್ಡು ?''

''ಅದರ ಪೇಸಂಟು ಹೋತು ಸಾರ್.''

''ಏನೋ ಅದು ನೀನು ಹೇಳ್ತಾ ಇರೋದು ?''

''ಆ ಪೇಸಂಟು ಸತ್ತು ಹೋತು ಸಾರ್.''

''ಯಾರೋ ? ಆ ಗುಮಾಸ್ತೆ ನಾರಣಪ್ಪನೇನೋ ?''

''ಹ್ಞೂ, ಸಾರ್.''

''ಮಲೇರಿಯ ಆಗಿದ್ದೋನು ?''

''ಔದು ಸಾರ್ ಅಂದ್ರೆ.''

''ಎಂಟು ಗಂಟೇಲಿ ನಾನು ನೋಡಿದಾಗ ಚೆನ್ನಾಗಿದ್ದನಲ್ಲೋ ?''

''ಆಗ ಚೆನ್ನಾಗಿದ್ದ. ಈಗ ಗೊಟಕ್ ಅಂದ. ನೀವೇ ಬನ್ನಿ ಸಾರ್. ಪರೀಕ್ಷೆ ಮಾಡಿ... ಬಾ ಮಿಸ್ಸಿ ಅಮ್ಮ ನೀನೂ.''

''ಬೇಡ, ಬೇಡ. ಸತ್ತುಹೋದ ಅಂದಮೇಲೆ ಪರೀಕ್ಷೆ ಮಾಡೋದೇನು ? ತಗೊಂಡು ಹೋಗಿ 'ಶವದ ಮನೆ'ಗೆ ಹಾಕಿಬಿಡು.''

* * *

ಶವದ ಮನೆ - ಮನೆ ಎಂದರೆ ವಿಸ್ತಾರವಾದ ಒಂದು ಕೋಣೆ, ಅಷ್ಟೆ. ಕತ್ತಲು ತನ್ನ ನಿರಂತರ ಸಾಮ್ರಾಜ್ಯವನ್ನು ಅಲ್ಲಿ ಸ್ಥಾಪಿಸಿಬಿಟ್ಟಂತಿತ್ತು. ಎತ್ತರವಾದ ಮೇಲ್ಛಾವಣಿಗೆ ಅಂಟಿದಂತಿದ್ದ ಸಣ್ಣ ಕಿಟಕಿಯೊಂದರಿಂದ ಅಂಬೆಗಾಲಿಡುತ್ತ ಬರುತ್ತಿದ್ದ ಚಂದ್ರನ ನಸುಬೆಳಕು ದಟ್ಟೈಸಿದ್ದ ಕತ್ತಲೆಗೆ ಹೆದರಿ ಅಷ್ಟು ದೂರದಲ್ಲೇ ನಿಂತಂತಿತ್ತು.

ಗುಮಾಸ್ತೆ ನಾರಣಪ್ಪ 'ಅಮ್ಮಾ, ಅಮ್ಮಾ' ಎಂದು ನರಳಾಡುತ್ತ, ಮಗ್ಗುಲಾಗಿ, ಕಷ್ಟಪಟ್ಟು ಮೆಲ್ಲನೆ ಎದ್ದು ಕುಳಿತುಕೊಂಡ.

ನಾರಣಪ್ಪ ಸತ್ತಿರಲಿಲ್ಲ!

ಸತ್ತಿದ್ದಾನೆ ಎಂದು ವಾರ್ಡ್‌ಬಾಯ್ ಮುನಿಯ ಹೇಳಿದ. ನರ್ಸಿನೊಡನೆ ಸರಸವಾಡುವುದರಲ್ಲಿ ಮಗ್ನನಾಗಿದ್ದ ಡಾಕ್ಟರು ಶವದ ಮನೆಯಲ್ಲಿ ಹಾಕು ಎಂದು ಅಪ್ಪಣೆ ಮಾಡಿದ. ಅದರಂತೆ ಮುನಿಯ ಅವನನ್ನು ಶವದ ಮನೆಗೆ ಎಳೆದುತಂದು ಹೆಣಗಳ ಮಧ್ಯೆ ಹಾಕಿದ್ದ.

ನಾರಣಪ್ಪ ಎದ್ದು ಕುಳಿತವನೇ ಸುತ್ತಲೂ ನೋಡಿದ.

ಎತ್ತ ತಿರುಗಿದರೂ ಅವನ ಕಣ್ಣಿಗೆ ಕಾಣಿಸಿದ್ದು ಒಂದೇ - ಕಪ್ಪು ಕಪ್ಪು ಕತ್ತಲೆ !

ವಾರ್ಡಿನಲ್ಲಿ ಸುತ್ತಲೂ ಇದ್ದ 'ಬೆಡ್'ಗಳು ಏನಾದುವು ? ಒಂದಾದರೂ ಕಾಣುತ್ತಿಲ್ಲವಲ್ಲ!

ತನ್ನ 'ಬೆಡ್' ಏನಾಯಿತು ?

ಇಲ್ಲ... ಇಲ್ಲವೇ ಇಲ್ಲ!!!

ಆಹಾ, ಎಷ್ಟು ತಣ್ಣಗಾಗುತ್ತಿದೆ ? - ನೆಲದ ಮೇಲೆ ಮಲಗಿರುವಂತಿದೆಯಲ್ಲಾ? ಜ್ವರ ಬಂದವನನ್ನು ನೆಲದ ಮೇಲೆ ಹೀಗೆ ಮಲಗಿಸುವುದೇ ?

ಏನು ಕೇಡು ಬಂದಿದೆಯೋ ಈ ಜನಕ್ಕೆ ? -

ಗುಮಾಸ್ತೆ ನಾರಣಪ್ಪ ಮೈಮುರಿದು ದೀರ್ಘವಾಗಿ ಆಕಳಿಸಿದ.

ಆದರೆ ಆಕಳಿಕೆ ಅರ್ಧದಲ್ಲಿಯೇ ನಿಂತಿತು.

ಏನದು ?

ಶೋಕದ ಗೀತೆ... ಕತ್ತಲ ಕುಹರದಿಂದ ಅವ್ಯಾಹತ ವಾಗಿ ಏಳುತ್ತಿತ್ತು. ಚಕಿತನಾದ ನಾರಣಪ್ಪ ಕುತೂಹಲದಿಂದ ಆಲಿಸಿದ.

ಆಲಿಸುತ್ತ ಆಲಿಸುತ್ತ ಅವನ ಬಲಗಡೆ ಅಷ್ಟು ದೂರದಲ್ಲಿ ಏನೋ ಮಿಂಚಿದಂತಾಯಿತು.

ಏನಾಶ್ಚರ್ಯ !... ಹೆಣದ ಆಕೃತಿ !! ಛೆ, ಛೆ ಹೆಣ ಅಲ್ಲ. ಹೆ-ಣ್ಣು!!!

ಆ ಹೆಣ್ಣು ಪ್ರಲಾಪಿಸುತ್ತಿತ್ತು... ಪ್ರಲಾಪ ದಿವ್ಯಗೀತೆ ಯಾಗಿ ಶವದ ಮನೆಯನ್ನು ತುಂಬುತ್ತಿತ್ತು.

ನಾರಣಪ್ಪ ದಿಗಿಲಿನಿಂದ ನಡುಗಿದ.

ಆ ಆಕೃತಿ ಹೆಣ್ಣಲ್ಲದಿದ್ದರೆ - ಆ ಹೆಣ್ಣು ಸುಂದರಿ ಯಾಗಿರದೆ ಇನ್ನೂ ಭಯ ಹುಟ್ಟಿಸುವಂತಿದ್ದರೆ - ನಾರಣಪ್ಪ ಕೂಡಲೆ ಮೃತನಾಗುತ್ತಿದ್ದನೋ, ಏನೋ !

ಆ ಘೋರಾಂಧಕಾರದಲ್ಲಿ ಹೆಣ್ಣಿನ ಆಕಾರ ಮಾತ್ರ ಬೆಳಕಾಗಿತ್ತು. ಕಾಳರಾತ್ರಿಯಲ್ಲಿ ಬಳುಕುವ ಬಳ್ಳಿ ಮಿಂಚಿನಂತೆ! ಹೆಣ್ಣು ನಾರಣಪ್ಪನ ಇರುವಿಕೆಯನ್ನು, ಸಾಮೀಪ್ಯವನ್ನು ಗಮನಿಸಿದಂತೆ ತೋರಲಿಲ್ಲ ಮಂಡಿಯನ್ನು ಮಡಿಸಿ ಕುಳಿತು, ನೀಳವಾದ ಕೂದಲ ರಾಶಿಯನ್ನು ಸುತ್ತಲೂ ಹರಡಿ, ಎದುರಿಗೆ ಯಾವುದೋ ಕಾಣದ ವಸ್ತುವನ್ನು ಶೂನ್ಯದೃಷ್ಟಿಯಲ್ಲಿ ನಿಟ್ಟಿಸುತ್ತಾ ಮೂಕವೇದನೆಯನ್ನು ಹೊರಸೂಸುತ್ತಿತ್ತು.




...''ಕೈ ಕೆಸರಾದರೆ ಬಾಯಿ ಮೊಸರು''... ಹಳೆ ಗಾದೆ ಕಂಡ್ರೀ.... ಈಗ ಏನಿದ್ರು, ''ಕೆರೆ ಕೆಸರಾದರೆ ಬಾಯಿ ಮೊಸರು''...!

ನಾರಣಪ್ಪ ಕಣ್ಣುಗಳನ್ನು ಉಜ್ಜಿ, ಉಜ್ಜಿ ನೋಡಿದ - ತನ್ನ ಕಣ್ಣಿಗೆ ಇಷ್ಟು ಸ್ಪಷ್ಟವಾಗಿ ಕಾಣುತ್ತಿರುವ ಪವಾಡ ಕನಸಲ್ಲವೆ ? ಅಲ್ಲವೆ ?...

ಹಿ-ಹ್ಹಿ-ಹ್ಹಿ!!!

ಕತ್ತಲ ಎದೆಯನ್ನು ಸೀಳುತ್ತ ಎದ್ದಿತು ಗಂಡು ನಗುವಿನ ಅಟ್ಟಹಾಸದ ಕೇಕೆ !

ನಾರಣಪ್ಪ ಭೀತಿಯಿಂದ ಥರಥರನೆ ನಡುಗುತ್ತ ಸದ್ದು ಎದ್ದ ಕಡೆ ತಿರುಗಿದ.

ಹಿ-ಹ್ಹಿ-ಹ್ಹಿ!!!

ಕೇಕೆ - ಅದರ ಬೆನ್ನಿಗೇ ಮಿಂಚಿನ ಪ್ರಕಾಶ !

ಮಧ್ಯವಯಸ್ಸಿನ ಗಂಡಸೊಬ್ಬ ನಗುನಗುತ್ತ ಎದ್ದು ಕುಳಿತ.

ಹಿ-ಹ್ಹಿ-ಹ್ಹಿ!!!

ದಿಗಿಲಿನಿಂದಲೇ ಆ ವ್ಯಕ್ತಿಯನ್ನು ವೀಕ್ಷಿಸಿದ ನಾರಣಪ್ಪ.

ವಿಶಾಲವಾಗಿ ಸಣ್ಣ ದಿಣ್ಣೆಯಂತೆ ಕೊಂಚ ಉಬ್ಬಿದ ಹಣೆ. ಸಣ್ಣದಾದರೂ ಮೊನೆಯಾದ ಚುಚ್ಚು ನೋಟದ ಕಣ್ಣು. ಹೊದೆಯಾಗಿ ಬೆಳೆದು ತುಟಿಯ ಅಂಚುಗಳಲ್ಲಿ ಬರಲಾಗಿ ಬಾಗಿದ ಮೀಸೆಯ ಶೀವಿ. ನಗುವಿನ ಉಲ್ಲಾಸದಿಂದ ಪ್ರದರ್ಶಿತವಾದ ಬೆಳ್ಳಕ್ಕಿಗಳಂತೆ ಸಾಲಿಟ್ಟ ಬಿಳಿಯ ಹಲ್ಲುಗಳು.

ಆ ವ್ಯಕ್ತಿಯನ್ನು ನೋಡುತ್ತ ನೋಡುತ್ತ ನಾರಣಪ್ಪನಿಗೆ ಅನಿಸಿತು :

''ಈ ವ್ಯಕ್ತಿ ಹುಟ್ಟಿದಾಗ ನಗುವನ್ನೂ ತನ್ನ ಜೊತೆಗೇ ಕಟ್ಟಿಕೊಂಡು ಹುಟ್ಟಿರಬೇಕು.''

ವ್ಯಕ್ತಿ ನಗುನಗುತ್ತಲೇ ನಾರಣಪ್ಪನೆಡೆಗೆ ತನ್ನ ದೃಷ್ಟಿ ಬೀರಿದ. ನಾರಣಪ್ಪನನ್ನೇ ನೋಡನೋಡುತ್ತ ವ್ಯಕ್ತಿಯ ಕಣ್ಣಿನಲ್ಲಿ ಅಚ್ಚರಿ ತುಂಬಿತು...

''ಓ ! ಇದೂ ಉಂಟ ?... ಬದುಕಿರೋರನ್ನೇ ಇಲ್ಲಿಗೆ ತಂದು ಹಾಕ್ತಾರಾ ?''

ಈ ಮಾತುಗಳನ್ನಾಲಿಸಿ ಕಕ್ಕಾಬಿಕ್ಕಿಯಾದ ನಾರಣಪ್ಪ ಕೇಳಿದ :

''ಏನಪ್ಪಾ ನೀನು ಹೇಳ್ತಾ ಇರೋದು ?''

''ಅರ್ಥ ಆಗಲ್ವಾ ? ನೋಡು ನೀನು ಇನ್ನೂ ಬದುಕಿದ್ದೀಯಾ. ಆದರೂ ಇಲ್ಲಿ ತಂದು ಹಾಕಿದ್ದಾರೆ.''

''ಇಲ್ಲಿ ಅಂದರೆ ? - ಇದು ಆಸ್ಪತ್ರೆ ಜನರಲ್ ವಾರ್ಡ್ ಅಲ್ಲವೆ ?''

''ಹೊ-ಹ್ಹೊ-ಹ್ಹೊ... ಜನರಲ್ ವಾರ್ಡ್ ? ಅದು, ಇಲ್ಲಿಗೆ ಅರ್ಧ ಫರ್ಲಾಂಗ್ ಆಗ್ತದೆ.''

''ಅಂದರೆ ಇದು ಯಾವ ಸ್ಥಳ ?''

''ಇದು ಆಸ್ಪತ್ರೇಲಿ ಸತ್ತುಹೋಗಿ, ವಾರಸುದಾರರು ಇಲ್ಲದೆ ಇರತಕ್ಕ ಹೆಣಗಳನ್ನು ಹಾಕುವ ಜಾಗ - ಶವದ ಮನೆ.''

ನಾರಣಪ್ಪನ ಹೃದಯದ ಬಡಿತ ಹಠಾತ್ತನೆ ನಿಂತಂತಾಯಿತು. ಮೈ ಕೂದಲು ಭಯದಿಂದ ನಿಮಿರಿ ನಿಂತವು. ತಲೆಯಲ್ಲಿ ಯಾರೋ ಹಾರ್ಮೋನಿಯಂ

ಬಾರಿಸಿದಂತಾಯಿತು. ಕಣ್ಣಿಗೆ ಭೀತಿಯ ತೆರೆ ಮುಸುಗಿತು.

ತಾನು... ಶವದ ಮನೆಯಲ್ಲಿ?

ಇರಲಾರದು. ಜ್ವರದ ತಾಪಕ್ಕೆ ಎಲ್ಲೋ ಕನಸು ಬೀಳುತ್ತಿರಬೇಕು! ಎಲ್ಲಾ ಸರಿ, ಎಷ್ಟು ಹೊತ್ತಿನ ತನಕ ಹೀಗೆ ಸುಮ್ಮನೆ ದೆವ್ವದ ಹಾಗೆ ಕುಳಿತುಕೊಂಡಿರುವುದು? ಆ ವ್ಯಕ್ತಿ ಒಳ್ಳೆಯವನ ಹಾಗೇ ಕಾಣುತ್ತಾನೆ. ಮಾತನಾಡಿಸಿ ನೋಡೋಣ. ಇಂಥ ಜಾಗದಲ್ಲಿ ಮೌನವಾಗಿರುವುದಕ್ಕಿಂತ ಏನಾದರೂ ಮಾತನಾಡುವುದೇ ಒಳ್ಳೆಯದು...

''ಯಾರಪ್ಪಾ ನೀನು?''

''ನಾನು ವೆಂಕಟರಮಣ. ಹಜಾಮರ ವೆಂಕಟರಮಣ.''

''ನೀನು ಹಜಾಮತಿ ಮಾಡ್ತೀಯಾ?''

''ಮಾಡ್ತಿದ್ದೆ... ಓ! ಎಷ್ಟು ಚೆಂದಾಗಿ ಮಾಡ್ತಿದ್ದೆ ಅಂತ? ದೊಡ್ಡ ದೊಡ್ಡ ಮನುಷ್ಯರು ತಮ್ಮ ತಲೆಗಳನ್ನು ನನ್ನ ಕೈಗೆ ಒಪ್ಪಿಸಿಬಿಟ್ಟು ಹಾಯಾಗಿ ಪೇಪರ್ ಓದ್ತಾನ್ನೋ, ಸಿಗರೇಟು ಸೇದ್ತಾನ್ನೋ ಕುಕ್ಕರಿಸೋರು. ಅವರ ತಲೆಮೇಲೆ ನನ್ನ ಕತ್ತಿ ಆಡೋದು ಅವರಿಗೆ ಗೊತ್ತೇ ಆಗ್ತಾ ಇರಲಿಲ್ಲ. ನಾನು ಎಲ್ಲಾ ಮುಗಿಸಿ ''ಆಯ್ತು ಏಳಿ ಸ್ವಾಮಿ'' ಅಂದಾಗ ಅವರು ಕನ್ನಡಿ ನೋಡಿ ತಲೆದೂಗಿ, 'ಭಲೆ! ಹಜಾಮ ಅಂದರೆ ವೆಂಕಟರಮಣನ ಹೆಸರು ಹೇಳಬೇಕು' ಅಂತಿದ್ದರು.''

''ಹಾಗಿದ್ದರೆ ಈ ಶವದ ಮನೆಗೆ ಹೇಗೆ ಬಂದೆ ನೀನು?''

''ಎಲ್ಲ ಈ ಆಸ್ಪತ್ರೆಯ ಪ್ರಭಾವ!''

''ಹಾಗಂದರೆ?''

''ಕೇಳು - ಒಂದು ದಿನ ಶ್ರೀಮಂತರೊಬ್ಬರ ಮನೆಯ ವರಾಂಡದಲ್ಲಿ ಚೌರ ಮಾಡ್ತಾ ಇದ್ದೆ. ಆಗ ಅವರ ಮಕ್ಕಳು ಮನೆ ಮುಂದೆ ಚೆಂಡಾಟ ಆಡ್ತಾ ಇದ್ದರು. ನಾನು ಚೌರ ಮಾಡ್ತಾ ಇದ್ದರೆ, ಆ ಶ್ರೀಮಂತನ ಕಣ್ಣೆಲ್ಲಾ ಅವರ ಮಕ್ಕಳ ಮೇಲೆ! ಆ ಚೆಂಡು ಹೋದ ಕಡೆ ತಲೆ ತಿರುಗಿಸಿ ಬಿಡೋನು. ನನಗೂ ಅವನ ತಲೇನ ಹಿಡಿದು ಹತೋಟೀಲಿ ಇಟ್ಟುಕೋಬೇಕಾದರೆ ಸಾಕುಸಾಕಾಗಿ ಹೋಯ್ತು. ಎಷ್ಟು ಹೊತ್ತಿಗೆ ಈ ಮಹಾರಾಯನ ಚೌರ ಮುಗಿಸ್ತೀನೋ ಅಂತ ಆಗಿತ್ತು ನನಗೆ!... ಆದರೆ ಅಷ್ಟು ಹೊತ್ತಿಗೆ ಆ ಹುಡುಗರು ಆಡ್ತಾ ಇದ್ದ ಚೆಂಡು ಬಂದು ನಾನು ಕತ್ತಿ ಹಿಡಿದಿದ್ದ ಕೈಗೆ ಪಟ್ಟನೆ ಬಡೀತು...''

''ಆಮೇಲೆ?''

''ಆಮೇಲೆ ನಾನು ಹಿಡಿದಿದ್ದ ಕತ್ತಿ ಹೋಗಿ ಆ ಶ್ರೀಮಂತನ ಮೂಗನ್ನ ಕೆತ್ತಿಹಾಕಿತು... ಹಿ... ಹ್ಹಿ... ಹ್ಹಿ!!!

''ಚೆನ್ನಾಯ್ತು.''

''ಅಷ್ಟೇ ಆಗಿದ್ದರೆ ಚೆನ್ನಾಗಿತ್ತು. ಆದರೆ ಹಾಳು ಕತ್ತಿ ಬಂದು ನನ್ನ ಎಡದಾ ಕೈಗೂ ತಗುಲಿತು.''

''ಛೆ, ಛೆ!''

''ಛೆ ಇಲ್ಲ, ಛಿ ಇಲ್ಲ, ಕೇಳು. ಆಮೇಲೆ ಅವನನ್ನೂ ನನ್ನನ್ನೂ ಇದೇ ಆಸ್ಪತ್ರೆಗೆ ತಂದು ಹಾಕಿದರು.''

''ಏಕೆ, ನಿನಗೆ ಅಷ್ಟು ದೊಡ್ಡ ಗಾಯವಾಯಿತೆ?''

''ಗಾಯ ದೊಡ್ಡದಾಗಿಲ್ಲದೇ ಇದ್ದರೂ ರೋಗ ದೊಡ್ಡದಾಗಿತ್ತು.''

''ಅಂದರೆ?''

''ಅಂದರೆ, ಆ ಮಹಾರಾಯ ಎಲ್ಲೋ ರೋಗ ಹತ್ತಿಸಿಕೊಂಡಿದ್ದ. ಶ್ರೀಮಂತರಿಗೆ ಇನ್ನೇನು ಕೆಲಸ? ಸರಿ ಆ ರೋಗ, ಕತ್ತೀ ಜೊತೇಲಿ ನನ್ನ ಬೆರಳಿನ ರಕ್ತಕ್ಕೆ ಬೆರೆತುಹೋಯಿತು.''

''ಅಯ್ಯೋ ಅನಿಷ್ಟ! ಅದಕ್ಕೆ ಆಸ್ಪತ್ರೇಲಿ ಔಷಧ ಕೊಟ್ರು ತಾನೆ?''

''ಆಸ್ಪತ್ರೇಲಿ ಔಷಧ?... ಬಡವರಿಗೆಲ್ಲಯ್ಯಾ ಔಷಧ ಕೊಡ್ತಾರೆ ಈ ಆಸ್ಪತ್ರೆಗಳಲ್ಲಿ?

## ವಿಶ್ವಜ್ಯೋತಿ



೧

ಸ್ಪೃಶ್ಯ-ಅಸ್ಪೃಶ್ಯ, ಮಡಿ-ಮೈಲಿಗೆ
ಗುಡಿ-ಗುಂಡಾರ ಪೂಜಾರಿ-ಪುರೋಹಿತ ಗದ್ದಲದಿ
ಜಗ ಮಿಥ್ಯ, ಹೆಣ್ಣು ಮಾಯೆ, ದೇಹ ದಂಡಿಸುತ
ಅಮಾನುಷ್ಯದ 'ಅಹಂ' ಕುಭಾಷೆಯ ಕ-ತ್ತಲಲಿ
ಇವನಾರವ, ಇವನಾರವ, ಇವನಾರವ? ಕುದಿತದಲಿ
ಭಯ, ಭ್ರಾಂತಿಯಲಿ ಜನ ದಿಕ್ಕೆಟ್ಟು ನಿಂತಾಗ, ನೀ ಬಂದೆ
ಅಪ್ಪ ಮಾದಾರ ಚೆನ್ನಯ್ಯ, ಬೊಪ್ಪ ಡೋಹರ ಕಕ್ಕಯನೆಂದೆ
ಕಾಯಕ, ದಾಸೋಹದಿ ಪ್ರಸಾದ ಕಾಯ ಕೆಡಿಸದಂತಿರಿಸಿದೆ.

೨

ನೀರ ಕಂಡಲ್ಲಿ ಮುಳಗುತ, ಮರನ ಕಂಡಲ್ಲಿ ಸುತ್ತುತ
ಯಜ್ಞ-ಯಾಗಾದಿ ನೆಪದಲಿ ಪ್ರಾಣಿ ಬಲಿ ಕೊಡುತ
ಕಣ್ಣು-ಮೂಗು-ಕಿವಿ ಮುಚ್ಚಿ ಮುಕ್ತಿಯ ಬಯಸುತ
ಹೊತ್ತಾರೆ ಎದ್ದು ಒಡಲಿಗೆ, ಒಡವೆಗೆ ಹರಿ ಹಾಯುತ
ಹೊನ್ನಿನೊಳಗೊಂದರೆಯ, ಸೀರೆಯೊಳಗೊಂದೆಳೆಯ ಬೇಕೆಂದೆನುತ
ತಾಮಸ, ಆಸೆಯೊಳಗೆ ಜನ ಹುಚ್ಚೆದ್ದು ಕುಣಿವಾಗ, ನೀ ಬಂದೆ
ತನು-ಮನ-ಧನ ದಾಸೋಹಕೆ ಸವೆದು ಸುಖಿಸಿದೆ
ಎತ್ತೆತ್ತ ನೋಡಿದತ್ತತ್ತ ನೀನೇ ದೇವಾ ಎನುತ ಬದುಕಿದೆ.


ಸ. ರಾ. ಸುಳಕೂಡೆ
ನಂ. ೧೩೧೯, 'ಶಿವಪ್ರಸಾದ'
ಶ್ರೀ ಬಸವೇಶ್ವರ ಬಡಾವಣೆ
ರಾಮತೀರ್ಥನಗರ
ಬೆಳಗಾವಿ - ೫೯೦ ೦೧೬


೩

ಓ ಹೃದಯವಂತ, ವಿಶ್ವ ಧರ್ಮದಿ ಲಿಂಗತತ್ವವ ಬೆಳಗಿಸಿದಿ
ದಯವೇ ಧರ್ಮದ ಮೂಲೆಂದು ನಡೆದು ತೋರಿಸಿದಿ
ತಮ್ಮ ತಮ್ಮ ತನು-ಮನವ ಸಂತೈಸಿಕೊಳ್ಳುವ ಸತ್ಯ ಅರುಹಿದಿ
ಜ್ಯೋತಿ ವಿಡಿದು ಕತ್ತಲೆಯನರಿಸುವ ಮರುಳುತನ ಅಳಿಸಿದಿ
ಅಷ್ಟ ತ್ರಿಂಶತ್ ಕಳತೀತ ವ್ಯೋಮಾತೀತ ಕೂಡಲಸಂಗನೊಲಿಸಿದಿ
ಕನ್ನಡದಿ ವಚನ ರಚಿಸಿ ಅನುಭಾವ ಸಾಹಿತ್ಯ ಪಸರಿಸಿದಿ
ಸಕಲ ಜೀವಾತ್ಮರಿಗೆ ಲೇಸ ತಂದ ಪ್ರತೀತ - ಅನನ್ಯವಾಗಿಸಿ
ಸಮಸ್ತ ಕತ್ತಲೆಯ ಮಸಕ ಕಳೆದ ವಿಶ್ವಜ್ಯೋತಿ ನೀನಾದಿ

''ಇವು ಇರೋದೆಲ್ಲ ಶ್ರೀಮಂತರಿಗೆ. ನೋಡು, ಮೂಗು ಕತ್ತರಿಸಿಹೋದರೂ ಆ ಶ್ರೀಮಂತ ಬದುಕಿಕೊಂಡು ಸುಖವಾಗಿ ಮನೆಗೆ ಹೋದ. ಬರೀ ಬೆರಳು ಕತ್ತರಿಸಿದ ನಾನು ವೃಥಾ ಜೀವಬಿಟ್ಟು ಈ ಶವದ ಮನೆ ಸೇರಬೇಕಾಯಿತು.''

''ಎಂಥಾ ಅನ್ಯಾಯ.''

''ಅ-ನ್ಯಾ-ಯ !... ಹಿ-ಹ್ಹಿ-ಹ್ಹಿ !!! - ಈ ಸಮಾಜದಲ್ಲಿ ಎಲ್ಲಾ ನ್ಯಾಯವೇ !... ಈಗ ಈ ಹುಡುಗಿ ಇದಾಳೆ ನೋಡು -''

''ಹ್ಞೂ,'' ಎಂದು ಅವಳ ಕಡೆ ತಿರುಗಿದ ನಾರಣಪ್ಪ.

ಶೋಕದ ಗೀತೆ ಒಂದೇ ಸಮನೆ ಸಾಗಿತ್ತು.

''ಇವಳ ಹೆಸರು ಮಹಾದೇವಿ.''

''ದಿವ್ಯವಾದ ಹೆಸರು !''

''ಕೇಳು. ಇವಳ ಗಂಡ ಮಲ್ಲಿಕಾರ್ಜುನಯ್ಯನ ಜೊತೆ ಇವಳೂ ಮಿಲ್ಲಿನಲ್ಲಿ ಕೆಲಸಕ್ಕೆ ಸೇರಿದ್ದಳು.''

''ಸರಿ.''

''ಜೀವನ ಹೇಗೋ ನಡೀತಾ ಇತ್ತು. ಹೇಗೋ ಏನು, ಚೆನ್ನಾಗೇ ನಡೀತಾ ಇತ್ತು ಅಂತ ಇಟ್ಕೋ. ಹೊಟ್ಟೆಗೆ ಸರಿಯಾಗಿ ಇಲ್ಲದೆ ಇದ್ದರೂ ಇವರ ಚಿಕ್ಕ ಸಂಸಾರ ಚೊಕ್ಕವಾಗೇ ನಡೆದಿತ್ತು...''

''ಹ್ಞೂ.''

''ಮಲ್ಲಿಕಾರ್ಜುನಯ್ಯ ಮಹಾದೇವಿಯನ್ನು ತುಂಬ ಇಷ್ಟಪಡುತ್ತಿದ್ದ. ಮಹಾದೇವಿಯೂ ಅವನನ್ನ ಬಹುವಾಗಿ ಪ್ರೀತಿಸುತ್ತಿದ್ದಳು. ಇವರಿಬ್ಬರನ್ನೂ ಸುತ್ತಿಕೊಂಡಿದ್ದ ಪ್ರೇಮ, ದೇವತೆಗಳೂ ಕರುಬುವಂಥಾ ಪ್ರೇಮ !... ನೋಡು, ದೇವತೆಗಳೂ ಕರುಬಿದರೋ ಏನೋ, ಒಂದು ಅಚಾತುರ್ಯ ನಡೆದುಹೋಯ್ತು.''

''ಏನಾಯಿತು ?''

''ಒಂದು ಮಧ್ಯಾಹ್ನ ಕೂಲಿ ತೆಗೆದುಕೊಳ್ಳಲು ಮಿಲ್ಲಿನ ಮ್ಯಾನೇಜರ್ ಆಫೀಸಿಗೆ ಇವಳು ಹೋದಾಗ ಆತ ಬಲಾತ್ಕಾರವಾಗಿ ಇವಳ ಮಾನಭಂಗ ಮಾಡಿದ...''

ವೆಂಕಟರಮಣಯ್ಯ ಇದನ್ನು ಹೇಳುವಾಗ ಮಹಾದೇವಿಯ ಆಕೃತಿ ನಡುಗುತ್ತಿತ್ತು. ಶೋಕಗೀತೆ ಉನ್ಮತ್ತವಾಗಿ, ಕರುಣಾಜನಕವಾಗಿ, ಕರುಳು ಕೊರೆಯುವಂತೆ, ಶವದ ಮನೆಯ ಅಡ್ಡಿ ಅಡಚಣೆಗಳನ್ನು ದಾಟಿ ಹೊರಹೊಮ್ಮಲು ತವಕಿಸುತ್ತಿತ್ತು.

''ಇದಾದ ಮೇಲೆ ಮಹಾದೇವಿಗೆ ಜೀವನ ಬೇಸರವಾಯಿತು. ಗಂಡನಿಗೆ ಮುಖ ತೋರಿಸಲು ನಾಚಿಕೆಯಾಯಿತು. ಮಲ್ಲಿಕಾರ್ಜುನಯ್ಯ ಮನೇಲಿಲ್ಲದೆ ಇದ್ದಾಗ ಸೀಮೆಎಣ್ಣೇನ ಮೈಮೇಲೆ ಸುರಿದುಕೊಂಡು ಬೆಂಕಿ ಹತ್ತಿಸಿಕೊಂಡುಬಿಟ್ಟಳು. ಸೀರೆ ಹತ್ತಿಕೊಂಡು ಉರೀತಾ ಇತ್ತು. ಅಷ್ಟರಲ್ಲಿ ಮಲ್ಲಿಕಾರ್ಜುನಯ್ಯ ಎಲ್ಲೋ ಹೋಗಿದ್ದೋನು ಮನೆಗೆ ಬಂದು ಇವಳ ಸ್ಥಿತಿ ನೋಡಿದಾಗ ಅವನ ಎದೆ ಜಗ್ ಎಂದಿತು. ಬೇಗ ಬೇಗ ಕಂಬಳಿ ತಂದು ಇವಳ ಮೈಮೇಲೆ ಸುತ್ತಿ ಬೆಂಕಿ ಆರಿಸಿದ. ಆಮೇಲೆ ಇವಳನ್ನು ಕರೆದುಕೊಂಡು ಈ ಆಸ್ಪತ್ರೆಗೆ ಬಂದ. ಇಲ್ಲಿ ''ಬೆಡ್ ಖಾಲಿ ಇಲ್ಲ; ಅದಿಲ್ಲ, ಇದಿಲ್ಲ'' ಅಂತ ಬಾಳ ಗೋಣಗಿದ ಮೇಲೆ ಏನೋ ಹೋಗಲಿ ಅಂತ ಸೇರಿಸಿಕೊಂಡರು. ನೋಡಿದ್ದೆಯಲ್ಲಾ ವಾರ್ಡ್, ಅದರ ಪಕ್ಕದ ಹೆಂಗಸರ ವಾರ್ಡಿನಲ್ಲಿ ಜಾಗ ಇಲ್ಲ ಅಂತ ಹೇಳಿ ವರಾಂಡದಲ್ಲಿ ಅವಳನ್ನು ಮಲಗಿಸಿದರು. ಅವಳ ಸುಟ್ಟ ಗಾಯಗಳಿಗೆ ಸರಿಯಾಗಿ 'ಟರ್ಪೆಂಟೈನ್' ಹಚ್ಚೋರೂ ಗತಿ ಇರಲಿಲ್ಲ ಈ ಆಸ್ಪತ್ರೆಯವರಿಗೆ !... ಬಡವರೂ ಅಂದರೆ ಇದ್ದದ್ದೂ ಇಲ್ಲವಾಗಿಬಿಡುತ್ತದೆ ನಾರಣಪ್ಪ !...''

''ಅದು ನಿಜ. ಆಮೇಲೆ ?''

''ಆಮೇಲೇನು, ಯಾರೂ ಸರಿಯಾಗಿ ನೋಡಿಕೊಳ್ಳದೆ ಇವಳು ಗೊಟಕ್ ಅಂದಳು. ಸರಿ ಪೀಡೆ ಮುಖ ನೋಡೋದೆ ತಪ್ಪಿತು ಅಂತ ಇವಳ ಹೆಣಾನ ಎಳೆದು ತಂದು ಈ ಶವದ ಮನೆಗೆ ಹಾಕಿದರು.''

''ಏಕೆ, ಮಲ್ಲಿಕಾರ್ಜುನಯ್ಯ ಇವಳ ಶವ ಸಂಸ್ಕಾರ ಮಾಡಲಿಲ್ಲವೆ ?''

''ಎಲ್ಲಿ ಮಾಡೋದು ? ಇವಳು ಸತ್ತಳು ಅಂದ ಕೂಡಲೆ ಅವನಿಗೆ ಹುಚ್ಚು ಹಿಡೀತು...''

ವೆಂಕಟರಮಣಯ್ಯನ ಮಾತು ಇನ್ನೂ ಮುಗಿದಿಲ್ಲ. ಮಹಾದೇವಿಯ ಸಂಕಟದ ಆರ್ತನಾದ ಇದ್ದಕ್ಕಿದ್ದಂತೆ ಮತ್ತಷ್ಟು ಉಲ್ಬಣವಾಗಿ ಭೀಕರವಾಯಿತು. ಸಣ್ಣಗೆ ಉರಿಯುವ ಬೆಂಕಿಯ ಜ್ವಾಲೆ ರೊಯ್ಯನೆ ಬೀಸುವ ಗಾಳಿಯ ಆಘಾತಕ್ಕೆ ಧಗ್ಗನೆ ಕೆದರಿ ಏಳುವಂತೆ, ಮಹಾದೇವಿಯ ಹೃದಯಯಾತನೆ ನೆನಪಿನ ಸುಂಟರಗಾಳಿಯಲ್ಲಿ ಹುಚ್ಚು ಹುಚ್ಚಾದಂತಿತ್ತು.

ನಾರಣಪ್ಪ ಮೂಗಿನ ಮೇಲೆ ಬೆರಳಿಟ್ಟು ಯೋಚಿಸಿದ. ತಾನು ಗುಮಾಸ್ತೆ ಕೆಲಸ ಮಾಡುತ್ತಿದ್ದ ಸಾಹುಕಾರನ ಹೆಂಡತಿಯ ನೆನಪಾಯಿತು. ಸಾಹುಕಾರ ಇಲ್ಲದ ಹೊತ್ತಿನಲ್ಲಿ ಆಕೆ ಇನ್ನೊಬ್ಬನನ್ನು ಕರೆಸಿಕೊಳ್ಳುತ್ತಿದ್ದಳು. ಹೋಗಲಿ ಆ ಇನ್ನೊಬ್ಬನನ್ನಾದರೂ ಪ್ರೀತಿಸುತ್ತಿದ್ದಳೆ ? ಇಲ್ಲ. ಹೊಸದಾಗಿ ಸ್ನೇಹವಾದ ಮತ್ತೊಬ್ಬನ ಮೇಲೆ ಕಣ್ಣು ಹಾಕಿದಳು...

ಆದರೆ ಮಹಾದೇವಿ ?

ತನ್ನ ಪ್ರೇಮದ ಪಾತಿವ್ರತ್ಯಕ್ಕಾಗಿ ತನ್ನ ತನುವನ್ನೇ ನೀಗಿಕೊಂಡಿದ್ದಳು.

ಎಂಥ ಭವ್ಯ ಬಾಳು ಇದು ?

ಮಹಾದೇವಿಯಂಥ ಪತಿವ್ರತೆಯ ಸಾಮೀಪ್ಯ ನಾರಣಪ್ಪನಿಗೆ ವಿಚಿತ್ರವಾಗಿ ತೋರಿತು. ಸತ್ತು ಬದುಕಿದಳು ಮಹಾದೇವಿ ಎಂದುಕೊಂಡ.

ಹೊರಗೆ ಬದುಕಿದವರ ಜೀವನ ಎಷ್ಟು ಹೇಯವಾಗಿದೆ ಎಂದು ನೆನಸಿಕೊಂಡಾಗ ನಾರಣಪ್ಪನಿಗೆ ಮಹಾದೇವಿಯ ಪವಿತ್ರಾತ್ಮದ ಸನ್ನಿಧಿಯಲ್ಲಿಯೆ ಬಾಳುವುದು ಲೇಸು ಎನ್ನಿಸಿತು.

ಮತ್ತೆ ಏನೋ ಮಿಂಚಿದಂತಾಯಿತು.

''ಮಸಾಲೆ ಒಂದು, ಸಾದಾ ಎರಡು'' - ಎಂದು ಕೂಗುತ್ತಾ ಒಬ್ಬ ಹುಡುಗನ ಹೆಣ ಎದ್ದು ಕುಳಿತುಕೊಂಡಿತು.

ನಾರಣಪ್ಪ ಕಕ್ಕಾಬಿಕ್ಕಿಯಾಗಿ ಕಣ್ಣುಬಿಟ್ಟ.

ನಾರಣಪ್ಪನ ಸ್ಥಿತಿಯನ್ನು ನೋಡಿ ವೆಂಕಟರಮಣಯ್ಯನಿಗೆ ನಗು ಹಾಲು ಉಕ್ಕಿದಂತೆ ಉಕ್ಕಿತು.

ಹಿ-ಹ್ಹಿ-ಹ್ಹಿ !!!

ವೆಂಕಟರಮಣಯ್ಯನ ನಗು ಸಾಂಕ್ರಾಮಿಕ ! ಅವನ ನಗು ಅಲೆ ಅಲೆಯಾಗಿ ಬಂದು ನಾರಣಪ್ಪನ ಭೀತಿಯನ್ನು ಹೊಡೆದೋಡಿಸಿತು.

ನಾರಣಪ್ಪ ಸ್ವಲ್ಪ ಸಮಾಧಾನಗೊಂಡು ಉಸಿರಾಡಿದ.

''ಗುಲಾಬ್ ಜಾಮೂನ್, ಜಿಲೇಬಿ, ಸೋಹನ್ ಪಪ್ಪಡಿ, ಜಹಾಂಗೀರ್, ದೂದ್‌ಪೇಡ...'' ಹುಡುಗನ ಹೆಣ ಕೂಗುತ್ತಲೇ ಇತ್ತು.

ವೆಂಕಟರಮಣಯ್ಯ ನಗುನಗುತ್ತಲೇ ಆ ಹುಡುಗನನ್ನು ಉದ್ದೇಶಿಸಿ ಗದರಿದ.

''ಸಾಕು ನಿಲ್ಲಿಸೋ ಮಾರಾಯ. ಜಾಮೂನಂತೆ ! ಜಿಲೇಬಿಯಂತೆ ! ಹಾಗಂತ ಅರಚೀ ಅರಚೀ ನಿತ್ಯ ನಮ್ಮ ಬಾಯಿಗಳಲ್ಲಿ ನೀರೂರಿಸಿಬಿಡ್ತೀಯಾ, ಪುಣ್ಯಾತ್ಮ !''

ನಾರಣಪ್ಪನ ಕುತೂಹಲ ಕೆರಳಿತು. ವೆಂಕಟರಮಣಯ್ಯನನ್ನು ಕೇಳಿದ :

''ಯಾರು ಈತ ?''

''ಈತ ಮಾರ್ಕೆಟ್ ಮುಂದುಗಡೆ ಒಂದು ದೊಡ್ಡ ಹೋಟೆಲ್ ಇದೆಯಲ್ಲ.''

''ಹ್ಞು.''

''ಅದರಲ್ಲಿ ಒಬ್ಬ ಮಾಣಿ.''

''ಈ ಶವದ ಮನೆಗೆ ಹೇಗೆ ಬಂದ ?''

''ಆ ಹೋಟೆಲ್‌ನಲ್ಲಿ ಇವನು ಸರ್ವರ್ ಆಗಿದ್ದ. ಹುಡುಗ ಬಲು ಚೂಟಿ. ಹತ್ತು ಜನರ ಕೆಲಸ ಇವನೊಬ್ಬನೇ ನಿಭಾಯಿಸಿಕೊಂಡು ಹೋಗ್ತಿದ್ದ. 'ರಘು' ಅಂತ ಕೂಗೋದೇ ತಡ ಹಾಜರ್ ಭಾಷಿಯಾಗುತ್ತಾ ಇದ್ದ. ಯಾರೊಬ್ಬರೂ ಇವನನ್ನು ಕೂಗೋರೇ ! ನಾನೂ ಆಗಾಗ ಹೋಗ್ತಾ ಇದ್ದೆ ಆ ಹೋಟೆಲಿಗೆ. ಬೆಳಗಿನಿಂದ ಎಷ್ಟೋ ಮೊಹಲ್ಲಾ ತಿರುಗಿ, ಎಷ್ಟೋ ತಲೆಗಳಿಗೆ ಹಜಾಮತಿಮಾಡಿ 'ಉಸ್ಸಪ್ಪ' ಅಂತ ಸಾಕಾಗಿಹೋಗಿ ಕುಳಿತುಕೊಂಡಾಗ ಈ ಹುಡುಗ ಬಂದು ನಿಲ್ಲುತ್ತಾ ಇದ್ದ. ಇವನ ಮುಖದ ಮೇಲೆ, ಅಗೋ ! ಈಗ ಅಲ್ಲಿ ನಲೀತಾ ಇದೆಯಲ್ಲಾ, ಅದೇ ನಗು ಕುಣೀತಾ ಇತ್ತು. ಆಗ ಇವನ ಕೈಲಿ ಒಂದು ಗ್ಲಾಸು ನೀರು ಕುಡಿದರೂ ಸಾಕು, ಮೈ ದಣಿವೆಲ್ಲ ಓಡಿಹೋಗ್ತಿತ್ತು...''

ನಾರಣಪ್ಪ ಮಾಣಿಯನ್ನೇ ಸೂಕ್ಷ್ಮವಾಗಿ ನಿಟ್ಟಿಸುತ್ತಿದ್ದ. ನಿಜವಾಗಿಯೂ ಆ ಹುಡುಗ ಉಡುಪಿಯ ಕಡೆಯ ರೂಪೆಲ್ಲವನ್ನೂ ಕದ್ದು ತನ್ನೊಬ್ಬನ ದೇಹದೊಳಗೇ ಅವಿತಿಟ್ಟುಕೊಂಡಂತಿತ್ತು. ನಗುನಗುತ್ತ ವೆಂಕಟರಮಣಯ್ಯ ಮುಂದುವರಿಸಿದ :

''ಹೋಟೆಲಿನ ಖ್ಯಾತಿ ದಿನೇ ದಿನೇ ಹೆಚ್ಚಿತು. ಅದರ ಮಾಲೀಕ ದೆಹಲಿಯ ಭದ್ರಿ ಸೇಠಿನ ಹಣದ ಪೆಟ್ಟಿಗೇನೂ ತುಂಬುತ್ತ ಹೋಯಿತು. ಆದರೆ ಆ ಹೋಟೆಲಿನ ಆಧಾರ ಸ್ತಂಭಗಳಲ್ಲಿ ಒಬ್ಬನಾದ ನಮ್ಮ ಮಾಣಿಗೆ ಒಂದು ದಿನ ಜ್ವರ ಬಂತು... ಜ್ವರದಲ್ಲೇ ಕೆಲಸ ಮಾಡಿದ. ಜ್ವರ ಹೆಚ್ಚಾಯಿತು; 'ಊರಿಗೆ ಹೋಗಿ ಸುಧಾರಿಸಿಕೊಂಡು ಬರ್ತೇನೆ' ಅಂತ ಸೇಠನ್ನ ರಜಾ ಕೇಳಿದ. ಇಂಥಾ ಏನೂ ಅರಿಯದ ಹುಡುಗರ ಶ್ರಮದಿಂದ ಲಕ್ಷಾಂತರ ರೂಪಾಯಿ ಗಳಿಸಿ ದೊಡ್ಡ ಮನುಷ್ಯ ನೆನಿಸಿಕೊಂಡ ಸೇಠ್ ಗರ್ವದಿಂದ, 'ರಜಾ ಕೊಡೋಕೆ ಆಗೋದಿಲ್ಲ, ಈಗ ನವರಾತ್ರಿ ಸಮಯ; ಇಂಥಾ ಕಾಲದಲ್ಲಿ ಏನೋ ಒಂದೆರಡು ದಿನ ಜ್ವರ ಬಂದದ್ದೇ ನೆಪ ಮಾಡಿಕೊಂಡು, ಊರಿಗೇಳಬೇಕು ಅಂತ ಹಟ ಹೂಡಿದ್ದೀಯ ? ಭಡವ ! ನಡಿ ಕೆಲಸ ಮಾಡು', ಎಂದು ಅಬ್ಬರಿಸಿದ...''

''ಎಂಥ ಕೆಟ್ಟ ಜನ !''

''ಮಾಣಿಯ ದೇಹಸ್ಥಿತಿ ದಿನದಿಂದ ದಿನಕ್ಕೆ ಕೆಡುತ್ತ ಹೋಯಿತು. ಜ್ವರ ವಿಷಮಕ್ಕೆ ತಿರುಗಿತು...''

''ಆಗಲಾದರೂ ಆ ಸೇಠಿಗೆ ಕರುಣೆ ಬರಲಿಲ್ಲವೇ ?''

''ಹಿ... ಹಿ... ಹ್ಹಿ...!!! ಕರುಣೆ ! ಆ ಜನಕ್ಕೆ ಕರುಣೆ ಅನ್ನೋದು ಗೊತ್ತಿದೆಯಾ ? - ಅವನು ಮಾಡಿದ ಒಂದು ದೊಡ್ಡ ಉಪಕಾರ ಅಂದರೆ ಜ್ವರ ವಿಪರೀತಕ್ಕೆ ತಿರುಗಿದಾಗ

ಮಾಣೀನ ಈ ಆಸ್ಪತ್ರೆಗೆ ಸೇರಿಸಿಬಿಟ್ಟ... ಹೋಟೆಲಿನಲ್ಲೇ ಎಲ್ಲಾದರೂ ಸತ್ತುಗಿತ್ತು ಹೋಗಿಬಿಟ್ಟಾನು ಅನ್ನೋ ಹೆದರಿಕೆಯಿಂದ.''

''ಸರಿಹೋಯ್ತು. ಅದೇನೋ ಗಾದೆ ಹೇಳ್ತಾರಲ್ಲ 'ಹುರಿಯೋ ಬಾಂಡಲಿಯಿಂದ ಉರಿಯೋ ಬೆಂಕಿಗೆ' ಅಂತ. ಹಾಗಾಯ್ತು.''

''ಹಾಗೇ ಆಯ್ತು. ಈ ಆಸ್ಪತ್ರೆಯೋರು ಆ ಸೇಠಿ ಗಿಂತಲೂ ನಿಷ್ಕರುಣೆಯಿಂದ ಕಂಡರು ಈ ಮಾಣೀನ! ಕಾಲಕಾಲಕ್ಕೆ ಔಷಧಿ ಕೊಡ್ತಿರಲಿಲ್ಲ, ಆಹಾರ ಕೊಡ್ತಿರಲಿಲ್ಲ, ಒಂದೊಂದು ಸಲ ಗಂಟೆಗಟ್ಲೆ ಸುಳಿದೇ ನೋಡ್ತಾ ಇರಲಿಲ್ಲ! ಹೀಗೆ ಮಾಡಿ ಈ ಹುಡುಗನನ್ನ ಕೈಯಾರೆ ಕೊಂದುಹಾಕಿದರು ಈ ಆಸ್ಪತ್ರೆಯೋರು.'' - ವೆಂಕಟರಮಣಯ್ಯ ಮಾತು ನಿಲ್ಲಿಸಿ ಮುಖ ಒರೆಸಿಕೊಂಡ.

ಮಾಣಿಯ ಹೆಣ ದೀರ್ಘವಾಗಿ ನಿಟ್ಟುಸಿರುಬಿಟ್ಟ ಸದ್ದು ಸ್ಪಷ್ಟವಾಗಿ ಕೇಳಿಬಂದಿತು.

ಆದರೆ ಆ ನಿಟ್ಟುಸಿರು ಒಂದೇ ಗಳಿಗೆ –

ಮರುಗಳಿಗೆಗೆ ನಗು ಬಂದು ತನ್ನ ಹಿಂದಿನ ಸ್ಥಳವನ್ನಾಕ್ರಮಿಸಿತು. ಮಾಣಿಗೆ ಏನೋ ಅವಸರ!

ಏನೋ ಗಡಿಬಿಡಿ! ಜನ ಕಾಯುತ್ತಿದ್ದಾರೆ ಎಂಬ ಕಳವಳ!

ಮಾಣಿ ಆ ಸ್ಥಿತಿಯಲ್ಲೂ ನೋಡಲು ತುಂಬ ಮುದ್ದಾಗಿ ಕಾಣುತ್ತಿದ್ದ.

ಮಾಣಿ ಹಾಗೇ ಆಡುತ್ತಿರಬೇಕು. ತಾನು ಸದಾ ಹತ್ತಿರ ಕುಳಿತು ಎಲ್ಲವನ್ನೂ ಹಾಗೇ ನೋಡುತ್ತಿರಬೇಕು - ಎನಿಸಿತು ನಾರಣಪ್ಪನಿಗೆ!...

ಮತ್ತೆ ಮಿಂಚಿನ ಮಂದಹಾಸ!

ತೂರಾಡುತ್ತ... ತೂರಾಡುತ್ತ ಒಬ್ಬ ಮುದುಕ ಎದ್ದು ಕುಳಿತುಕೊಂಡ.

ಯಾರಿವನು?

ಪ್ರಶ್ನೆ ನಾರಣಪ್ಪನ ತಲೆಯನ್ನು ಪ್ರವೇಶಿಸುವ ಮೊದಲೇ ವೆಂಕಟರಮಣಯ್ಯ ಹೇಳಲುಪಕ್ರಮಿಸಿದ :

''ಆತನನ್ನು ನೋಡು. ಅವನೊಬ್ಬ ಜಲಗಾರ. ಈ ನಗರ ನೈರ್ಮಲ್ಯದ ಸಮಸ್ತ ಕೆಲಸವೂ ಅವನ ಭುಜದ ಮೇಲೆ ಬಿದ್ದಿತು. ನಗರದ ಬೀದಿಗಳನ್ನು ಅದರ ಸಂದಿಗಳನ್ನು ನಿರ್ಮಲವಾಗಿಡುವ ಜವಾಬ್ದಾರಿನ ಅವನ ಮೇಲೆ ಹೊರಿಸಿದ ಮುನಿಸಿಪಾಲಿಟಿ, ಅವನ ವಾಸಕ್ಕೇ ಯೋಗ್ಯ ವಸತಿ ಕಟ್ಟಿಸಿಕೊಟ್ಟಿರಲಿಲ್ಲ.''

''ಪಾಪ!''

''ಸರಿ, ಯಾವಾಗಲೂ ಕೊಳಕಿನಲ್ಲೇ ಇದ್ದು ಇದ್ದು ಅವನಿಗೆ ಕಾಯಿಲೆ ಬಂತು...''

''ಬರದೇ ಇರುತ್ತದೆಯೇ!''

''ಸೇರಿಕೊಳ್ಳೋಣ ಅಂತ ಆಸ್ಪತ್ರೆಗೆ ಬಂದ. ಆದರೆ ಸೇರಿಸುತ್ತಾರೆಯೇ?''

''ಹ್ಞೂ, ಅವನೆಷ್ಟೇ ಆದರೂ ಜಾಡಮಾಲಿ. ಈ ಸಮಾಜದ ಹೇಸಿಗೆ ಎತ್ತೋನು.''

''ಹೂ, ಆದ್ದರಿಂದ ಅವನನ್ನು ಆಸ್ಪತ್ರೆಗೆ ಸೇರಿಸಿಕೊಳ್ಳದೇ ಹೋದರು.

''ಆಮೇಲೆ?''

''ಆಮೇಲೆ ಅವನು ಹುಳಿತು, ಕೊಳೆತು ನಾರುತ್ತಾ ಆಸ್ಪತ್ರೆಯ ಮುಂದಿನ ರಸ್ತೆಯ ಫುಟ್‌ಪಾತಿನಲ್ಲಿ ಬಿದ್ದು ಕೊಂಡಿದ್ದ... ಹೀಗಿರುವಾಗ ಒಂದು ದಿನ ಆರೋಗ್ಯ




ಸಚಿವರ ಸವಾರಿ ಆ ರಸ್ತೆಯಲ್ಲಿ ಚಿತ್ತೈಸುವುದೆಂಬ ವದಂತಿ ಹಬ್ಬಿತು. ಆರೋಗ್ಯ ಸಚಿವರು ಬರುವಾಗ ಈ ಅನಿಷ್ಟ ಕಣ್ಣಿಗೆ ಬೀಳಬಹುದೆ? - ಆಸ್ಪತ್ರೆಯ ಅಧಿಕಾರಿಗಳು ಅವನನ್ನೆತ್ತಿ ಆಸ್ಪತ್ರೆಯ ಒಳಗೆ ತಾತ್ಕಾಲಿಕವಾಗಿ ಹೇಗೋ ಜಾಗ ಮಾಡಿ ಸೇರಿಸಿದರು. ಅಲ್ಲಿ ಸೇರಿಸಿದ ಸ್ವಲ್ಪ ಹೊತ್ತಿನಲ್ಲೆ ಅವನ ಪ್ರಾಣ ಹೋಯಿತು. ಪ್ರಾಣ ಹೋದದ್ದೇ ಸರಿ, ಮುಲಾಜಿಲ್ಲದೆ ಈ ಶವದ ಮನೆಗೆ ಎತ್ತಿ ತಂದು ಹಾಕಿದರು.''

''ಅಬ್ಬಾ! ಎಂಥಾ ಹೇಸಿಗೆಗೆಟ್ಟ ಜನ?''

ನಾರಣಪ್ಪನಿಗೆ ತೀರ ವ್ಯಥೆಯಾಯಿತು.

ಅವನು ಹೀಗೆ ವ್ಯಥೆಪಡುತ್ತಿರುವಾಗ ಅವನ ಸುತ್ತ ನೂರಾರು ಕಡೆ ಮಿಂಚಿದಂತಾಯಿತು.

ಕಣ್ಣು ಮುಚ್ಚಿ ಕಣ್ಣು ತೆರೆಯುವುದರೊಳಗೆ ನೂರಾರು ಹೆಣಗಳು ಅಸಾಧ್ಯ ಕೋಲಾಹಲ ಮಾಡುತ್ತಾ ಎದ್ದು ಕುಳಿತಿದ್ದವು.

ಜೀವನದ ವಿವಿಧ ಕಾರ್ಮಿಕ ವರ್ಗ ಅಲ್ಲಿ ನೆರೆದಂತಿತ್ತು. ರೈತ ಗಂಡಸರು ಹೆಂಗಸರು ಬಿತ್ತುವುದರಲ್ಲಿ, ಕೇರುವು ದರಲ್ಲಿ, ಕುಟ್ಟುವುದರಲ್ಲಿ, ಗೊಲ್ಲರು ಆಕಳ ಹಾಲು ಕರೆಯುವುದರಲ್ಲಿ, ಬೆಸ್ತರು ಮೀನು ಹಿಡಿಯುವುದರಲ್ಲಿ, ಕಾರ್ಖಾನೆಯ ಕೂಲಿಗಳು ಬಟ್ಟೆ ನೇಯುವುದರಲ್ಲಿ, ಪಿಂಗಾಣಿ ಸಾಮಾನು ಮಾಡುವುದರಲ್ಲಿ, ಉಕ್ಕು ತಯಾರಿಸುವುದೇ ಇತ್ಯಾದಿ ಕಾರ್ಯಗಳಲ್ಲಿ ನಿರತ ರಾಗಿದ್ದಂತೆ ತೋರುತ್ತಿತ್ತು.

ಇವುಗಳನ್ನೆಲ್ಲ ಸುತ್ತಿ ಬಳಸಿ ತನ್ನ ಸಂಗೀತದ ಹೊನಲಿ ನಲ್ಲಿ ತೆಳ್ಳನೆ ತೇಲಿಸುತ್ತಿತ್ತು ಮಹಾದೇವಿಯ ದಿವ್ಯಗೀತೆ.

ಆ ಗೀತೆಗೆ ಪಕ್ಕವಾದ್ಯದಂತೆ ಕೇಳಿಬರುತ್ತಿತ್ತು ಮಾಣಿಯ 'ಮಸಾಲೆ ಒಂದು, ಸಾದಾ ಎರಡು.'

ಆದರೆ ಈ ಕನಸಿನ ಲೋಕದ ಸ್ವಪ್ನಸಂಗೀತಕ್ಕೆ ಆಗಾಗ ಹುರುಪೇರುತ್ತಿದ್ದುದು ವೆಂಕಟರಮಣಯ್ಯನ ಗಂಡು ಕಂಠದಿಂದ ಹೊರಡುತ್ತಿದ್ದ ಹಿ-ಹ್ಹಿ-ಹ್ಹಿ ನಗುವಿನಿಂದ.

ನಾರಣಪ್ಪ ಮುಗ್ಧನಾಗಿ ಆಲಿಸುತ್ತಿದ್ದ, ನೋಡುತ್ತಿದ್ದ.

ಈ ಕನಸಿನ ಲೋಕ, ಇಲ್ಲಿನ ವ್ಯಕ್ತಿಗಳು, ಅವರ ಗೀತ, ಭವ್ಯ ದೃಶ್ಯಗಳು ಇವೆಲ್ಲವೂ ಚಿರಕಾಲ ಹಾಗೆಯೇ ಇರಬೇಕು. ತಾನು ಎಂದೆಂದಿಗೂ ಹೀಗೆಯೇ ಸುಖವನ್ನು ಅನುಭವಿಸುತ್ತಾ ಕುಳಿತಿರಬೇಕು ಎನಿಸಿತು ನಾರಣಪ್ಪನಿಗೆ.

ಆದರೆ ನಾರಣಪ್ಪ ತಾತ್ವಿಕವಾಗಿದ್ದರೆ ಅವನಿಗೆ ತಿಳಿಯುತ್ತಿತ್ತು - ಜೀವನ ನಶ್ವರ ಎಂದು!

ಪಾಪ, ಅವನ ಕನಸಿನ ಲೋಕವೂ ಈ ತತ್ವಕ್ಕೆ ಅಧೀನ ವಾಗಿತ್ತು.

ಬೆಳಕು ಹರಿಯುತ್ತಾ ಬಂದಹಾಗೆ ಆ ವ್ಯಕ್ತಿಗಳೂ ಒಂದೊಂದಾಗಿ ದಡಬಡನೆ ಮಲಗಲು ಆರಂಭಿಸಿದವು.

ನಾರಣಪ್ಪನಿಗೆ ಒಂದು ಸುಂದರ ಕನಸು ಒಡೆದು ಹೋಗುತ್ತಿರುವಂತೆ ಭಾಸವಾಯಿತು.

ಎಲ್ಲರಿಗೂ ಕಡೆಯದಾಗಿ ಮಲಗಿದ ವ್ಯಕ್ತಿ ವೆಂಕಟ ರಮಣಯ್ಯ. ಅವನು ಹಿ-ಹ್ಹಿ-ಹ್ಹಿ ಎಂದು ಕುಲುಕುತ್ತಾ ಮಲಗುವುದಕ್ಕೂ ಶವದ ಮನೆಯ ಬಾಗಿಲು ಕಿರ್ರೆಂದು ಸದ್ದು ಮಾಡಿ ತೆರೆಯುವುದಕ್ಕೂ ಒಂದಾಯಿತು. ಬಾಗಿಲಿನಲ್ಲಿ ವಾರ್ಡ್‌ಬಾಯ್ ಮುನಿಯನೂ ನೈಟ್ ಡ್ಯೂಟಿ ಡಾಕ್ಟರೂ ನಿಂತಿದ್ದರು. ನಾರಣಪ್ಪ ಗಡಗಡನೆ ನಡುಗುತ್ತ ನೋಡಿದ. ಭೀತಿ ಅವನ ಹೃದಯವನ್ನು ಪ್ರಚಂಡ ವೇಗದಲ್ಲಿ ಬಡಿಯುತ್ತಿತ್ತು. ಹೊರಗಿನ ನಿರ್ದಯ ಜಗತ್ತು ತನ್ನ ಕರಾಳ ರೂಪವನ್ನು ನಗ್ನವಾಗಿ ಒಂದು ಸಲ ತೋರಿದಂತಾಗಿತ್ತು ಅವನಿಗೆ... ಕಾಸಿಗೆ ಕಾಸು ಎಣಿಸುವ ಆ ಸಾಹುಕಾರ; ಬೆಳಗಿನಿಂದ ಮಧ್ಯರಾತ್ರಿಯವರೆಗೂ ಮುಗಿಯದ ಆ ಲೆಕ್ಕಾಚಾರ. ಈ ತುಟ್ಟಿ ಕಾಲದಲ್ಲಿ ಕೈಗೆ ಬರುತ್ತಿದ್ದ ಆ ಸಂಬಳ, ಸದಾ ಕಾಯಿಲೆಯಿಂದ ನರಳುವ ಆ ಹೆಂಡತಿ, ವರ್ಷೇ ವರ್ಷೇ ವೃದ್ಧಿಸುತ್ತಿರುವ ಆ ಹೊಟ್ಟೆಬಾಕ ಮಕ್ಕಳು – ಇವು ಅವನ ಮುಂದೆ ನಿಂತಂತಾಯಿತು.

ನಾರಣಪ್ಪನ ನಡುಕ ಹೆಚ್ಚಿತು.

ಮತ್ತೆ ಮುನಿಯನೂ ಆ ಡಾಕ್ಟರೂ ತನ್ನನ್ನು ಆ ಹೊರಗಿನ ನರಕಕ್ಕೆ ಖಂಡಿತ ಎಳೆದುಹಾಕುವರೆಂದು ದಿಗಿಲುಗೊಂಡ.

ಒಲ್ಲೆ, ಆ ನರಕಕ್ಕೆ ಎಂದಿಗೂ ಹೋಗಲೊಲ್ಲೆ ಎಂದಿತು ಅವನ ನೊಂದ ಮನಸ್ಸು.

ತಲೆ ಸುತ್ತಿ ಸುತ್ತಿ ಬಂದಿತು.

ಕುಳಿತಿದ್ದವನು ಹಾಗೆಯೇ ಹಿಮ್ಮುಖವಾಗಿ ಬಿದ್ದುಬಿಟ್ಟ.

ಡಾಕ್ಟರೂ ಮುನಿಯನೂ ಓಡಿಬಂದರು.

ಬಹಳ ಪರೀಕ್ಷೆ ನಡೆಸಿದ ಮೇಲೆ ಡಾಕ್ಟರು,

''ಈತ ವಾರ್ಡಿನಲ್ಲಿ ಸತ್ತಿರಲಿಲ್ಲ, ಜ್ವರದ ತಾಪಕ್ಕೆ ಮೂರ್ಛೆ ಹೋಗಿದ್ದ. ಇಲ್ಲಿಗೆ ತಂದು ಹಾಕಿದ ಮೇಲೆ ಜ್ಞಾನ ಬಂತು. ಸುತ್ತ ಹೆಣ ಬಿದ್ದಿದ್ದು ನೋಡಿ ಗಾಬರಿ ಯಾಯಿತು. ಆ ಭೀತಿಯಿಂದ ಹೃದಯಸ್ತಂಭನವಾಗಿ ಈಗ ಸತ್ತು ಹೋಗಿದ್ದಾನೆ'' ಎಂದರು.

ಮುನಿಯ ಕಣ್ಣರಳಿಸಿ, ''ಹಂಗಾ ಸಾಮಿ'' ಎಂದ.

ಸುತ್ತ ಕಣ್ಣು ಮುಚ್ಚಿ ಮಲಗಿದ್ದ ಶವಗಳು ತಮ್ಮೊಳಗೇ ಮೌನವಾಗಿ ನಗುತ್ತಿದ್ದವು. ಅದರಲ್ಲೂ ವೆಂಕಟರಮಣಯ್ಯ 'ಹಿ-ಹ್ಹಿ-ಹ್ಹಿ' ಎಂದು ಕೇಳದ ಸಣ್ಣ ದನಿಯಲ್ಲಿ ಕುಲುಕುತ್ತಿದ್ದ. ಅವನ ನಗು ಡಾಕ್ಟರಿಗಾಗಲಿ ಮುನಿಯನಿಗಾಗಲಿ ಕೇಳಲಿಲ್ಲ. ಅದು ಕೇಳಿದ್ದು ಗುಮಾಸ್ತೆ ನಾರಣಪ್ಪನೊಬ್ಬನಿಗೇ!

ಅದನ್ನು ಕೇಳಿ ನಾರಣಪ್ಪನ ಮುಖ ನಗುವಿನ ಲಹರಿಯಿಂದ ಸುಳಿಸುಳಿಯಾಯಿತು.

*(ಅಭಿರುಚಿ ಪ್ರಕಾಶನದ ಕೃತಿ)*



# ಫಾರಿನ್ ಪುಲಕ

ಅಂದ ಕಾಲತ್ತಿಲೆ, ಅಂದರೆ ನಲವತ್ತು ನಲವತ್ತೈದು ವರ್ಷಗಳ ಹಿಂದೆ ಸಿಂಹಳಕ್ಕೆ ಹೋಗಿ ಬಂದರೂ ಆಯಿತು ಅಂಥ ಯಾತ್ರಿ ಸಾಹಸಿ. ಹೆಸರಿನ ಮುಂದಿನ ಡಿಗ್ರಿಗಳ ಜೊತೆಗೆ ಫಾರಿನ್ ರಿಟರ್ನ್ಡ್ ಎಂಬ ಅರ್ಹವಾಚಕ! ನಾನು ಮೈಸೂರಿನ ಬನುಮಯ್ಯ ಪ್ರೌಢಶಾಲೆಯಲ್ಲಿ ಓದುತ್ತಿದ್ದಾಗ ನಮ್ಮ ಮಾಸ್ತರರೊಬ್ಬರು ಮಲೇಶಿಯಾಗೆ ಹೋಗಿ ವಾಪಸ್ಸಾದರು. ಅವರಿಗೆ ನಾವು ವಿದ್ಯಾರ್ಥಿಗಳು ಸನ್ಮಾನವಿಟ್ಟುಕೊಂಡಿದ್ದೆವು. ಆ ದೇಶದ ರಸ್ತೆ, ಕಟ್ಟಡ, ಬಸ್ಸು, ಹೋಟೆಲ್, ಅಂಗಡಿ ಮುಂಗಟ್ಟು, ಆಹಾರ ಶೈಲಿ ವಿವರಿಸಿ ಅಂತ ನಾವು ಪದೇ ಪದೇ ಅವರಿಗೆ ಮುತ್ತಿಗೆ ಹಾಕುತ್ತಿದ್ದೆವು. ನಾವು ವಿಚಾರಿಸಿದ್ದೆ ಹೆಚ್ಚು ಎಂದು ಬೀಗುತ್ತ ಮಾಸ್ತರರು ಎಳೆಎಳೆಯಾಗಿ ಅನುಭವ ಬಿಡಿಸಿಡುತ್ತಿದ್ದರು. ''ಅಲ್ಲಿ ಬಿಡಿ. ಶಿಸ್ತೋ ಶಿಸ್ತು. ಸಿನಿಮಾ, ಬ್ಯಾಂಕು, ಬಸ್ಸು, ರೈಲು ಎಲ್ಲ ಕಡೆ ಕ್ಯೂ ಪಾಲಿಸದಿರುವ ಒಬ್ಬ ಕೂಡ ನನ್ನ ಕಣ್ಣಿಗೆ ಬೀಳಲಿಲ್ಲ...'' ಎಂದವರು ಹೇಳುತ್ತಿದ್ದಂತೆಯೆ ನಮ್ಮ ತರಗತಿಯ ತೆನಾಲಿ ಎಂದೇ ಹೆಸರಾಗಿದ್ದ ಪ್ರಸನ್ನ, ''ಪರ್ವಾಗಿಲ್ಲ ಸಾರ್, ಬೇರೆಯವ್ರು ನೋಡಿರ್‍ತಾರೆ'', ಎಂದು ಒಗ್ಗರಣೆ ಸಿಡಿಸಿದ್ದ! ಆ ಜೋಕು ಇಂದಿಗೂ ಜನಪ್ರಿಯ. ಇಂಗ್ಲೆಂಡಿಗೆ ಹೋಗಿದ್ದವರೊಬ್ಬರು 'ಆ ದೇಶದಲ್ಲಿ ಏನ್ರೀ... ಪುಟಾಣಿಗಳು ಕೂಡ ಅರಳು ಹುರಿದಂತೆ ಇಂಗ್ಲಿಷ್‌ನಲ್ಲೇ ಮಾತಾಡ್ತಾರೆ' ಎಂದು ಬಣ್ಣಿಸಿದ್ದರಂತೆ.

ಆ ದಿನಗಳಲ್ಲಿ ವಿದೇಶಕ್ಕೆ ಹೊರಟವರು ಆಪ್ತರಿಂದ, ನೆಂಟರಿಂದ ಸತ್ಕರಿಸಲ್ಪಡುತ್ತಿದ್ದುದು ತಪ್ಪದ ವಾಡಿಕೆ. ಅಗ್ರಹಾರದಲ್ಲಿದ್ದ ನಮ್ಮ ಎದುರು ಮನೆ ಕಿಚ್ಚಿ (ಅಡ್ಡನಾಮ) ಅಮೆರಿಕಾಗೆ ಹೊರಟಿದ್ದ. ಬೀದಿಯವರಿಗೆಲ್ಲ ಭೂರಿ ಭೋಜನ. ಊಟಕ್ಕೆ ಕುಳಿತವರು ಬಹಳ ಸ್ವಾರಸ್ಯಕರವಾಗಿ ಅಲ್ಲಿನ ಆಹಾರ ಹೇಗೆ, ಹಾಲು ಮೊಸರು ಸಮೃದ್ಧವಂತೆ ನಿಜವೆ, ಮುಂತಾಗಿ ಚರ್ಚೆಗಿಳಿಯುತ್ತಿದ್ದರು. ವಿಮಾನದಲ್ಲೇ ಊಟ ಕೊಡ್ತಾರಂತೆ, ಸಾಗರಗಳ ಮೇಲೆಯೆ ಹೆಚ್ಚಿನ ಹಾರಾಟವಂತೆ ಎನ್ನುವಾಗಲಂತೂ ಕುತೂಹಲ ತಾರಕಕ್ಕೇರುತ್ತಿತ್ತು. ದಿನಪತ್ರಿಕೆಗಳಲ್ಲಿ ಇಂಥವರು ಇಂಥ ದೇಶಕ್ಕೆ ಪಯಣಿಸುತ್ತಿದ್ದಾರೆ, ಇವರ ಪಯಣ ಸುಖಕರವಾಗಿರಲಿ... ಶುಭಾಶಯಗಳು ಎಂಬ ಜಾಹೀರಾತುಗಳೂ ಕನಿಷ್ಠ ಒಂದಾದರೂ ಇರುತ್ತಿತ್ತು. ಅಂತೆಯೇ ವಾಪಸ್ಸಾಗುತ್ತಿರುವವರಿಗೆ ಸುಖಾಗಮನ ಕೋರಿಕೆಗಳು, ಹಾರೈಕೆಗಳು. ಇಲ್ಲಿ ನನಗೊಂದು ಸಂದೇಹವಿದೆ. ಅಷ್ಟು ಕಾಲ ವಿದೇಶಗಳಲ್ಲಿದ್ದು ಮರಳುತ್ತಿರುವವರಿಗೆ ಸ್ವದೇಶದಲ್ಲಿ ಅಡ್ಡಿ ಆತಂಕ, ತೊಂದರೆಗಳು ಎದುರಾಗುತ್ತವೆ ಎಂದು ಆಪ್ತರು ಯಾಕಾದರೂ ಭಾವಿಸುತ್ತಾರೋ ಕಾಣೆ! ವಿದೇಶಕ್ಕೆ ಹೊರಟವರು ಬೆಂಗಳೂರಿನಲ್ಲಿದ್ದರೇನೋ ಸರಿ. ಇಲ್ಲದಿದ್ದರೆ ಒಂದು ದಿನ ಮೊದಲೇ ಬೆಂಗಳೂರು ಸೇರಿಕೊಳ್ಳುತ್ತಿದ್ದರು. ನಂಬಿ ಇಲ್ಲವೆ ಬಿಡಿ. ರಾಮನಗರದಲ್ಲಿದ್ದ ನನ್ನ ಸಂಬಂಧಿಯೊಬ್ಬರು ಎರಡು ದಿನ ಮೊದಲೇ ಬೆಂಗಳೂರು ತಲುಪಿದ್ದರು. ವಿಮಾನ ನಿಲ್ದಾಣ ಎಷ್ಟು ದೂರವೊ ಏನೊ, ವಿದೇಶಿ ವಿನಿಮಯ ಸಿಗದಿದ್ದರೇನು ಪಾಡು, ಪಾಸ್‌ಪೋರ್ಟ್ ಸರಿ ಉಂಟೋ ವಿಚಾರಿಸೋಣ... ಹೀಗೆಲ್ಲ ಆ ದೇಶಾಂತರಿಗೆ ದಿಗಿಲು. ವಿದೇಶಕ್ಕೆ ಹೊರಟವರಿಗಿಂತ ಅವರ ಕುಟುಂಬದವರಿಗೆ, ಮಿತ್ರರಿಗೆ ಆತಂಕ, ಗಾಬರಿ ಹೆಚ್ಚು. ಒಬ್ಬರು ಚಟ್ನಿಪುಡಿ ಒಯ್ಯಿ ಅಂತ ಹೇಳಿದರೆ, ಇನ್ನೊಬ್ಬರು ಅಯ್ಯೊ ಬೇಡ ಅಲ್ಲೇ ಎಲ್ಲಾ ಸಿಗುತ್ತೆ ಎನ್ನುವರು. ಇಡ್ಲಿ ರವೆ ಖಂಡಿತ ಸೂಟ್‌ಕೇಸಿನಲ್ಲಿರಲಿ. ಅವಲಕ್ಕಿಯನ್ನು ಮಾತ್ರ ಮರೆಯ ಬೇಡ, ಹುಣಿಸೆಹಣ್ಣು ಅಲ್ಲಿ ಬಹಳವೆ ದುಬಾರಿ. ಬ್ರೆಡ್ಡೇ ಗತಿ ಅಲ್ಲಿ. ಅಕ್ಕೀನೂ ಒಂದೆರಡು ಕೆ.ಜಿ. ಇರ್‍ಲಿ... ಮುಂತಾಗಿ ಸಲಹೆಗಳು ಹರಿದುಬರುತ್ತಲೇ ಇರುತ್ತಿದ್ದವು. ಸೂಟ್‌ಕೇಸು, ಹ್ಯಾಂಡ್‌ಬ್ಯಾಗುಗಳಲ್ಲಿ ಬಟ್ಟೆಬರೆ, ದಾಖಲೆಗಳಿಗೂ ಪ್ರಾಮುಖ್ಯ ನೀಡದೆ ದವಸ ಧಾನ್ಯಾದಿಗಳನ್ನೇ ಹೆಚ್ಚು ತುಂಬಿಸುವವರೂ ಇದ್ದರು! ನನ್ನ ಕೋಬ್ರದರ್ ನಾಣಿ ಸಿಂಗಪುರಕ್ಕೆ ಕೆಲ ವರ್ಷಗಳ ಹಿಂದೆ ಹೋಗಿದ್ದಾಗ ಹಪ್ಪಳ, ಸಂಡಿಗೆ, ಶ್ಯಾವಿಗೆಗೆಂದೇ ಒಂದು ಪ್ರತ್ಯೇಕ ಲಗೇಜು ಬಿಗಿದಿದ್ದ.



ಮನೆಯಿಂದ ವಿಮಾನ ನಿಲ್ದಾಣಕ್ಕೆ ಹೊರಡುವುದೆಂದರೆ ಸಾಮಾನ್ಯದ ಮಾತೆ? ವಿಮಾನ ಏರುವವರಿಗೆ ಇಡುಗಾಯ್ ಒಡೆದು ಆರತಿ ಮಾಡಲಾಗುತ್ತಿತ್ತು. ಅಂದು ಮನೆ ಮುಂದೆ ವಿವಾಹ ಸಮಾರಂಭದಷ್ಟೆ ಉತ್ಸಾಹ, ಸಂಭ್ರಮ. ಅಂದಹಾಗೆ ವಿಮಾನ ಹೊರಡುವ ವೇಳೆ ಗೊತ್ತಿದ್ದರೂ ಸಹ ಸಡಗರವನ್ನು ಹಿಗ್ಗಿಸಿಕೊಳ್ಳಲು ಆಪ್ತೇಷ್ಟರಿಂದ ಪದೇ ಪದೇ ವಿಮಾನ ನಿಲ್ದಾಣಕ್ಕೆ ಫೋನಿನ ಮೇಲೆ ಫೋನು. ಮನೆಯಲ್ಲಿ ಫೋನು ಇಲ್ಲದಿದ್ದರೆ ಹತ್ತಿರದ ಅಂಗಡಿ ಮುಂಗಟ್ಟು ಇಲ್ಲವೆ ಪೋಸ್ಟ್ ಆಫೀಸಿಗೆ ಧಾವಿಸ ಬೇಕಾಗುತ್ತಿತ್ತು (ಈಗಿನಂತೆ ಮೊಬೈಲ್ ಇರಲಿಲ್ಲ). ಸರಿ, ಕನಿಷ್ಠ ಎರಡು ಕಾರುಗಳಾದರೂ ವಿಮಾನ ನಿಲ್ದಾಣದತ್ತ. ಮುಂದುಗಡೆಯ ಕಾರಿನಲ್ಲಿ ಭಾವೀ ವಿದೇಶಿ ಯಾತ್ರಿ ಎಂದು ಬೇರೆ ಹೇಳಬೇಕಾಗಿಲ್ಲ. ವಿಮಾನ ಏರುವ ತನಕ ಆತನ ಕೊರಳ ಹಾರ ಇಳಿಯುತ್ತಿರಲಿಲ್ಲ ಎನ್ನುವುದೂ ಅಷ್ಟೇ ನಿಜ. ಬೀಳ್ಕೊಡಲು ಬಂದವರ ಪೈಕಿ ವಿಮಾನ ಹೇಗಿರುತ್ತದೆ, ಹೇಗೆ ಹಾರುತ್ತದೆ, ಇಳಿಯುತ್ತದೆ ಕಣ್ಣಾರೆ ನೋಡಿಯೇ ಬಿಡೋಣ ಎಂಬ ಛಲವಾದಿಗಳೂ ಇರುತ್ತಿದ್ದರು.

ನಿಗದಿತ ವಿಮಾನ ಸಮಯಕ್ಕೆ ಸರಿಯಾಗಿ ಹೊರಡುತ್ತದೆಯೇ ಅಥವಾ ತಡವೇ ಅಂತ ಫಲಕವನ್ನು ದಿಟ್ಟಿಸುವುದೇ ಒಂದು ಪುಲಕವಲ್ಲವೆ? ಇನ್ನೇನು ಹೊರಟವರು ಲಗ್ಗೇಜುಗಳನ್ನು ತಳ್ಳುಗಾಡಿಗೆ ಪೇರಿಸಿಕೊಂಡು ಎಲ್ಲರ ಕೈಕುಲುಕುತ್ತಾರೆ. ನೆನಪಾಗುತ್ತದೆ ಆ ಕವನದ ಸಾಲು; 'ಬೀಳ್ಕೊಡುವ ಮುನ್ನ ಕಣ್ಣೀರ ಸುರಿಸದಿರು. ನೀಡೆನಗೆ ನಿನ್ನ ಹೃದಯಾಂತರಾಳದ ಕಿರುನಗೆಯ.'

ಇನ್ನು ವಿದೇಶದಿಂದ ವಾಪಸ್ಸಾಗುವವರನ್ನು ಬರಮಾಡಿಕೊಳ್ಳುವ ಅಂದಿನ ಶೈಲಿ ಇಂದಿಗಿಂತ ಭಿನ್ನವೇನಾಗಿರಲಿಲ್ಲ. ಏನಾದರೂ ನಾವು, ನಮ್ಮವರು ಎಂಬ ಭಾವಗಳು ಕಾಲಾತೀತ. ಅವು ಸದಾ ಹಸಿರು. ಇಂದು ವಿಶ್ವ ಒಂದು ಸಣ್ಣ ಗ್ರಾಮವಾಗಿಬಿಟ್ಟಿದೆ. ಇಲ್ಲಿ ಒಬ್ಬರು ನಕ್ಕರೆ, ಬಿಕ್ಕಳಿಸಿದರೆ, ತೇಗಿದರೆ ಅಥವಾ ಚಿಟಿಕೆ ಹೊಡೆದರೆ ಪ್ರಪಂಚದ ಯಾವುದೇ ಮೂಲೆಯಲ್ಲಿ ಅದು ಕೇಳಿಸೀತು, ಕಾಣಿಸೀತು. ಹಾಗಾಗಿ ಅಂದಿನ ದಿನಗಳಲ್ಲಿ ವಿದೇಶಕ್ಕೆ ಹೊರಟವನ ಓಜಸ್ಸು, ಅವನ ಸುತ್ತ ಜಮಾಯಿಸಿದವರ ಸಂಭ್ರಮ, ಹಿಗ್ಗು ಇನ್ನೆಲ್ಲಿ? ಒಗಟಾಗಿಯೆ ಉಳಿಯುತ್ತದೆ ಆ ಸಂಶಯ; ''ವಿಜ್ಞಾನ ನಮ್ಮ ಪುಲಕವನ್ನು ಕಸಿದುಕೊಳ್ಳುವಂತೆ ನಾವದನ್ನು ಪೋಷಿಸಬೇಕೆ?''

**ಬಂಡಿಗನವಿಲೆ ಭಗವಾನ್**

ನಂ. ೩೬ ಬಿ, ೯ನೇ ಮುಖ್ಯರಸ್ತೆ, ಬನಶಂಕರಿ ೧ನೇ ಸ್ಟೇಜ್, ೨ನೇ ಬ್ಲಾಕ್, ಬೆಂಗಳೂರು

ಡಾ|| ಟಿ. ರಾಜೇಂದ್ರ ತಗಡ್ಲಿ

**ಪ್ರಾ**ಚೀನ ಕನ್ನಡ ಸಾಹಿತ್ಯ ಮುಖ್ಯವಾಗುವುದು ಅದು ಪ್ರತಿಭಟನಾತ್ಮಕ ನೆಲೆಯಿಂದ ಬೆಳೆದುಬಂದ ಕಾರಣಗಳಿಂದ. ೯ ಮತ್ತು ೧೦ನೇ ಶತಮಾನದಲ್ಲಿ ವೈದಿಕ ಧಾರ್ಮಿಕ ಪ್ರಜ್ಞೆಗಿಂತ ಜೈನ ಧಾರ್ಮಿಕ ಪ್ರಜ್ಞೆ ಕವಿರಾಜಮಾರ್ಗಕಾರನಿಂದ ಹಿಡಿದು ಕನ್ನಡ ಸಾಹಿತ್ಯದಲ್ಲಿ ಮುಪ್ಪುರಿಗೊಂಡಿದೆ. ಇಡೀ ಜೈನ ಸಾಹಿತ್ಯ ಪರಂಪರೆಯನ್ನು ಅವಲೋಕಿಸಿದರೆ ಇದು ಸ್ಪಷ್ಟವಾಗುತ್ತದೆ. ಆದಿ ಕವಿ ಪಂಪ ಧರ್ಮ ಮತ್ತು ಕಾವ್ಯಧರ್ಮವನ್ನು ತನ್ನ ಕೃತಿಯ ಮೂಲಕ ಸಮನ್ವಯಗೊಳಿಸಿದ್ದೇನೆ ಎನ್ನುತ್ತಾನೆ. ಹತ್ತನೇ ಶತಮಾನ ಸಾಹಿತ್ಯದ ದೃಷ್ಟಿಯಿಂದ ತುಂಬ ಮಹತ್ವಪೂರ್ಣವಾದ ಕಾಲಘಟ್ಟವಾಗಿದೆ. ಯಾಕೆಂದರೆ ಅದು ಸಂಸ್ಕೃತ ಸಾಹಿತ್ಯದ ಒತ್ತಡದಿಂದ ಬಿಡುಗಡೆ ಹೊಂದುವ ಕಾಲವಾಗಿತ್ತು. ವೈದಿಕ ಸಂಸ್ಕೃತಿಯು ಒಡ್ಡಿದ ಸವಾಲುಗಳನ್ನು ಎದುರಿಸುವುದು ಜನಸಾಮಾನ್ಯರಿಗೆ ಕಷ್ಟವಾಗಿತ್ತು. ಇಂತಹ ಇಕ್ಕಟ್ಟಿನ ಸಂದರ್ಭದಲ್ಲಿ ಕನ್ನಡ ಸಾಹಿತ್ಯಕ್ಕೆ ಸಾಂಪ್ರದಾಯಿಕ ಎಲ್ಲೆಯನ್ನು ಮೀರಿ ಬರಬೇಕಾದ ಅನಿವಾರ್ಯತೆ ಇತ್ತು. ಅದರಂತೆ ಜೈನ ಧರ್ಮ ಪ್ರಚಾರ ಮತ್ತು ಕನ್ನಡ ಸಾಹಿತ್ಯ ವಿಚಾರ ಎರಡೂ ಸಂಗತಿಗಳು ಒಂದೇ ನೆಲೆಯಲ್ಲಿ ನಡೆದುಕೊಂಡು ಬಂದಿರುವುದು ಅಚ್ಚರಿಯ ಸಂಗತಿಯಲ್ಲ. ಸಾಹಿತ್ಯವನ್ನು ಧರ್ಮ ಬಳಸಿಕೊಂಡಿತೋ ಅಥವಾ ಧರ್ಮವನ್ನು ಸಾಹಿತ್ಯ ಬಳಸಿಕೊಂಡಿತೋ ಎಂಬುದು ಕುತೂಹಲಕರ ಸಂಗತಿ. ಒಟ್ಟಿನಲ್ಲಿ ಕನ್ನಡ ಸಾಹಿತ್ಯದ ತೊರೆ ಧರ್ಮದ ತಳಹದಿಯ ಮೇಲೆ ರೂಪುಗೊಂಡಿತು. ಆದರೆ ಪ್ರಾಚೀನ ಕನ್ನಡ ಸಾಹಿತ್ಯವನ್ನು ಧಾರ್ಮಿಕ ಸಾಹಿತ್ಯ ಎಂದು ಪರಿಗಣಿಸಿ ಓದುವುದು ಸರಿಯಾದ ಕ್ರಮವಲ್ಲ.

ಜೈನ ಸಾಹಿತ್ಯ ಸಂಸ್ಕೃತಿಯ ಅಧ್ಯಯನದಲ್ಲಿ ಗಮನಿಸಬೇಕಾದ ಪ್ರಮುಖವಾದ ಅಂಶಗಳೆಂದರೆ, ಕಾಲದ ಏಳಿಗೆ ಹಾಗೂ ಕಾಲದ ಅವನತಿ ಎಂಬ ಎರಡು ಪರಿಕಲ್ಪನೆಗಳು. ಜೈನ ಸಾಹಿತ್ಯ ಕುರಿತು ಮಾತನಾಡುವಾಗ ಹತ್ತನೇ ಶತಮಾನದ ಚಾರಿತ್ರಿಕ ಪ್ರಜ್ಞೆಯನ್ನಿಟ್ಟುಕೊಳ್ಳುವುದು ಮುಖ್ಯ. ಈ ಕಾಲಘಟ್ಟದಲ್ಲಿ ವೈದಿಕ ಸಂಸ್ಕೃತಿಯ ಪ್ರಾಬಲ್ಯ ಕುಗ್ಗಿದ್ದು ಜೈನ ಧರ್ಮದ ಉಚ್ಛ್ರಾಯ ಕಾಲ ಬಂದಿದೆ. ಈ ಹಿನ್ನೆಲೆಯಲ್ಲಿ ಜೈನ ಧರ್ಮಕ್ಕೆ ಸಾಮಾನ್ಯರಿಂದ ಹಿಡಿದು ಚಕ್ರವರ್ತಿಗಳವರೆಗೆ ಜನರು ಮತಾಂತರ ಹೊಂದಿರುವುದು ಸರ್ವೇಸಾಮಾನ್ಯ ಸಂಗತಿಯಾಗಿತ್ತು. ವಡ್ಡಾರಾಧನೆ ಕೃತಿಯಲ್ಲಿ ನಿರೂಪಿತವಾಗಿರುವಂತೆ, ಮತಾಂತರ ಪ್ರಕ್ರಿಯೆಯನ್ನು ಕಾಣಬಹುದು. ಜನಸಾಮಾನ್ಯರು ಜೈನ ಧರ್ಮದತ್ತ ಆಕರ್ಷಿತರಾಗಲು, ಆ ಧರ್ಮದಲ್ಲಿದ್ದ ಅಹಿಂಸಾಪರತ್ವ, ಸುಲಭವಾದ ಭಾಷೆ, ಸ್ಥಳೀಯ ಭಾಷೆಯಲ್ಲಿ ನಡೆಯುವ ಶ್ರಾವಕರ ಬೋಧನೆಗಳು ಕಾರಣ. ಹಾಗೆಯೇ ವೈದಿಕ ಧರ್ಮದ ಕ್ಲಿಷ್ಟಕರವಾದ ಧಾರ್ಮಿಕ ಸಿದ್ಧಾಂತಗಳು ಮತ್ತು ವೈದಿಕೇತರರಿಗೆ ಅವು ತಲುಪದಿರುವುದು. ಇಂತಹ ಅಂಶಗಳೇ ಆ ಧರ್ಮದತ್ತ ಜನರು ಆಕರ್ಷಿತರಾಗಲು ಕಾರಣವಾಗಿರಬಹುದು.

ಪ್ರಾಚೀನ ಸಾಹಿತ್ಯ ಕೃತಿಗಳನ್ನು ಗಮನಿಸಿದರೆ ಎಲ್ಲೂ ಜೈನ ಧರ್ಮ ಆಕ್ರಮಣಶೀಲತೆಯಿಂದ ಜನರನ್ನು ಮತಾಂತರಗೊಳಿಸಿರುವುದು ಕಂಡುಬರುವುದಿಲ್ಲ. ಇದು ಇಂದಿನ ಮತಾಂತರದ ಸಮಸ್ಯೆಗೆ ಪರಿಹಾರವಾಗಿ ಕಂಡುಬರುತ್ತದೆ. ಆದರೆ ಜೈನ ಧರ್ಮ ಮತ್ತು ಬೌದ್ಧ ಧರ್ಮಗಳ ಮೇಲೆ ವೈದಿಕಶಾಹಿ ಪ್ರಹಾರ ನಡೆಸಿರುವುದು ಉಲ್ಲೇಖನೀಯ. ಆದಾಗ್ಯೂ ವೈದಿಕ ಸಂಸ್ಕೃತಿಯ ನಿರ್ವಚನದ ನೆರಳು ಜೈನ ಸಾಹಿತ್ಯದ ಮೇಲೆ ತೀವ್ರ ಪ್ರಭಾವ ಬೀರಿರುವುದು ಕೂಡ ಸತ್ಯ. ಸಂಸ್ಕೃತದಲ್ಲಿದ್ದ ಪೂರ್ವ ಮಾದರಿಗಳೇ ಜೈನ ಕವಿಗಳಿಗೆ ಸಾಹಿತ್ಯ ರಚನೆಗೆ ಆಧಾರವಾದವು. ಹಾಗಾಗಿ ಕನ್ನಡ ದೇಶೀಯತೆಯ ನೆಲೆಗೆ ಹಿಂದಿನ ಮಾದರಿ ಕೃತಿಗಳು (ವ್ಯಾಖ್ಯಾನ ಗ್ರಂಥಗಳು), ಹಿರಿಯ ಕವಿಗಳಿಂದ ನಿರ್ಮಿತವಾದ ಸೃಜನಶೀಲ ಭಾಷಾಂತರಗಳು ಹಾಗೂ ರೂಪಾಂತರಗಳು ಸಹಾಯಕವಾದವು. ಇಂತಹ ಸಂದರ್ಭದಲ್ಲಿ ಜೈನ ಕವಿಗಳಿಗೆ ಪೌರಾಣಿಕ ನೆಲೆಯಲ್ಲಿ ಕೃತಿ ರಚಿಸಬೇಕೆಂಬ ಒತ್ತಾಸೆ ಒಂದು ಕಡೆಯಾದರೆ ಅಪೌರಾಣಿಕ ನೆಲೆಯ ಕಾವ್ಯ

# ಜೈನ ಸಾಹಿತ್ಯದ ವಿಭಿನ್ನ ನೆಲೆ:
## ಕೆಲವು ಟಿಪ್ಪಣಿಗಳು

ಜೈನ ಸಾಹಿತ್ಯ ಸಂಸ್ಕೃತಿಯ ಅಧ್ಯಯನದಲ್ಲಿ ಗಮನಿಸಬೇಕಾದ ಪ್ರಮುಖವಾದ ಅಂಶಗಳೆಂದರೆ, ಕಾಲದ ಏಳಿಗೆ ಹಾಗೂ ಕಾಲದ ಅವನತಿ ಎಂಬ ಎರಡು ಪರಿಕಲ್ಪನೆಗಳು. ಜೈನ ಸಾಹಿತ್ಯ ಕುರಿತು ಮಾತನಾಡುವಾಗ ಹತ್ತನೇ ಶತಮಾನದ ಚಾರಿತ್ರಿಕ ಪ್ರಜ್ಞೆಯನ್ನಿಟ್ಟುಕೊಳ್ಳುವುದು ಮುಖ್ಯ. ಈ ಕಾಲಘಟ್ಟದಲ್ಲಿ ವೈದಿಕ ಸಂಸ್ಕೃತಿಯ ಪ್ರಾಬಲ್ಯ ಕುಗ್ಗಿದ್ದು, ಜೈನ ಧರ್ಮದ ಉಚ್ಛ್ರಾಯ ಕಾಲ ಬಂದಿದೆ. ಈ ಹಿನ್ನೆಲೆಯಲ್ಲಿ ಜೈನಧರ್ಮಕ್ಕೆ ಸಾಮಾನ್ಯರಿಂದ ಹಿಡಿದು ಚಕ್ರವರ್ತಿಗಳವರೆಗೆ ಮತಾಂತರ ಹೊಂದಿರುವುದು ಸರ್ವೇಸಾಮಾನ್ಯ ಸಂಗತಿಯಾಗಿತ್ತು. ವಡ್ಡಾರಾಧನೆ ಕೃತಿಯಲ್ಲಿ ನಿರೂಪಿತವಾಗಿರುವಂತೆ, ಮತಾಂತರ ಪ್ರಕ್ರಿಯೆಯನ್ನು ಕಾಣಬಹುದು. ಜನಸಾಮಾನ್ಯರು ಜೈನ ಧರ್ಮದತ್ತ ಆಕರ್ಷಿತರಾಗಲು ಆ ಧರ್ಮದಲ್ಲಿದ್ದ ಅಹಿಂಸಾಪರತ್ವ, ಸುಲಭವಾದ ಭಾಷೆ, ಸ್ಥಳೀಯ ಭಾಷೆಯಲ್ಲಿ ನಡೆಯುವ ಶ್ರಾವಕರ ಬೋಧನೆಗಳು ಕಾರಣ. ಹಾಗೆಯೇ ವೈದಿಕ ಧರ್ಮದ ಕ್ಲಿಷ್ಟಕರವಾದ ಧಾರ್ಮಿಕ ಸಿದ್ಧಾಂತಗಳು ಮತ್ತು ವೈದಿಕೇತರರಿಗೆ ಅವು ತಲುಪದಿರುವುದು. ಇಂತಹ ಅಂಶಗಳೇ ಆ ಧರ್ಮದತ್ತ ಜನರು ಆಕರ್ಷಿತರಾಗಲು ಕಾರಣವಾಗಿರಬಹುದು.



ರಚಿಸಬೇಕೆಂಬ ಸಾಂಪ್ರದಾಯಿಕ ಚೌಕಟ್ಟು ಇನ್ನೊಂದು ಕಡೆ. ಈ ಹಿನ್ನೆಲೆಯಲ್ಲಿ ಆದಿಕವಿ ಪಂಪನ ದೇಶೀಯ ಪರಂಪರೆಯನ್ನು ಪುನಃ ಶೋಧಿಸುವ ಅಗತ್ಯವಿದೆ ಎಂಬುದು ಡಾ|| ತಾಳ್ತಜೆ ವಸಂತ ಕುಮಾರ್ ಅವರ ಅಭಿಪ್ರಾಯ. ಪಂಪನೂ ಸೇರಿಕೊಂಡಂತೆ ಇತರ ಜೈನ ಕವಿಗಳು ಲೌಕಿಕ ಮತ್ತು ಆಗಮಿಕ ಮಾರ್ಗವನ್ನು ಅನುಸರಿಸುತ್ತಲೇ ಅಹಿಂಸಾ ತತ್ವ ಪ್ರತಿಪಾದನೆಯ ಮತ್ತು ಹಿಂಸಾಪ್ರವೃತ್ತಿಯನ್ನು ಸಾರುವ ಎರಡೂ ಬಗೆಯ ಕಾವ್ಯವನ್ನು ರಚಿಸಿದ್ದಾರೆ. ಉದಾಹರಣೆಗೆ, ಪಂಪನ ಆದಿಪುರಾಣದಲ್ಲಿ ಅಹಿಂಸಾ ತತ್ವದ ಹಿನ್ನೆಲೆಯಲ್ಲಿ ನೆಲಕ್ಕಾಗಿ ಹೋರಾಟ ನಡೆದರೆ, ವಿಕ್ರಮಾರ್ಜುನ ವಿಜಯದಲ್ಲಿ ಇದೇ ಹೋರಾಟ ಹಿಂಸಾತ್ಮಕವಾಗಿ ನಡೆಯುತ್ತದೆ.

ಪ್ರತಿಯೊಬ್ಬ ಕವಿಯೂ ತನ್ನ ಕಾವ್ಯ ಕೃಷಿಯನ್ನು ನಿರ್ವಹಿಸಬೇಕಾದರೆ ತನ್ನದೇ ಆದ ಒಳನೋಟಗಳನ್ನು ಇಟ್ಟುಕೊಂಡಿರುತ್ತಾನೆ. ಯಾಕೆಂದರೆ ಕಾವ್ಯೋತ್ಪತ್ತಿಯ ಕ್ರಿಯೆ ವರ್ತಮಾನದ ಚರಿತ್ರೆಯ ಭಾಗವಾಗಿ ಬರುತ್ತದೆ. ಈ ಹಿನ್ನೆಲೆಯಲ್ಲಿ ಜೈನ ಕವಿಗಳ ಕಾವ್ಯ ಕಲ್ಪನೆ ಧರ್ಮ ಪ್ರಚಾರಕ್ಕಷ್ಟೇ ಮೀಸಲಾಗಿಲ್ಲ. ಕಾವ್ಯ ಧರ್ಮದ ಅನುಸಂಧಾನವನ್ನು ಅವರ ಕಾವ್ಯ ಕೃತಿಗಳಲ್ಲಿ ಕಾಣಬಹುದು. ಜೈನ ಕವಿಗಳಿಗೆ ಸಂಸ್ಕೃತ ಕಾವ್ಯದ ಆಳವಾದ ಜ್ಞಾನ ಇದ್ದುದರಿಂದ, ಅದರ ಮಾದರಿಯನ್ನು ಇಟ್ಟುಕೊಂಡು ತಮ್ಮ ಕಾವ್ಯಮೂಸೆಯೊಳಗೆ ಎರಕ ಹೊಯ್ದಿರುವುದು ಸರ್ವವೇದ್ಯ. ಹಾಗಾಗಿ ಜೈನ ಕಾವ್ಯಗಳು ಸಂಸ್ಕೃತ ಕಾವ್ಯದ ನೆರಳನ್ನು ಅನುಸರಿಸಿರುವುದು ಮತ್ತು ಅದನ್ನು ತಮ್ಮ ಕಾವ್ಯ ಕಲ್ಪನೆಗೆ ತಕ್ಕಂತೆ ನಿರೂಪಿಸಿರುವುದು ಪ್ರಶ್ನಾತೀತ ಸಂಗತಿ. ಸಂಸ್ಕೃತ ಕಾವ್ಯ ಧೋರಣೆಯನ್ನು ಜೈನ ಸಾಹಿತ್ಯ ಸಂಪೂರ್ಣವಾಗಿ ನಿರಾಕರಿಸಿದೆ ಎಂಬ ಮಾತು ಸರಿಯಾದುದಲ್ಲ. ಕಾವ್ಯ ಪರಿಕಲ್ಪನೆಯಾದ ಅಷ್ಟಾದಶವರ್ಣನೆಯನ್ನು ಜೈನ ಕಾವ್ಯ ಪರಂಪರೆ ಸಂಪೂರ್ಣವಾಗಿ ನಿರಾಕರಿಸಿಲ್ಲ. ಅದರಲ್ಲಿ ಕೆಲವೊಂದು ಅಂಶಗಳನ್ನು ಮಾತ್ರ ಕೈಬಿಟ್ಟಿದೆ.

ಕಾವ್ಯ ನಿರ್ಮಿತಿಯಲ್ಲಿ ಪುರಾಣ, ಇತಿಹಾಸ ಹಾಗೂ ಸಮಕಾಲೀನ ಅಂಶಗಳು ಮಹತ್ತರ ಪಾತ್ರ ವಹಿಸುವುದು ಕಾವ್ಯಕ್ಕೆ ಸಮಗ್ರತೆಯನ್ನು ತಂದುಕೊಡುತ್ತದೆ. ಪ್ರಾಚೀನ ಕನ್ನಡ ಸಾಹಿತ್ಯವು ಪುರಾಣ ಮತ್ತು ಇತಿಹಾಸವನ್ನು ಬಹಳ ಎಚ್ಚರಿಕೆಯಿಂದ ಬಳಸಿಕೊಂಡಿರುವುದನ್ನು ಕಾಣಬಹುದು. ಜೈನ ಕವಿಗಳು ಪೂರ್ವ ಪುರಾಣಗಳನ್ನು ತಮ್ಮ ಸಾಹಿತ್ಯದ ಬೆಳವಣಿಗೆಗೆ ಪೂರಕವಾಗಿ ಬಳಸಿಕೊಂಡಿದ್ದಾರೆ. ಇಲ್ಲಿ ಪುರಾಣ ಸಾಮೂಹಿಕ ಪ್ರಜ್ಞೆಯಾಗಿ ಕಾವ್ಯಗಳಲ್ಲಿ ಬಳಕೆಯಾಗಿದೆ. ಹಾಗಾಗಿ, ಸಾಹಿತ್ಯವೆಂದರೆ ಸ್ಥಳಾಂತರಗೊಂಡ ಪುರಾಣ. ಮುಂದೆ ಇತಿಹಾಸವು ಪುರಾಣದ ಮುಂದುವರಿದ ಭಾಗವಾಗಿ ಇಡೀ ಸಮಷ್ಟಿಯ ಪ್ರಜ್ಞೆಯಾಗಿ ಸಾಹಿತ್ಯದಲ್ಲಿ ಅನಾವರಣಗೊಂಡಿದೆ. ಪಂಪನ ಎರಡು ಕಾವ್ಯಗಳಲ್ಲಿ ಮನುಷ್ಯನ ಪಾಪ, ಕರ್ಮಗಳ ಪರಿಹಾರಕ್ಕಾಗಿ ಕಾವ್ಯದ ಓದು ಇರಬೇಕು ಎಂಬ ಅಭಿಪ್ರಾಯವಿದೆ. ಅದಕ್ಕಾಗಿ ಆದಿಪುರಾಣದಲ್ಲಿ ಪಂಪ, ''ಕವಿತೆಯೊಳ್ ಆಸೆಗೆಯ್ವ ಫಲಮಾವುದೋ ಪೂಜೆ ನೆಗಟ್ತೆ ಲಾಭಂ ಎಂಬಿವೆ'', ಎಂದು ಹೇಳಿ ಕಾವ್ಯದಿಂದ ಮನುಷ್ಯನ ಉನ್ನತೀಕರಣದ ಕಡೆಗೆ ಹೋಗಲು ಸಾಧ್ಯ ಎನ್ನುತ್ತಾನೆ. ಹಾಗಾಗಿ ಪುರಾಣ ಮತ್ತು ಇತಿಹಾಸ ಕಾವ್ಯದೊಳಗೆ ಇರಬೇಕೆಂದು ಜೈನ ಕವಿಗಳು ವಾದಿಸುತ್ತಾರೆ.

'ವಡ್ಡಾರಾಧನೆ'ಯಲ್ಲಿ ಶಿವಕೋಟ್ಯಾಚಾರ್ಯ ಪುರಾಣವನ್ನು ನೈತಿಕತೆಯ ಮಾದರಿಯಾಗಿ ಬಳಸಿಕೊಂಡಿದ್ದಾನೆ. ಅಂದರೆ ಧರ್ಮ ಪ್ರಚಾರದ ಮೂಲಕ ಸಾಹಿತ್ಯದಲ್ಲಿ ಸಮಾಜದ ಉನ್ನತೀಕರಣದ ನಿರೀಕ್ಷೆಯನ್ನು ವ್ಯಕ್ತಪಡಿಸುತ್ತಾನೆ. ಆದರೆ ಪಂಪ ಇರುವುದನ್ನು ಇದ್ದ ಹಾಗೆ ಒಪ್ಪಿಕೊಳ್ಳುವ ಮನೋಭಾವದವನಲ್ಲ. ಅವನ ಕಾವ್ಯಗಳು ತಾರ್ಕಿಕತೆಯ ಹೊಳಹನ್ನು ಬಯಸುತ್ತವೆ. ಪುರಾಣವನ್ನು ಪರಿಷ್ಕರಿಸಿ 'ಗತವನ್ನು ಸಂಗತಗೊಳಿಸುವ' ಪ್ರಕ್ರಿಯೆ ಪಂಪನ ಕಾವ್ಯಗಳಲ್ಲಿ ನಡೆದಿದೆ. ಪುರಾಣ ಇತಿಹಾಸಗಳನ್ನು ತನ್ನ ಟಂಕಸಾಲೆಯಲ್ಲಿ ಪರಿಷ್ಕರಿಸಿ ಹೊಸ ನೋಟವನ್ನು ಕೊಟ್ಟಿದ್ದಾನೆ ಪಂಪ. ಈ ಹಿನ್ನೆಲೆಯಲ್ಲಿ ಆತನ 'ವಿಕ್ರಮಾರ್ಜುನ ವಿಜಯ'ದಲ್ಲಿ ಪುರಾಣದ ನಾರಾಯಣನಿಗಿಂತ ಐತಿಹಾಸಿಕ ನರ (ಅರ್ಜುನ) ಶ್ರೇಷ್ಠ ನಾಗುತ್ತಾನೆ. ಇದೊಂದು ಬಗೆಯ ಪುರಾಣ ಭಂಜನೆಯ ಮಾದರಿಯಾಗಿ ಪಂಪ ನೀಡಿದ್ದಾನೆ. ಆರಂಭದಲ್ಲಿ 'ಪರಮಜಿನೇಂದ್ರ ವಾಣಿಯೇ ಸರಸ್ವತಿ...' ಎಂದು ಸೂಚಿಸುತ್ತಾನೆ. ಆದಿದೇವನ ಪುರಾಣ ಇಲ್ಲಿ ಐತಿಹಾಸಿಕ ವ್ಯಕ್ತಿಯ ಚರಿತ್ರೆಯಾಗುವ ಮೂಲಕ ಮಾನವ ಕುಲದ ಚರಿತೆಯಾಗಿ ಪ್ರಸ್ತುತತೆಯನ್ನು ಪಡೆದುಕೊಳ್ಳುತ್ತದೆ. ನಾಗಚಂದ್ರನ 'ರಾಮಚಂದ್ರ ಚರಿತ ಪುರಾಣ' (ಪಂಪ ರಾಮಾಯಣ)ದಲ್ಲಿ ಕೂಡ ನಾಗಚಂದ್ರ ಸಾಂಪ್ರದಾಯಿಕ ಕಾವ್ಯ ವಸ್ತುವಿಗೆ ಹೊಸತನವನ್ನು ನೀಡಲು ಪ್ರಯತ್ನಿಸಿದ್ದಾನೆ.

ಪಂಪ ರಾಜಾಶ್ರಯವನ್ನು 'ಜೋಳದ ಪಾಟಿ' ಎಂದು ತಿಳಿದುಕೊಂಡಿದ್ದರೂ ಆತನ ಸೃಜನಶೀಲತೆ ರಾಜಪ್ರಭುತ್ವವನ್ನು ಧಿಕ್ಕರಿಸುತ್ತದೆ. ಆದಿಪುರಾಣದಲ್ಲಿ ಭರತ-ಬಾಹುಬಲಿಯರ 'ಧರ್ಮಯುದ್ಧ'ದ ಸಂದರ್ಭದಲ್ಲಿ ಬಾಹುಬಲಿಯ ಮೂಲಕ ರಾಜಪ್ರಭುತ್ವವನ್ನು ವಿರೋಧಿಸುತ್ತಾನೆ ಪಂಪ. ಭರತನ ಅಧಿಕಾರದ ಅಹಂಕಾರವನ್ನು ಬಾಹುಬಲಿ ವಿರೋಧಿಸಿ ಅವನಿಗೆ 'ಪ್ರಭುತ್ವ'ದ ಪಾಠವನ್ನೇ ಮಾಡಿಸುತ್ತಾನೆ. ಜನತೆಯ ಪ್ರತಿನಿಧಿಯಾಗಿ ಕಾವ್ಯ ರಾಜಪ್ರಭುತ್ವವನ್ನು ಪ್ರಶ್ನಿಸುತ್ತದೆ. ಆ ಮೂಲಕ ರಾಜ ಮತ್ತು ಜನತೆಯ ನಡುವೆ ಸಾಮರಸ್ಯದ ಕೊಂಡಿಯಾಗಿ ಕಾವ್ಯ ದುಡಿದಿರುವುದನ್ನು ಜೈನ ಸಾಹಿತ್ಯದಲ್ಲಿ ಕಾಣಬಹುದು. 'ಪಂಪಭಾರತ'ದಲ್ಲಿ ಕರ್ಣನ ಮಾತಿನಲ್ಲಿ ರಾಜನ ಅಶಕ್ತತೆಯ ಪ್ರಶ್ನೆಯನ್ನು ಗಮನಿಸಬಹುದು.

ಕವಿಯು ಜನತೆ ಮತ್ತು ರಾಜನ ನಡುವಿನ ಸಾಮರಸ್ಯದ ಕೇಂದ್ರವಾಗಿ ಕೆಲಸ ಮಾಡುತ್ತಾನೆ. ೧೦ ಮತ್ತು ೧೧ನೇ ಶತಮಾನದ ವೀರಗಲ್ಲು, ಮಾಸ್ತಿಕಲ್ಲುಗಳೂ ಸಾಮರಸ್ಯದ ಮೌಲ್ಯಗಳನ್ನು ಪ್ರತಿನಿಧಿಸಿರುವುದು ಕಂಡುಬರುತ್ತದೆ. ಈ ಸಂದರ್ಭದಲ್ಲಿ ಪ್ರಮುಖವಾಗಿ ಚರ್ಚಿಸಬೇಕಾದ ವಿಷಯ ವೆಂದರೆ, 'ಅಧಿಕಾರ ಮತ್ತು ಜ್ಞಾನ'. ಈ ಹಿನ್ನೆಲೆಯಲ್ಲಿ ಪ್ರಭುತ್ವವು ಜ್ಞಾನವನ್ನು, ಧರ್ಮವನ್ನು ಅಧಿಕಾರದ ಹಿನ್ನೆಲೆಯಲ್ಲಿ ಬಳಸಿಕೊಳ್ಳುತ್ತದೆ. ಪ್ರಭುತ್ವವು ಜ್ಞಾನಕ್ಕೆ ಒತ್ತುಕೊಡುತ್ತಲೇ ಅದನ್ನು ತನ್ನ ಅಧಿಕಾರದ ಅಸ್ತ್ರವನ್ನಾಗಿ ಬಳಸಿಕೊಂಡಿರುವುದನ್ನು ಕಾಣಬಹುದು. ಆದಿಪುರಾಣದ ಭರತ-ಬಾಹುಬಲಿ ಪ್ರಸಂಗದಲ್ಲಿ ಜ್ಞಾನದಿಂದ ದೂರವಾದ ಅಧಿಕಾರಕ್ಕೆ ಹತ್ತಿರವಾದ ಸಂಗತಿಗಳನ್ನು ಗಮನಿಸಬಹುದು. ಈ ಮೂಲಕ ಪ್ರಭುತ್ವ ಸಾಮಾಜಿಕ ಬದುಕಿನ ಕ್ರೌರ್ಯಗಳನ್ನು ವೈಭವೀಕರಿಸುತ್ತದೆ.

ಜೈನ ಸಾಹಿತ್ಯ ಪರಂಪರೆಯನ್ನು ಅವಲೋಕಿಸಿದರೆ 'ವಡ್ಡಾರಾಧನೆ'ಯನ್ನು ಒಂದು ಸಾಮಾಜಿಕ ಅಧ್ಯಯನದ ಕೃತಿಯಾಗಿ ನೋಡಬಹುದು. ಇಲ್ಲಿ ಜೈನ ಧರ್ಮದ ತಾತ್ವಿಕತೆಯ ಮೂಲಕ ಸಮಾಜವನ್ನು ಕಟ್ಟುವ ಕೆಲಸ ಮಾಡುತ್ತಾನೆ ಕವಿ. ಹಾಗಾಗಿ ಕಾವ್ಯ ಒಂದು ಕಾಲಘಟ್ಟದ ಚರಿತ್ರೆಯೂ ಹೌದು, ಸಾರ್ವಕಾಲಿಕ ಮೌಲ್ಯವೂ ಹೌದು. ವಡ್ಡಾರಾಧನೆಯಲ್ಲಿ ನಿರೂಪಿತವಾಗಿರುವಂತೆ, ಅತ್ಯಂತ ಹೆಚ್ಚು ಪಾಪಕರ್ಮಗಳನ್ನು ಮಾಡಿದವರು ನಾಯಿಯಾಗಿ, ಕತ್ತೆಯಾಗಿ, ಹೊಲೆಯರಾಗಿ ಹುಟ್ಟುತ್ತಾರೆ. ಶ್ರಾವಕರು ಚರಿಗೆಗಾಗಿ ಹೋಗುತ್ತಾರೆ. ಉಣ್ಣಲು ಯೋಗ್ಯರಾದವರ ಮನೆಯಲ್ಲಿ ಮಾತ್ರ ಆಹಾರ ಸೇವಿಸುತ್ತಾರೆ. ಜೈನಯತಿಗಳಾಗುವವರು ಶ್ರೇಷ್ಠ ಕುಲದಲ್ಲಿ ಹುಟ್ಟಿದವರು ಮಾತ್ರ ಆಗುತ್ತಾರೆಯೇ ಹೊರತು ಪಂಚಮರಿಗೆ ಯಾವುದೇ ಕಾರಣಕ್ಕೂ ಅವಕಾಶ ಸಿಕ್ಕಿದ ಉದಾಹರಣೆಗಳಿಲ್ಲ.


'ಹೊಸತು' ಚಂದಾ ನೋಂದಣಿಗೆ ಮತ್ತು
ಸದಭಿರುಚಿಯ ಪುಸ್ತಕಗಳಿಗೆ ಕೆಳಕಂಡ
ನವಕರ್ನಾಟಕ ಪುಸ್ತಕ ಪ್ರದರ್ಶನಗಳಿಗೆ ಭೇಟಿ ನೀಡಿ

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕೆ.ಎಲ್.ಇ. ಶಾಲಾ ಆವರಣ, ಎಲ್.ಇ.ಎ. ಕ್ಯಾಂಟೀನ್ ಹತ್ತಿರ
ಲಿಂಗಾಯತ ಟೌನ್‌ಹಾಲ್ ಕಾಂಪೌಂಡ್, ಧಾರವಾಡ - ೫೮೦ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಯೂನಿಯನ್ ಕ್ಲಬ್ ಆವರಣ, ಪುರಸಭೆ ಕಚೇರಿ ಬಳಿ, ಎಂ. ಜಿ. ರಸ್ತೆ, ಬಿಜಾಪುರ

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಾರ್ಡೋಜ್ ಲೈಬ್ರರಿ ಆವರಣ, ಗಾಂಧಿವೃತ್ತ, ಸ್ಟೇಷನ್ ರಸ್ತೆ, ಗದಗ - ೫೮೨೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಬೀರಲಿಂಗೇಶ್ವರ ದೇವಸ್ಥಾನದ ಆವರಣ, ಪಿ.ಬಿ. ರಸ್ತೆ, ದಾವಣಗೆರೆ - ೫೭೭ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಜಿಲ್ಲಾ ಕೇಂದ್ರ ಗ್ರಂಥಾಲಯದ ಆವರಣ, ಬಿ. ಎಚ್. ರಸ್ತೆ, ತುಮಕೂರು - ೫೭೨ ೧೦೧

ಪಂಪನಿಗೂ ಕೂಡ ವೈದಿಕತೆಯ ದ್ವಂದ್ವಗಳು ಕಾಡಿರುವ ಸೂಚನೆಗಳು ಆತನ ಕೃತಿಗಳಲ್ಲಿ ಗೋಚರವಾಗುತ್ತವೆ. ಕರ್ಣನು 'ಸೂತಪುತ್ರ'ನೆಂಬ ಕಾರಣದಿಂದ ಉನ್ನತ ಅವಕಾಶಗಳಿಂದ ವಂಚಿತನಾಗುತ್ತಾನೆ. ಆದ್ದರಿಂದಲೇ ಪಂಪ 'ಕರ್ಣ ರಸಾಯನವಲ್ತೆ ಭಾರತಂ' ಎಂದು ಅನುಕಂಪ ತೋರಿದ್ದಾನೆ. ಶಕ್ತಿಶಾಲಿ ಕವಿ ರನ್ನ ಬಳೆಗಾರ ಕುಲದಲ್ಲಿ ಹುಟ್ಟಿದ್ದರಿಂದ ಕುಲದ ಪ್ರಶ್ನೆಯನ್ನು ಎತ್ತುತ್ತಾನೆ. ತನ್ನ 'ಗದಾಯುದ್ಧ'ದಲ್ಲಿ ದ್ರೋಣನನ್ನು ಮೂದಲಿಸುವ ಸಂದರ್ಭದಲ್ಲಿ ಮತಧರ್ಮದ ಶ್ರೇಣೀಕರಣ ಪ್ರತಿಪಾದನೆ ಮಾಡುತ್ತಾನೆ. ಈ ಹಿನ್ನೆಲೆಯಲ್ಲಿ ಜೈನ ಧರ್ಮವು ವೈದಿಕ ಧರ್ಮದಿಂದ ಏನೂ ಭಿನ್ನವಾಗಿಲ್ಲ ಎನ್ನಬಹುದು. ಅದೂ ಜಾತಿ, ಮತ, ಭೇದ, ಕಂದಾಚಾರಗಳಿಂದ ಹೊರತಾಗಿಲ್ಲ.

ಸ್ತ್ರೀ ಸಂಸ್ಕೃತಿಯ ಜಿಜ್ಞಾಸೆಯನ್ನು ಜೈನ ಸಾಹಿತ್ಯದಲ್ಲಿ ಕಾಣಬಹುದು. ಹಾಗೆ ನೋಡಿದರೆ ಜೈನ ಸಾಹಿತ್ಯದಲ್ಲಿ ಸ್ತ್ರೀ ಕುರಿತ ಚಿಂತನೆಯ ಕ್ರಮಗಳು ಸ್ಪಷ್ಟವಾಗಿ ಕಂಡುಬರುವುದಿಲ್ಲ. ಜೈನ ಸಾಹಿತ್ಯ ಕೃತಿಗಳಿಂದ ಮಾತ್ರ ಸ್ತ್ರೀ ಪರಿಕಲ್ಪನೆಯನ್ನು ತಿಳಿಯಲು ಸಾಧ್ಯವಿಲ್ಲ. ಈ ಅಂಶವನ್ನು ಆ ಕಾಲಕ್ಕೆ ಸೇರಿದ ಶಾಸನಗಳು, ಧಾರ್ಮಿಕ ಸಾಹಿತ್ಯ ಮತ್ತು ಜೈನ ಸಾಹಿತ್ಯ ಕೃತಿಗಳಿಂದ ಗ್ರಹಿಸಬಹುದಾಗಿದೆ. ಇವುಗಳಿಂದ ಜಾತಿ ಸಮಸ್ಯೆ, ಧಾರ್ಮಿಕ ಅಸಮಾನತೆ, ವಿಶೇಷವಾಗಿ ಲಿಂಗ ತಾರತಮ್ಯದ ನೆಲೆಗಳು ರೂಢಿಯಲ್ಲಿದ್ದುದು ಉಲ್ಲೇಖನೀಯ. ಜೈನ ಧರ್ಮದ ದಿಗಂಬರ ಪಂಥದಲ್ಲಿ ಹೆಣ್ಣಿಗೆ ಮೋಕ್ಷವಿಲ್ಲ, ಅದು ಸಾಧುವೂ ಅಲ್ಲ ಎಂಬ ಅಭಿಪ್ರಾಯ ಇದೆ. ಅಂದರೆ ಮುಂದೆ ಪುರುಷ ಜನ್ಮದಲ್ಲಿ ಹುಟ್ಟುವ ಮೂಲಕ ಮೋಕ್ಷ ಪಡೆಯ ಬಹುದು! ಅದಕ್ಕೆ ಧರ್ಮ ಸಾಧನೆಯ ಮಾರ್ಗ ಕಠಿಣವೆಂಬ ವಾದವನ್ನು ಮುಂದಿಡುತ್ತದೆ.

ಅತ್ತಿಮಬ್ಬೆ ಶಾಂತಿ ಪುರಾಣವನ್ನು ಬರೆಯಿಸಿ ಅದರ ಹಸ್ತಪ್ರತಿಗಳನ್ನು ಹಂಚಿರುವುದನ್ನು ರನ್ನ ಉಲ್ಲೇಖಿಸಿದ್ದಾನೆ. ನೃತ್ಯರಾಣಿ ಶಾಂತಲೆಯು ಬೇಲೂರಿನಲ್ಲಿ ಕಪ್ಪೆಚೆನ್ನಿಗರಾಯ ದೇವಾಲಯ ನಿರ್ಮಿಸಿರುವುದನ್ನು ಮತ್ತು ಆಕೆಯ ಬೇರೆ ಸಾಧನೆಗಳನ್ನು ಶ್ರವಣಬೆಳಗೊಳದ ಶಾಸನಗಳು ಶ್ಲಾಘಿಸಿವೆ. ಜಿನಚಂದ್ರನು ತನ್ನ ಪುತ್ರಿಯರ ಅಧ್ಯಯನಕ್ಕಾಗಿ ಸಾಹಿತ್ಯದ ಹಸ್ತಪ್ರತಿಗಳನ್ನು ಮಾಡಿಸಿರುವುದನ್ನು ಮತ್ತು ರಾಣಿಯರಿಗೆ ಹಾಗೂ ಅರಮನೆಯ ಎಲ್ಲಾ ಸ್ತ್ರೀಯರಿಗೆ ಶಿಕ್ಷಣ ನೀಡುವ ವ್ಯವಸ್ಥೆ ಕಲ್ಪಿಸಿದ್ದನ್ನು ಕಾಣಬಹುದು. ಹಾಗೆಯೇ ವಿಧವೆಯರಿಗೆ ಮರುವಿವಾಹದ ಅವಕಾಶಗಳೂ ಇದ್ದುವು. ನೋಂಪಿಯ ಕಥೆಗಳಲ್ಲಿ, ನಾಗಲಾಂಬಿಕೆಯ 'ಶೋಡಶಿ ಚರಿತ್ರೆ' ಕೃತಿಯಲ್ಲಿ, 'ಧರ್ಮಾಮೃತ' ಹಾಗೂ 'ಭರತೇಶ ವೈಭವ' ಮುಂತಾದ ಕೃತಿಗಳಲ್ಲಿ ಸ್ತ್ರೀ ಸಂಸ್ಕೃತಿಯ ವಿಚಾರಗಳು ನಿರೂಪಿತವಾಗಿವೆ. ಜನ್ನನ 'ಯಶೋಧರ ಚರಿತೆ'ಯಲ್ಲಿ ಅಮೃತಮತಿಯ ಪಾತ್ರವನ್ನು ಸ್ತ್ರೀ ಕೇಂದ್ರಿತ ನೆಲೆಯಿಂದ ಗಮನಿಸಬಹುದು. ಅದರಲ್ಲಿ ಹೆಣ್ಣನ್ನು ಭೋಗದ ವಸ್ತುವನ್ನಾಗಿ ನೋಡುವ ಇನ್ನೊಂದು ಮುಖವೂ ಇತ್ತು ಎಂಬುದನ್ನು ಪ್ರಾಚೀನ ಜೈನ ಕೃತಿಗಳು ಹೇಳುತ್ತವೆ. ಇಲ್ಲಿ ಅಮೃತಮತಿಯ ಪಾತ್ರ ಕವಿಯ ತಾತ್ವಿಕತೆಯ ಹಿಡಿತದಿಂದ, ಧಾರ್ಮಿಕ ನೀತಿಯ ಚೌಕಟ್ಟಿನಿಂದ ನುಣುಚಿಕೊಂಡು ಹೋಗುತ್ತದೆ. ಇಲ್ಲಿ ಅಮೃತ ಮತಿಯನ್ನು ಮಾನವೀಯ ಸಂಬಂಧದ ನೆಲೆಯಿಂದ ಗಮನಿಸಬೇಕು. 'ಸುಕೌಶಳ ಸ್ವಾಮಿ' ಕಥೆಯಲ್ಲಿ ಯಶೋಭದ್ರೆಯು ರತ್ನಗಂಬಳಿಯನ್ನು ತನ್ನ ಮೂವತ್ತೂರು ಸೊಸೆಯಂದಿರಿಗೆ ಸಮಾನವಾಗಿ ಹಂಚುವ ಪ್ರಕ್ರಿಯೆ ಕೌಟುಂಬಿಕ ಸ್ತ್ರೀಸಮಾನತೆಯ ಸಂಕೇತವಾಗಿದೆ.

ಸಂಸ್ಕೃತಿಯ ಅಧ್ಯಯನ ದೃಷ್ಟಿಯಿಂದ ಜೈನ ಸಾಹಿತ್ಯದ ಅಧ್ಯಯನದಲ್ಲಿ ತುಂಬ ಪ್ರಮುಖವಾದ ಅಂಶಗಳು ಕಂಡುಬರುತ್ತವೆ. ಆರಂಭದಲ್ಲಿ ಜೈನ ಧರ್ಮ ಜಾತಿ ವ್ಯವಸ್ಥೆಯನ್ನು ತಿರಸ್ಕರಿಸಿದ್ದನ್ನು ಕಾಣುತ್ತೇವೆ. ಆದರೆ ಕಾಲಕ್ರಮೇಣ ಅದು ವರ್ಣ ಸಂಕರವನ್ನು ಪುರಸ್ಕರಿಸಿದೆ. ಇದಕ್ಕೆ ವೈದಿಕ ಮತದ ಪ್ರಭಾವವೇ ಪ್ರಮುಖ ಕಾರಣ. ಜೈನ ಸಾಹಿತ್ಯ ಕೃತಿಗಳಲ್ಲಿ ಬರುವ ಭಾವಾವಳಿಯ ಕಥೆಗಳಲ್ಲಿ ಜನ್ಮಾಂತರದ ಕಲ್ಪನೆಯು ವೈದಿಕ ಧರ್ಮದ ಕರ್ಮಸಿದ್ಧಾಂತವನ್ನು ಪ್ರತಿಪಾದಿಸುತ್ತದೆ. ವಡ್ಡಾರಾಧನೆಯಲ್ಲಿ ನಾಗಶ್ರೀ ಜನ್ಮ ವೃತ್ತಾಂತದಲ್ಲಿ ಬರುವ ಜಾತಿಯ ಪ್ರಶ್ನೆಯನ್ನು ಗಮನಿಸಬಹುದು. ನಾಗಶ್ರೀ ಹಿಂದಿನ ಜನ್ಮದಲ್ಲಿ ಅತ್ಯಂತ ಕೀಳು ಕುಲದಲ್ಲಿ ಹುಟ್ಟಿರುತ್ತಾಳೆ. ನಂತರ ಬ್ರಾಹ್ಮಣನಾದ ನಾಗಶರ್ಮನ ಮಗಳಾಗಿ ಹುಟ್ಟಿ ಪಂಚಾಣು ವ್ರತಗಳನ್ನು ಸ್ವೀಕರಿಸುವುದು ಗಮನೀಯ ಸಂಗತಿ. ಈ ಹಿನ್ನೆಲೆಯಲ್ಲಿ ಪಂಪನು ಬಳಸಿದ ಪ್ರಸಿದ್ಧ ಮಾತು, ''ಮನುಷ್ಯ ಜಾತಿ ತಾನೊಂದೆ ವಲಂ'', ಎನ್ನುವ ಹೇಳಿಕೆಯನ್ನು ಸಮಗ್ರ ಜೈನ ಸಾಹಿತ್ಯದ ಮೂಲಕ ಗ್ರಹಿಸಲು ಸಾಧ್ಯವಿಲ್ಲ.

ಹತ್ತನೇ ಶತಮಾನದ ಸಾಹಿತ್ಯ ಪ್ರಮುಖವಾಗಿ ವೀರ ಮೌಲ್ಯವನ್ನು ಪ್ರತಿಪಾದಿಸುವ ಕಾಲಘಟ್ಟವೂ ಆಗಿತ್ತು, ಹಾಗಾಗಿ ಜೈನ ಸಾಹಿತ್ಯದಲ್ಲಿ ಅಹಿಂಸಾ ತತ್ವ ಮತ್ತು ಸಂಕಲ್ಪ ಹಿಂಸೆಯ ಜೊತೆ ಹಾಗೂ ಯುದ್ಧಪರ ಅಂಶಗಳು ಕಾವ್ಯಗಳಲ್ಲಿ ವರ್ಣಿತವಾಗಿರುವುದು ಕಂಡು ಬರುತ್ತದೆ. ಈ ನಿಟ್ಟಿನಲ್ಲಿ ಹಿಂಸೆ ಮತ್ತು ಶಾಂತಿ ಎರಡೂ ದ್ವಂದ್ವಗಳನ್ನು ಜೈನ ಕಾವ್ಯಗಳಲ್ಲಿ ಕಾಣಬಹುದು. ಇದು ಆಗಿನ ಕಾಲದ ಮೌಲ್ಯವಾಗಿರುವುದರಿಂದ ಕವಿಗಳು ಕಾವ್ಯಗಳಲ್ಲಿ ಅದನ್ನು ಅನಾವರಣಗೊಳಿಸಿದ್ದಾರೆ. ವಡ್ಡಾರಾಧನೆ ಸೇರಿದಂತೆ ಅನೇಕ ಅಲೌಕಿಕ ಜೈನ ಕಾವ್ಯಗಳಲ್ಲಿ ಮೋಕ್ಷ ಮಾರ್ಗದ ಪ್ರತಿಪಾದನೆಯಿದೆ. ಇದು ಆತ್ಯಂತಿಕ ಮೋಕ್ಷ ಮಾರ್ಗ. ಅಣುವ್ರತದ ಮೂಲಕ ಸಾಂಸಾರಿಕ ವೈರಾಗ್ಯದ ಕಡೆಗೆ ಮುಕ್ತಿಯ ಸಾಧನೆ ಮಾಡಬಹುದು. ವೈದಿಕ ಸಂಸ್ಕೃತಿಗೆ ಹೋಲಿಸಿದರೆ ಇಲ್ಲಿ ಮೋಕ್ಷಕ್ಕೆ ಜಾತಿಯ ಪ್ರಶ್ನೆ ಕಾಣುವುದಿಲ್ಲ. ರತ್ನತ್ರಯಗಳು ಮಾತ್ರ ಮುಖ್ಯವಾಗುವ ಮೂಲಕ ಮೋಕ್ಷದ ಮಾರ್ಗ ಮುಕ್ತವಾದುದು. ಜೈನ ಕಾವ್ಯಗಳಲ್ಲಿ ಮಾನವನ ಸೂಕ್ಷ್ಮ ಸ್ವಭಾವಗಳು ನಿರೂಪಿತಗೊಂಡು ಮನಸ್ಸಿನ ಭಾವನೆಗಳು ಪ್ರಕಟವಾಗುತ್ತವೆ. ತಪಸ್ಸು ಮನಸ್ಸಿನ ಕೇಂದ್ರೀಕರಣವಾಗಿದ್ದು ಅದನ್ನು ಹತೋಟಿಗೆ ತರುವ ಮೂಲಕ ಮೋಕ್ಷ ಸಾಧನೆಯನ್ನು ಪಡೆಯುತ್ತಾರೆ. ಜೈನ ಕಥೆ ಗಳಲ್ಲಿ ಬರುವ 'ಜಾತಿಸ್ಮರೆ' ಎಂಬ ಕಲ್ಪನೆ ಹಿಂದಿನ ಜನ್ಮದ ನೆನಪನ್ನು ತಂದುಕೊಡುತ್ತದೆ. ಉದಾಹರಣೆಗೆ, ಹುಟ್ಟುಕುರುಡಿಯಾದ ಹೆಣ್ಣುಮಗುವೊಂದು ತನ್ನ ಬಂಧುಗಳನ್ನು ನೋಡಿ ಹಿಂದಿನ ಜನ್ಮದ ವೃತ್ತಾಂತವನ್ನು ನೆನಪಿಸಿಕೊಳ್ಳುವುದು; 'ಸುಕೌಶಳ ಸ್ವಾಮಿ' ಕಥೆಯಲ್ಲಿ ಸುಕೇಸಿನಿ ಎಂಬುವಳು ಆನೆಯ ಚಿತ್ರ ಮತ್ತು ದಂತವನ್ನು ನೋಡಿದಾಗ ತಕ್ಷಣ ತನ್ನ ಹಿಂದಿನ ಜನ್ಮವನ್ನು ನೆನಪಿಸಿಕೊಳ್ಳುವುದು, ಇತ್ಯಾದಿ. ಈ ಎಲ್ಲಾ ಅಂಶಗಳು ಮನಸ್ಸಿನ ಸೂಕ್ಷ್ಮ ಸಂವೇದನೆಗಳಾಗುವ ಮೂಲಕ ಮಾನವನ ಸ್ವಭಾವವನ್ನು ತಿಳಿಸುತ್ತವೆ. ಜನ್ನನ 'ಯಶೋಧರ ಚರಿತೆ'ಯಲ್ಲಿ ಅಮೃತಮತಿಯ ಪಾತ್ರವನ್ನು ಅವಳ ಲೈಂಗಿಕ ಹಕ್ಕಿನ ಪ್ರಶ್ನೆಯಲ್ಲ ಎಂದು ಪರಿಗಣಿಸುವುದು ಸರಿಯಲ್ಲ, ಏಕೆಂದರೆ ಅಮೃತಮತಿಯ ಮಾನವ ಸ್ವಭಾವದ ಸಹಜ ಆಕಾಂಕ್ಷೆಗಳು ಇಲ್ಲಿ ಕೆಲಸ ಮಾಡಿವೆ. ಕೆಲವರು ಅದನ್ನು ಆಕೆಯ ಮನಸ್ಸಿನ ದೌರ್ಬಲ್ಯ ಎಂದು ಹೇಳುತ್ತಾರೆ. ಇದನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಇಲ್ಲಿ ಮಾನವೀಯ ಪ್ರೀತಿ ಮುಖ್ಯವಾಗುತ್ತದೆ. ಆಕೆಯ ಪಾತ್ರವನ್ನು ಮನಃಶಾಸ್ತ್ರೀಯ ದೃಷ್ಟಿಯಿಂದ ನೋಡಿದಾಗ ಮಾತ್ರ ಇದು ಸ್ಪಷ್ಟವಾಗುತ್ತದೆ. ಕುಲದ ಪ್ರಶ್ನೆಯನ್ನು ಇನ್ನೊಂದು ರೀತಿಯಲ್ಲಿ ವಿಶ್ಲೇಷಿಸುವ ಮೂಲಕ ಮಾನವನ ಸ್ವಭಾವದಲ್ಲಿ ಸಹಜವಾಗಿ ವೈಚಾರಿಕತೆ ಮೂಡಬೇಕೆಂಬುದು ಪಂಪನ ಆಶಯ. 'ವಿಕ್ರಮಾರ್ಜುನ ವಿಜಯ'ದಲ್ಲಿ ಪಂಪನು ಸ್ನೇಹ, ಶಿಸ್ತು, ಮಮಕಾರ, ಛಲ, ಅಭಿಮಾನ ಇವು ಮನುಷ್ಯನ ಸ್ವಭಾವದಲ್ಲಿ 'ಕುಲ'ಗಳಾಗಬೇಕು ಎಂದು ಮಾನವ ಸ್ವಭಾವಗಳನ್ನು ಪರಿಚಯಿಸಿದ್ದಾನೆ. ಇದು ವರ್ಣಾಶ್ರಮದ ತಿರಸ್ಕಾರವೂ ಹೌದು. ಹಾಗೆಯೇ 'ಗದಾಯುದ್ಧ'ದಲ್ಲಿ ದುರ್ಯೋಧನನು ಕರ್ಣನೊಡನೆ ಮಾನವೀಯ ಸಂಬಂಧದ ಹಿನ್ನೆಲೆಯಲ್ಲಿ ಸ್ನೇಹ ಬೆಳೆಸುತ್ತಾನೆ, ಆತನ ಅನಾಥಪ್ರಜ್ಞೆಯನ್ನು ದೂರ ಮಾಡುತ್ತಾನೆ. ಇನ್ನೊಂದು ಕಡೆ ತಾಯ್ತನದ ತುಡಿತವಿರುವ ಮಕ್ಕಳ ಭಾಗ್ಯವಿಲ್ಲದ ತಾಯಿಯೊಬ್ಬಳ ಸ್ವಭಾವ ನೇಮಿಚಂದ್ರನ 'ನೇಮಿನಾಥ ಪುರಾಣ'ದಲ್ಲಿ ಕಂಡುಬರುತ್ತದೆ. ಇಲ್ಲಿ ತಾಯಿಯೊಬ್ಬಳಿಗೆ ಪ್ರಾಣಿ, ಪಕ್ಷಿ, ಜೀವ ಸಂಕುಲಗಳೆಲ್ಲಾ ಮಗುವಿನಂತೆ ಭಾಸವಾಗುವ ಪರಿ ಸಹಜ ತಾಯ್ತನದ ಹಂಬಲದ ಸಂಕೇತವಾಗಿದೆ. ಪ್ರಕೃತಿ ಮತ್ತು ಮನುಷ್ಯ ಸಂಬಂಧದ ತೀರಾ ಭಾವನಾತ್ಮಕ ಜೀವಂತಿಕೆಯನ್ನು ಜೈನ ಕವಿಗಳು ಕಾವ್ಯಗಳಲ್ಲಿ ತಂದಿದ್ದಾರೆ. ಈ ಹಿನ್ನೆಲೆಯಲ್ಲಿ ಪ್ರಕೃತಿಯಲ್ಲಿ ಜೀವಂತಿಕೆಯನ್ನು ಕಾಣುವ ವಿಶಾಲ ಮನೋಭಾವ ಈ ಸಾಹಿತ್ಯದಲ್ಲಿ ಕಂಡುಬರುತ್ತದೆ.

ಒಟ್ಟಾರೆಯಾಗಿ, ಹತ್ತನೇ ಶತಮಾನದ ಜೈನ ಸಾಹಿತ್ಯವನ್ನು ಪರಿಶೀಲಿಸಿದರೆ ನಮಗೆ ಪ್ರಧಾನವಾಗಿ ಮನುಷ್ಯನ ವಿಕಾಸ-ವೈರಾಗ್ಯ ಕಂಡುಬರುತ್ತದೆ. ಮಾನವನ ವಿಕಾಸ ಕ್ರಿಯೆಯನ್ನು ಕೇಂದ್ರೀಕರಿಸಿಕೊಂಡು ಇಲ್ಲಿನ ಕಾವ್ಯಗಳು ರಚಿತವಾಗಿವೆ. ಕೇಶವ ಶರ್ಮ ಅವರು, ''ಈ ಜಗತ್ತಿನಲ್ಲಿ ಶ್ರೇಷ್ಠ ಮಾನವ ಜನಿಸುವುದು, ಅದರೊಂದಿಗೆ ಭೌತಿಕ ಜಗತ್ತನ್ನು ಹೇಗೆ ನೋಡಬೇಕೆನ್ನುವುದನ್ನು ಜೈನ ಸಾಹಿತ್ಯ ಕಲಿಸಿಕೊಟ್ಟಿದೆ'', ಎನ್ನುತ್ತಾರೆ. ಆದಿಪುರಾಣವನ್ನು ಗಮನಿಸುತ್ತಾ ಹೋದರೆ ಇದು ಸದ್ಯದ ಸ್ಥಿತಿಯನ್ನು ಮೀರುವ ಕಾವ್ಯವಾಗಿದೆ. ಇಲ್ಲಿ ಬಾಹುಬಲಿ ಹಾಗೂ ಭರತನ ಕುರಿತು ಹೇಳುತ್ತಾ, ಯಾರಿಗೆ ಜಿತೇಂದ್ರಿಯರಾಗುವ ಶಕ್ತಿ ಇದೆಯೋ ಅವರೇ ಬದುಕಿನ ಸಂಕಷ್ಟದಿಂದ ಬಿಡುಗಡೆ ಹೊಂದುತ್ತಾರೆ ಎಂದು ಹೇಳಲಾಗಿದೆ. ಜೈನ ಕಾವ್ಯಗಳಲ್ಲಿ ಸಾಮಾನ್ಯ ಜನರು ಹಾಗೂ ಅಸಾಮಾನ್ಯರು ಹೇಗಿದ್ದಾರೆ, ಮುಂದೆ ಹೇಗೆ ಇರಬೇಕು ಎಂಬುದನ್ನು ಚಿತ್ರಣದ ಮೂಲಕ ನಿರೂಪಿಸುತ್ತಾರೆ. ಹೀಗೆ ಮಾನವನ ಸಂಬಂಧಗಳನ್ನು ಗುರುತಿಸುವ ಸಂದರ್ಭದಲ್ಲಿ ಜೈನ ಕವಿಗಳು ವಿಭಿನ್ನವಾದ ಆಲೋಚನಾ ಕ್ರಮದಿಂದ ಸಾಹಿತ್ಯವನ್ನು ಪ್ರವೇಶಿಸುತ್ತಾರೆ.

ಡಾ|| ಟಿ. ರಾಜೇಂದ್ರ ತಗಡ್ಲಿ
C/o ಶಿವಯ್ಯ, ಎಚ್. ಬಿ. (ಕೆ.ಇ.ಬಿ.), ಶಾಂತಿನಗರ, ಬಿ.ಆರ್. ಪ್ರಾಜೆಕ್ಟ್ ಅಂಚೆ
ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

ಹೊಸ ಓದು

**ಕನ್ನಡ ಸಾಹಿತ್ಯ : ಚಾರಿತ್ರಿಕ ಬೆಳವಣಿಗೆ - ೨**
(ಮಧ್ಯಕಾಲೀನ ಸಾಹಿತ್ಯ - ರಾಜಸತ್ತೆಯ ವಿಘಟನೆಯ ಕಾಲ)

*ಡಾ|| ಸಿ. ವೀರಣ್ಣ*

**ಪುಟ : ೫೨೦**

**ಬೆಲೆ : ರೂ. ೩೦೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೪೯, ಬೆಂಗಳೂರು - ೫೬೦ ೦೦೧

ಕನ್ನಡದ ಓದುಗರು ಬಹುಕಾಲದಿಂದ ನಿರೀಕ್ಷಿಸುತ್ತಿದ್ದ ಪುಸ್ತಕವೊಂದು ಇದೀಗ ಬಂದಿದೆ. "ಕನ್ನಡ ಸಾಹಿತ್ಯ : ಚಾರಿತ್ರಿಕ ಬೆಳವಣಿಗೆ – ಭಾಗ - ೧" ಪ್ರಕಟವಾದ ಬಹಳ ವರ್ಷಗಳ ನಂತರ 'ಭಾಗ-೨' ಪ್ರಕಟವಾಗಿದೆ. ಡಾ|| ಸಿ. ವೀರಣ್ಣ ಅವರ ಪ್ರೌಢ ವಿಮರ್ಶಾ ಬರವಣಿಗೆ ಇಲ್ಲಿ ಪ್ರಧಾನವಾಗಿ ಎದ್ದುಕಾಣುವ ಅಂಶ. ರಾಜಸತ್ತೆಯ ವೈಭವದ ನಂತರ ಅದರ ವಿಘಟನೆಯೂ ಬೆನ್ನಲ್ಲೇ ಬಂದಿತು. ಬದಲಾದ ಸನ್ನಿವೇಶದಲ್ಲಿ ನಮ್ಮ ಕರ್ನಾಟಕದಲ್ಲೂ ಭಾರಿ ಬದಲಾವಣೆಗಳಾದವು. ಸುಮಾರು ಹನ್ನೊಂದು-ಹನ್ನೆರಡನೇ ಶತಮಾನದ ಸಾಮಾಜಿಕ ಕ್ರಾಂತಿಯ ನಂತರ ಚರಿತ್ರೆಯೊಂದಿಗೆ ಸಾಹಿತ್ಯವೂ ವಿಭಿನ್ನ ದಾರಿ ಹಿಡಿಯಿತು. ವರ್ಣನೀತಿ - ಸಾಮಾಜಿಕ ಅಸಮಾನತೆ – ಜಾತಿಪದ್ಧತಿ ವಿರುದ್ಧ ದನಿಯೆತ್ತಲಾಯಿತು. ದರ್ಪ ಅಹಂಕಾರದ ಯುಗ ಮುಗಿಯುತ್ತ ಬಂದು ಜನರು ಹೊಸ ದಿಕ್ಕಿನಲ್ಲಿ ಯೋಚಿಸತೊಡಗಿದರು. ಹೊಸ ಬಗೆಯ ಚಿಂತನೆ ಜನರಲ್ಲಿ ಜಾಗೃತಿ ಮತ್ತು ಆತ್ಮವಿಶ್ವಾಸ ಮೂಡಿಸಿತು. ಈ ಕಾಲದ ಸಾಹಿತ್ಯವನ್ನು ಮಧ್ಯಕಾಲೀನ ಸಾಹಿತ್ಯವೆಂದು ಪರಿಗಣಿಸಿ, ಕವಿಗಳ ಕಾವ್ಯದ ತಿರುಳನ್ನು ಹೊಸ ದೃಷ್ಟಿಕೋನದಿಂದ ಗ್ರಹಿಸಿ ವಿಮರ್ಶಿಸಿದ ಶ್ರಮಜೀವಿಗಳ ದುಡಿಮೆಯ ಪರವಾಗಿರುವ ಕೃತಿ ಇದು. ಗದ್ಯ ಬರಹಕ್ಕಿಂತ ಅಂದು ಕಾವ್ಯವೇ ಪ್ರಧಾನವಾಗಿದ್ದು ಅದೂ ಹಳೆಗನ್ನಡದಲ್ಲಿನ ಸಾಹಿತ್ಯದ ಸಾರವನ್ನೆಲ್ಲ ಲೇಖಕರು ಕಾವ್ಯ ಭಾಗಗಳನ್ನು ಉದಾಹರಿಸುತ್ತ ನಮ್ಮ ಮುಂದಿರಿಸಿದ್ದಾರೆ. ಸಾಹಿತ್ಯವು ಹೊರಳು ದಾರಿಯಲ್ಲಿ ಕ್ರಮಿಸಿದ ತಿರುವುಗಳನ್ನೂ ಗುರುತಿಸಿದ್ದಾರೆ.

**ಹಾಲುಮತ ಅಧ್ಯಯನಗಳು** (ಡಾ|| ಎಂ. ಎಂ. ಕಲಬುರ್ಗಿ ಅವರ ಲೇಖನಗಳ ಸಂಗ್ರಹ)

*ಸಂ. : ಡಾ|| ಎಫ್. ಟಿ. ಹಳ್ಳಿಕೇರಿ*

**ಪುಟ : ೨೦ + ೮೮** **ಬೆಲೆ : ರೂ. ೯೦**

**ವಿಕಾಸ ಪ್ರಕಾಶನ, ಶೋಧನ, ಶಿಕ್ಷಕರ ಬಡಾವಣೆ, ಎಂ. ಪಿ. ಪ್ರಕಾಶನಗರ**
ಹೊಸಪೇಟೆ - ೫೮೩೨೦೧

ಡಾ|| ಎಂ. ಎಂ. ಕಲಬುರ್ಗಿಯವರು ಕುರುಬ ಜನಾಂಗ - ಸಂಸ್ಕೃತಿ - ಚರಿತ್ರೆಗಳನ್ನು ಅಧ್ಯಯನ ಮಾಡಿ ಸುಮಾರು ಹದಿಮೂರು ಲೇಖನಗಳನ್ನು ಬರೆದಿದ್ದಾರೆ. ಈ ಎಲ್ಲ ಸಂಶೋಧನಾತ್ಮಕ ವಿವರಗಳನ್ನು ಈ ಪುಸ್ತಕದಲ್ಲಿ ಒಂದೆಡೆ ಕಲೆಹಾಕಿದವರು ಡಾ|| ಎಫ್. ಟಿ. ಹಳ್ಳಿಕೇರಿ. ಸುಮಾರು ಹನ್ನೊಂದನೆಯ ಶತಮಾನದಲ್ಲಿನ ಕಾಲವು ಕುರುಬರ ಗುರು ಸಂಪ್ರದಾಯದ ಪ್ರಾರಂಭಕಾಲವೆಂದೂ ಅಂದು ರೇವಣಸಿದ್ದ, ಸಿದ್ಧರಾಮ ಬಹು ಪ್ರಸಿದ್ಧರೆಂದೂ ಕಲಬುರ್ಗಿ ಅಭಿಪ್ರಾಯಪಡುತ್ತಾರೆ. ಅನೇಕ ಜಾನಪದ ಮೌಖಿಕ ಗೀತಗಳು, ಅಪೂರ್ವ ಶಾಸನಗಳು ಮಾತ್ರವಲ್ಲದೆ ಲಿಖಿತ ಆಕರಗಳನ್ನು ಸಂಶೋಧನೆಯಲ್ಲಿ ಬಳಸಿಕೊಳ್ಳಲಾಗಿದೆ. ಆದಿ ಕುರುಬರ ಈ ಬುಡಕಟ್ಟು ಜನಾಂಗವು ಕ್ರಮೇಣ ಹೈನುಗಾರಿಕೆ - ಪಶುಪಾಲನೆ - ಕೃಷಿ ವ್ಯವಸಾಯ ಮುಂತಾದ ಕೆಲಸ ಕಾರ್ಯಗಳಲ್ಲಿ ತೊಡಗಿಕೊಂಡು ಸಮಾಜದ ವಿವಿಧ ಗುಂಪುಗಳಲ್ಲಿಂದು ಚದುರಿಹೋಗಿದ್ದು ಮುಂದೆ ಶೈವ-ವೀರಶೈವ ಸಂಸ್ಕೃತಿಯೊಂದಿಗೂ ಬೆರೆತು ವಿಲೀನವಾಗಿರುವ ಅಂಶವನ್ನಿಲ್ಲಿ ಪ್ರಸ್ತಾಪಿಸಲಾಗಿದೆ. ಅಂದಿನ ಕಾಲದ ಬಸವಣ್ಣನ ಕ್ರಾಂತಿಕಾರಿ ವಿಚಾರಗಳಿಂದ ಪ್ರಭಾವಿತರಾಗಿ ಲಿಂಗದೀಕ್ಷೆ ಪಡೆದುದರಿಂದ ಈ ಪಲ್ಲಟ ಸಾಧ್ಯವಾಗಿರಬಹುದು. ಹೀಗೆ ಒಂದು ಜನಾಂಗದ ಅಧ್ಯಯನದೊಂದಿಗೆ ಇಲ್ಲಿ ಅನೇಕ ಕಥೆ-ಉಪಕಥೆಗಳು ಸೇರಿಕೊಂಡಿದ್ದು ಅವು ಸ್ವಾರಸ್ಯಕರವಾಗಿವೆ. ಸಮಾಜಶಾಸ್ತ್ರವನ್ನು ಅಧ್ಯಯನ ಮಾಡುವವರಿಗೆ ವಿವರಗಳು ಈ ಗ್ರಂಥದಿಂದಾಗಿ ಒಂದೆಡೆ ಲಭ್ಯವಾಗಿವೆ.



**ಕಾಡತೊರೆಯ ಜಾಡು** (ಕಡಿದಾಳು ಶಾಮಣ್ಣ ಬದುಕು ಹೋರಾಟಗಳ ಕಥನ)

*ಸಂಗ್ರಹ ಮತ್ತು ಕೃತಿರೂಪ : ಅಕ್ಷತಾ ಕೆ.*

**ಪುಟ : ೨೯೬ + ೮** **ಬೆಲೆ : ರೂ. ೧೫೦**

**ಅಭಿನವ,** ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ
ಬೆಂಗಳೂರು - ೫೬೦ ೦೪೦

ಇದು ಕಡಿದಾಳು ಶಾಮಣ್ಣ ಇಂದು ನೆಲೆಸಿರುವ ಹಳ್ಳಿಯ ಬದುಕಿನೊಂದಿಗೆ ವಿವರವಾಗಿ ಬಿಚ್ಚಿಕೊಳ್ಳುತ್ತ ಸಾಗುವ ಅವರೇ ಹೇಳಿಕೊಂಡ ಅವರದೇ ಬದುಕಿನ ಕಥನ. ಕಥೆ ಹೇಳುವ ಶೈಲಿಯಲ್ಲಿ ಸಂದರ್ಭಗಳನ್ನು ಜ್ಞಾಪಿಸಿಕೊಳ್ಳುತ್ತ ಅಂದಿನ ಕಾಲವನ್ನು ನಮಗೆ ಪರಿಚಯಿಸುವಂತೆ ಹೇಳಿದ ಈ ಅನುಭವಗಳನ್ನು ಕೃತಿರೂಪದಲ್ಲಿ ದಾಖಲಿಸಿದ್ದು ಕೆ. ಅಕ್ಷತಾ. ವಿದ್ಯಾವಂತರಾಗಿ ಪದವಿ ಪಡೆದು ಉದ್ಯೋಗದ ಭರವಸೆ - ಅರ್ಹತೆ ಇದ್ದರೂ ನಗರಗಳನ್ನು ತ್ಯಜಿಸಿ ಹಳ್ಳಿಯ ಕಡೆ ಹೋಗಿ ನೆಲೆಸಿದವರಲ್ಲಿ ಶಾಮಣ್ಣ ಕೂಡ ಒಬ್ಬರು. ಹಳ್ಳಿಗಳಿಂದ ನಗರಕ್ಕೆ, ನಗರದಿಂದ ವಿದೇಶಗಳಿಗೆ ಹಾರುವ ಸನ್ನಿಹಿಡಿದ ಕಾಲವದು. ಭಗವತಿಕೆರೆ ಎಂಬ ಹಳ್ಳಿಯಲ್ಲಿ ನೆಲೆಸಿ ತಮ್ಮೆಲ್ಲ ಚಟುವಟಿಕೆ – ಹೋರಾಟಗಳನ್ನು ಅಲ್ಲಿಂದಲೇ ನಿರ್ವಹಿಸಿ ಸಮಾಜ ಸೇವೆಯಲ್ಲೂ ಸಕ್ರಿಯವಾಗಿ ತೊಡಗಿಸಿಕೊಂಡು ಸ್ವತಃ ಕೃಷಿಕರಾಗಿದ್ದಾರೆ. ಕುವೆಂಪು ಸಂದೇಶದಂತೆ 'ಮಂತ್ರಮಾಂಗಲ್ಯ'ವೆಂಬ ಹೊಸ ರೀತಿಯ ಸರಳ ಮದುವೆಗಳನ್ನು ಮಾಡಿಸಿದ್ದಾರೆ. ರೈತರಿಗೆ ನೆರವಾಗಿದ್ದಾರೆ. ಹಳ್ಳಿಯ ಬದುಕಿನ ಸೊಗಸುಗಾರಿಕೆಯನ್ನು ತಿಳಿಯಬೇಕಾದರೆ ಇಂಥ ಪುಸ್ತಕಗಳನ್ನೋದಬೇಕು. ಅಂದಿನ ಕಾಲಕ್ಕೆ ಇಂದಿನಂತೆ ಅತಿಯಾದ ಸೌಕರ್ಯಗಳು ಯಾವುವೂ ಇದ್ದಿಲ್ಲ. ಏನೇ ಕಷ್ಟ ಬಂದರೂ ಕಂಗೆಡದಂತೆ ಸಹಿಸಿಕೊಂಡು ರೋಚಕ - ಸಾಹಸಮಯ ಬದುಕನ್ನು ಎದುರಿಸಬೇಕಾಗಿತ್ತು. ಆತ್ಮೀಯ ಭಾವನೆ - ಸಹಕಾರ ಮನೋಭಾವ - ಆಪತ್ತಿನಲ್ಲಿ ಕೈಲಾದ ಸಹಾಯ ನೀಡುವ ಸಂಸ್ಕೃತಿ ಮರೆಯಾಗುತ್ತಿರುವ ಇಂದಿನ ದಿನಗಳಲ್ಲಿ ಓದಲೇಬೇಕಾದ ಪುಸ್ತಕವಿದು.

**ರಾಷ್ಟ್ರರತ್ನ ಕೆಂಗಲ್ ಹನುಮಂತಯ್ಯ** (ಸಮಗ್ರ ಜೀವನ ಚರಿತ್ರೆ)

*ಪ್ರೊ|| ಡಿ. ಲಿಂಗಯ್ಯ*

**ಪುಟ : ೫೩೨** **ಬೆಲೆ : ರೂ. ೩೦೦**

**ಗೋಧೂಳಿ ಪ್ರಕಾಶನ,** ನಂ. ೩೫, 'ಗೋಧೂಳಿ', ೫ನೇ 'ಬಿ' ಅಡ್ಡರಸ್ತೆ, ಸಿಂಡಿಕೇಟ್ ಬ್ಯಾಂಕ್ ಲೇಔಟ್, ತುಂಗಾನಗರ
ಬೆಂಗಳೂರು - ೫೬೦ ೦೯೧



ಕರ್ನಾಟಕದ ಹಿಂದಿನ ಮುಖ್ಯಮಂತ್ರಿಯಾಗಿದ್ದು ಬೆಂಗಳೂರಿನ ವಿಧಾನಸೌಧದ ನಿರ್ಮಾತೃ ಎಂದೇ ಪರಿಚಯಿಸಲ್ಪಡುವ ಕೆಂಗಲ್ ಹನುಮಂತಯ್ಯ ಅವರ ಸಮಗ್ರ ಜೀವನ ಚರಿತ್ರೆಯಿದು. ಜವಾಹರಲಾಲ್ ನೆಹರೂ, ಎಂ. ವಿಶ್ವೇಶ್ವರಯ್ಯ ಅವರ ಸಮಕಾಲೀನರಾದ ಕೆಂಗಲ್ ಅಂದಿನ ಕಾಂಗ್ರೆಸ್ ಧುರೀಣರೊಂದಿಗೆ ಸ್ನೇಹವಿಶ್ವಾಸದಿಂದಿದ್ದು ಪ್ರಾಮಾಣಿಕ - ಸಮರ್ಥ ಆಡಳಿತಗಾರರೆಂದು ಹೆಸರು ಗಳಿಸಿದ್ದರು. ಅಂದಿನ ಮೈಸೂರು ರಾಜ್ಯಕ್ಕೆ ರಾಷ್ಟ್ರಮಟ್ಟದಲ್ಲಿ ಗೌರವದ ಸ್ಥಾನ ತುಂಬಿಕೊಟ್ಟಿದ್ದರು. ಇಂದಿನ ರಾಜಕಾರಣಿಗಳು, ಮಂತ್ರಿಮಹೋದಯರ ಆಡಳಿತ ವೈಖರಿಯಿಂದಾಗಿ ದಿನ ಬೆಳಗಾದರೆ ಒಂದಲ್ಲ ಒಂದು ತೊಂದರೆ ಅನುಭವಿಸುತ್ತಿರುವ ನಮಗೆ ಈ ಜೀವನ ಚರಿತ್ರೆ ಓದಿದಾಗ ಇಂಥ ರಾಜಕೀಯ ಮುತ್ಸದ್ದಿಗಳು ನಮ್ಮಲ್ಲಿದ್ದರೇ ಎಂಬ ಆಶ್ಚರ್ಯತುಂಬಿದ ಪ್ರಶ್ನೆ ಎದುರಾಗುತ್ತದೆ. ಜೊತೆಗೆ ಅಂದಿನ ರಾಜಕಾರಣವು ರಾಜ್ಯಮಟ್ಟದಲ್ಲಾಗಲೀ ರಾಷ್ಟ್ರಮಟ್ಟದಲ್ಲಾಗಲೀ ಇಂದಿನಂತೆ ಕೀಳುಮಟ್ಟಕ್ಕಿಳಿದು ನಡುಬೀದಿಯಲ್ಲಿ ನಗ್ನವಾಗಿರಲಿಲ್ಲವೆಂದೂ ಮನವರಿಕೆಯಾಗುತ್ತದೆ. ಹೀಗೆ ರಾಜ್ಯದ ಹಿತವನ್ನು ಕಾಪಾಡುತ್ತ ಜನಪ್ರಿಯ ಮುಖ್ಯಮಂತ್ರಿ ಎನಿಸಿದ ಕೆಲವೇ ಕೆಲವರಲ್ಲಿ ಕೆಂಗಲ್ ಅವರೂ ಒಬ್ಬರು. ಅಪರೂಪದ ಛಾಯಾ ಚಿತ್ರಗಳು ಅವರ ಬದುಕಿನ ಅಪೂರ್ವ ಕ್ಷಣಗಳನ್ನು ಸೆರೆಹಿಡಿದು ಈ ಪುಸ್ತಕದಲ್ಲಿ ಅವನ್ನು ನೋಡಬಹುದು.

## ಆಡು ಕನ್ನಡ ಹಾಡು ಕನ್ನಡ ಮಾತಾಡು ಕನ್ನಡವೇ

*ಕೆ. ವಿ. ತಿರುಮಲೇಶ್*

**ಪುಟ : ೨೩೬** ಬೆಲೆ : ರೂ. ೧೫೦

**ಅಭಿನವ**, ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ
ವಿಜಯನಗರ, ಬೆಂಗಳೂರು - ೫೬೦ ೦೪೦

ಭಾವನೆಗಳು ಮನದೊಳಗೆ ಸೃಷ್ಟಿಯಾದಾಗ ಅದರ ವೈಭವದೊಂದಿಗಿನ ಅನುಭವವು ಇಲ್ಲಿ ಹಾಡುಗಳಾಗಿ ಹೊರಹೊಮ್ಮಿದೆ. ಪರಿಸರದಲ್ಲಿನ ಪ್ರೇಮ-ಸಕಲ ಜೀವಾತ್ಮರೊಂದಿಗಿನ ಸಂಬಂಧಗಳು ಒಂದನ್ನು ಬಿಟ್ಟು ಇನ್ನೊಂದಿಲ್ಲವೆಂಬ ಭಾವವನ್ನು ಸ್ಫುರಿಸುತ್ತವೆ. ಇಲ್ಲಿ ಮುಖ್ಯವಾಗಿ ಪರಿಗಣಿಸಲ್ಪಟ್ಟದ್ದು ಭಾವ ಪ್ರಪಂಚದಲ್ಲಿನ ಆಪ್ತತೆ ಮತ್ತು ಅದರ ಹೊರ ಹರಿವು. ಹಕ್ಕಿಗಳಿಗೆ ಹಾರಿ ಮುಗಿಯದಷ್ಟು ಆಕಾಶವಿರುವಂತೆ ಕವಿಯ ಕಲ್ಪನಾ ಪ್ರಪಂಚವೂ ಬಹಳ ವಿಶಾಲವಾದುದು. ಆತ ಭಾವನೆಗಳಿಗೆ ಸ್ವಾತಂತ್ರ್ಯ ಕೊಟ್ಟು ಅಲ್ಲಿ ಹರಡಿದ ಕಲ್ಪನಾಲೋಕದಲ್ಲಿ ವಿಹರಿಸಿ ತನ್ನನುಭವಗಳಿಗೆ ಅಕ್ಷರರೂಪ ಕೊಡುತ್ತಾನೆ – ಕವಿತೆ ಧರೆಗಿಳಿಯುತ್ತದೆ. ಇಂತಹ ೧೫೧ ಕವಿತೆಗಳು ಇಲ್ಲಿದ್ದು ಇವುಗಳನ್ನು ಕವಿ ಕೆ. ವಿ. ತಿರುಮಲೇಶ್ ರಚಿಸಿದ್ದಾರೆ. ಇವೆಲ್ಲವುಗಳಲ್ಲೂ ಸಾಮ್ಯತೆಯಿದ್ದು ಒಂದನ್ನೊಂದು ಹಿಂಬಾಲಿಸುತ್ತಿರುವಂತೆ ಪದ್ಯಗಳ ಸಾಲುಗಳಿವೆ. ಕನ್ನಡದ ಬಗ್ಗೆ ಕಳಕಳಿ, ಗೌರವ ತುಂಬಿಕೊಂಡಿರುವ ಕವಿಗೆ ಹೊರ ರಾಜ್ಯ - ಹೊರದೇಶಗಳಲ್ಲಿದ್ದಾಗಲೂ 'ಕನ್ನಡ ನನ್ನನ್ನು ಕಾಡದ ಕ್ಷಣವಿಲ್ಲ' ಎಂಬ ಅನಿಸಿಕೆ ಬಲವಾಗಿತ್ತು. ಇಂಥ ಕ್ಷಣಗಳಲ್ಲಿ ಇವರಲ್ಲಿ ಕನ್ನಡ ಕಾವ್ಯರಚನೆಯ ಬೀಜ ಮೊಳಕೆಯೊಡೆದಿರಬಹುದು. ಹೀಗೆ ಅದೀಗ ಬೆಳೆದು ಹುಲುಸಾಗಿ ಇಲ್ಲಿನ ಪದ್ಯಗಳಿಗೆ ಪ್ರೇರಣೆಯಾಗಿರಬಹುದು. ಭಾವಗೀತೆ, ಜಾನಪದ, ಮಕ್ಕಳಿಗಾಗಿ ಪದ್ಯಗಳು ಇವೆಲ್ಲ ಇಲ್ಲಿ ಸೇರಿವೆ.



## ಮಲೆಗಳಲ್ಲಿ ಮದುಮಗಳು : ಸಾಂಸ್ಕೃತಿಕ ಮುಖಾಮುಖಿ

*ಸಂ. : ರಹಮತ್ ತರೀಕೆರೆ*

**ಪುಟ : ೧೦ + ೨೬೮** ಬೆಲೆ : ರೂ. ೧೫೦

**ಪ್ರಸಾರಾಂಗ**, ನಿರ್ದೇಶಕರು, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ - ೫೮೩ ೨೭೬

ಕುವೆಂಪು ಅವರ ಪ್ರಸಿದ್ಧ ಕಾದಂಬರಿ 'ಮಲೆಗಳಲ್ಲಿ ಮದುಮಗಳು' ಹೆಚ್ಚಿನ ಕನ್ನಡಿಗರೆಲ್ಲ ಓದಿರುವ ಕೃತಿ. ಅಷ್ಟಲ್ಲದೆ ಕುವೆಂಪು ಸಾಹಿತ್ಯದ ಬಗ್ಗೆ ಪುಸ್ತಕ ರೂಪದಲ್ಲೂ ವಿಮರ್ಶಾತ್ಮಕ ಕೃತಿಗಳು ಹೆಚ್ಚಿನ ಸಂಖ್ಯೆಯಲ್ಲಿ ಬಂದಿವೆ. ಇವನ್ನೂ ಕೂಡ ಓದುಗರು ಗಮನಿಸಿದ್ದು ವಿವಿಧ ರೀತಿಯಲ್ಲಿ ಪ್ರತಿಕ್ರಿಯೆಗಳು ವ್ಯಕ್ತವಾಗಿವೆ. ಅವರ ಕೃತಿಗಳು ಅಧ್ಯಯನಯೋಗ್ಯವೆಂದು ಈಗಾಗಲೇ ಹೆಸರು ಗಳಿಸಿವೆ. ಇದರ ಮುಂದುವರಿಕೆ ಎಂಬಂತೆ ಕುವೆಂಪು ಕಾದಂಬರಿಗಳನ್ನೋದಿದ ಸುಮಾರು ಇಪ್ಪತ್ತು ಜನರನ್ನು ಕರ್ನಾಟಕದಾದ್ಯಂತ ಆಹ್ವಾನಿಸಿ ಒಂದು ಸಂವಾದ ಕಾರ್ಯಕ್ರಮವನ್ನೇರ್ಪಡಿಸಲಾಗಿತ್ತು. ಪ್ರಮುಖ ವಿಷಯ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಬಗ್ಗೆ ಅಭಿಪ್ರಾಯ, ಚರ್ಚೆ, ಸಂವಾದಗಳ ಮೂಲಕ ತಮ್ಮ ತಮ್ಮ ನಿಲುವನ್ನು ವ್ಯಕ್ತಪಡಿಸುವುದು. ಬಹಳ ಮುಕ್ತವಾಗಿ ನಡೆದ ಈ ಕಾರ್ಯಕ್ರಮದ ವಿವರಗಳನ್ನು ಅವರವರ ಮಾತುಗಳಲ್ಲೇ ಸಂಪಾದಿಸಿ ಪುಸ್ತಕರೂಪ ನೀಡಿದವರು ಶ್ರೀಯುತ ರಹಮತ್ ತರೀಕೆರೆ. ಯಾವುದನ್ನೇ ಆಗಲಿ ಮುತುವರ್ಜಿಯಿಂದ ಸಮರ್ಪಕವಾಗಿ ಕೆಲಸ ನಿರ್ವಹಿಸುವ, ಅದಕ್ಕೊಂದು ಸ್ವರ್ಣ ಸ್ಪರ್ಶ ನೀಡುವ ರಹಮತ್ ಅವರು ಈ ಪುಸ್ತಕವನ್ನು ಚೆನ್ನಾಗಿಯೇ ರೂಪಿಸಿದ್ದಾರೆ. ಅಲ್ಲದೆ ಪಾಲ್ಗೊಂಡವರು ವಿದ್ವಾಂಸರೂ ಲೇಖಕರೂ – ವಿಮರ್ಶಕರೂ ಆಗಿರುವುದರಿಂದ ಕೃತಿಯ ಮೌಲ್ಯ ಇನ್ನಷ್ಟು ಹೆಚ್ಚಿದೆ. ಒಂದು ಕೃತಿಯ ಆರೋಗ್ಯಕರ ನಿಲುವಿನ ತುಲನಾತ್ಮಕ ಮೌಲ್ಯಮಾಪನವೇ ಇಲ್ಲಿದೆ.

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

## ಸಾದರ ಸ್ವೀಕಾರ

**ಬೇರು, ಗಿಡ ಮತ್ತು ಎಲೆ** (ವಿಮರ್ಶಾ ಸಂಕಲನ)
ಹಣಮಂತ ತಾಸಗಾಂವಕರ
**ಪುಟ : ೮೦** **ಬೆಲೆ : ರೂ. ೬೦**

**ಬಯಲ ಬಾನು** (ಕಾದಂಬರಿ) ಹಣಮಂತ ತಾಸಗಾಂವಕರ
**ಪುಟ : ೧೦೪** **ಬೆಲೆ : ರೂ. ೭೫**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಕಲಾ ಪ್ರಕಾಶನ**, ನಂ. ೨, ೨ನೇ ಅಡ್ಡರಸ್ತೆ, ಮುನೇಶ್ವರ ಬ್ಲಾಕ್, ರಾಜಮಹಲ್ ಗುಟ್ಟಹಳ್ಳಿ, ಬೆಂಗಳೂರು - ೩

**ಬೆಂಗಳೂರು ಕೆಂಪೇಗೌಡ** (ಜೀವನ ವೃತ್ತಾಂತ)
ಪ್ರೊ|| ಡಿ. ಲಿಂಗಯ್ಯ
**ಪುಟ : ೮೮** **ಬೆಲೆ : ರೂ. ೫೦**
**ದಿನಕರ ಪ್ರಕಾಶನ**, ೬೯೦, ೭ನೇ ಬ್ಲಾಕ್, ೨ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

**ಬಯಲ ಬಾನಿನಲ್ಲಿ** (ಮುಕ್ತಕಗಳು) ಆಚಾರ್ಯ ರೂಪಚಂದ್ರ
ಅನು : ಡಾ|| ಪಂಚಾಕ್ಷರಿ ಹಿರೇಮಠ
**ಪುಟ : ೭೨** **ಬೆಲೆ : ರೂ. ೪೦**
**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿ ನಗರ, ಬಳ್ಳಾರಿ - ೫೮೩ ೧೦೩

**ರಂಗ ಬಹಿರಂಗ** (ಅಂಕಣ ಬರಹಗಳು) ಸಂಗಮೇಶ ಉಪಾಸೆ
**ಪುಟ : ೧೩೬** **ಬೆಲೆ : ರೂ. ೭೫**

**ಬೆಂಕಿ** (ನಾಟಕ) ಸಂಗಮೇಶ ಉಪಾಸೆ
**ಪುಟ : ೯೨** **ಬೆಲೆ : ರೂ. ೬೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಮೇಘ ಪಬ್ಲಿಕೇಷನ್ಸ್**, ನಂ. ೧೧೯, ೪ನೇ ಅಡ್ಡರಸ್ತೆ, ರಾಜಗೋಪಾಲನಗರ, ಬೆಂಗಳೂರು - ೫೮

**ದೇವರು ಎಂಬ ಸಂಕೇತ ನಾಮ** ಮಣಿ ಭೌಮಿಕ್
ಅನು : ಕೆ. ಪುಟ್ಟಸ್ವಾಮಿ
**ಪುಟ : ೨೨೪** **ಬೆಲೆ : ರೂ. ೧೦೦**

**ಆಷಾಢದ ಒಂದು ದಿನ** (ನಾಟಕ) ಮೋಹನ್ ರಾಕೇಶ್
ಅನು : ಸಿದ್ಧಲಿಂಗ ಪಟ್ಟಣಶೆಟ್ಟಿ
**ಪುಟ : ೧೦೪** **ಬೆಲೆ : ರೂ. ೫೦**

**ಜೀವನ ರಹಸ್ಯ** (ಅಣುಜೀವ ವಿಜ್ಞಾನದ ಸ್ಥೂಲ ಪರಿಚಯ)
ನಾಗ ಐತಾಳ
**ಪುಟ : ೩೧೮** **ಬೆಲೆ : ರೂ. ೨೫೦**
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಅಭಿನವ**, ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦

**ಹಣತೆ** (ದೀಪಾವಳಿ ವಿಶೇಷಾಂಕ - ೨೦೧೦)
**ಪುಟ : ೩೪೩** **ಬೆಲೆ : ರೂ. ೨೦೦**
**ಸಾಹಿತ್ಯಕ, ಸಾಂಸ್ಕೃತಿಕ ಜಗಲಿ**, ಉತ್ತರ ಕನ್ನಡ, ಅಗ್ರಹಾರ, ಹಳದೀಪುರ - ೫೮೧ ೩೨೭

**ವಿವೇಕಾನಂದ ಚಿಂತನ** (ಉಪನ್ಯಾಸಗಳ ಸಂಗ್ರಹ)
ಸಂ. : ಡಾ|| ಜಯಪ್ರಕಾಶ ಮಾವಿನಕುಳಿ
**ಪುಟ : ೧೧೮** **ಬೆಲೆ : ರೂ. ೭೫**
**ಸ್ವಾಮಿ ವಿವೇಕಾನಂದ ಅಧ್ಯಯನ ಕೇಂದ್ರ**, ಶ್ರೀ ಭುವನೇಂದ್ರ ಕಾಲೇಜು, ಕಾರ್ಕಳ - ೫೭೪ ೧೦೪

**ನಗ್ನತೆಯ ಭವ್ಯಗುಡಿ ಮತ್ತು ಚಡ್ಡಿಗೆ ಹೆದರದವರು**
(ಪ್ರಬಂಧ ಸಂಕಲನ) ಶಾಂತಾರಾಮ ಸೋಮಯಾಜಿ
**ಪುಟ : ೨೦೦** **ಬೆಲೆ : ರೂ. ೧೦೦**
**ಸಾಹಿತ್ಯ ನಂದನ**, ನಂ. ೯, ೪ನೇ 'ಇ' ವಿಭಾಗ, ೧೦-ಎ ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

**ಜೇನುನೊಣದ ಕೆಮ್ಮು** (ಪ್ರೌಢ ಮಕ್ಕಳ ಕಥೆ)
ಶಾಂತಾರಾಮ ಸೋಮಯಾಜಿ
**ಪುಟ : ೯೧** **ಬೆಲೆ : ರೂ. ೫೦**
**ವಸಂತ ಪ್ರಕಾಶನ**, ನಂ. ೩೬೦, ೧೦ನೇ 'ಬಿ' ಮುಖ್ಯರಸ್ತೆ, ೩ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೧೧

**ಅಮೂಲ್ಯ ರತ್ನ** (ಮಕ್ಕಳ ಕಥಾ ಸಂಕಲನ) ವಿ. ಗಣೇಶ್
**ಪುಟ : ೭೬** **ಬೆಲೆ : ರೂ. ೭೦**
**ಆಕಾಶ ಪ್ರಕಾಶನ**, ನಂ. ೫೬, ಚಾಮರಾಜಪೇಟೆ, ಸಾಗರ - ೫೭೭ ೪೦೧, ಶಿವಮೊಗ್ಗ ಜಿಲ್ಲೆ

**ಇತಿಹಾಸ ದರ್ಪಣ** (ತ್ರೈಮಾಸಿಕ) ಸಂ.: ಹಂ. ಗು. ರಾಜೇಶ್
**ಪುಟ : ೪೪** **ವಾರ್ಷಿಕ ಚಂದಾ ಬೆಲೆ : ರೂ. ೮೦**
**ಇತಿಹಾಸ ದರ್ಪಣ**, ನಂ. ೩೩ಎ, ಐಟಿಐ ಕಾಲೇಜ್ ಹತ್ತಿರ, ವಿಶ್ವನೀಡಂ ಅಂಚೆ, ಬೆಂಗಳೂರು - ೫೬೦ ೦೯೧

# 'ಎಂಡೋವಾಸ್ಕುಲರ್ ತಂತ್ರಜ್ಞಾನ'

- 'ಲಕ್ವ'ಕ್ಕೆ ಅಪೂರ್ವ ಚಿಕಿತ್ಸಾ ವಿಧಾನ




"ಎಂಡೋವಾಸ್ಕುಲರ್ ತಂತ್ರಜ್ಞಾನ" – 'ಲಕ್ವ'ಕ್ಕೆ ಅಪೂರ್ವ ಚಿಕಿತ್ಸಾ ವಿಧಾನ. ಲಕ್ವ ಅಥವಾ ಪಾರ್ಶ್ವವಾಯುವಿನ ಹೊಡೆತ ಬಗ್ಗೆ ಸರಳವಾಗಿ ಹೇಳಬೇಕು ಅಂದರೆ, ಶರೀರದ ಒಂದು ಬದಿಯ ಅವಯವಗಳು ಸಂಪೂರ್ಣವಾಗಿ ನಿಯಂತ್ರಣ ಕಳೆದುಕೊಳ್ಳುವುದು ಅಥವಾ ಸೊಂಟದಿಂದ ಮೇಲ್ಭಾಗ ಇಲ್ಲವೇ ಕೆಳಭಾಗದ ಅಂಗಾಂಗಗಳಲ್ಲಿ ನಿಶ್ಶಕ್ತಿ, ದೃಷ್ಟಿ ಕಳೆದುಕೊಳ್ಳುವುದು, ಮಾತನಾಡಲು ಆಗದಿರುವುದು. ಹೀಗೆ ಎಲ್ಲವೂ ಆಗಿ ಮರಣದೆಡೆಗೆ ಸಾಗುವುದು.

ಜಾಗತಿಕ ಮಟ್ಟದಲ್ಲಿ ಲಕ್ವ ಎನ್ನುವುದು ಮಾನವ ಜೀವಕ್ಕೆ ಸಂಚಕಾರ ತರುವ ಮೂರನೇ ರೋಗ. ಮೊದಲ ಎರಡು ಸ್ಥಾನದಲ್ಲಿ ಹೃದಯಾಘಾತ ಮತ್ತು ಕ್ಯಾನ್ಸರ್‌ಗಳಿವೆ. 1983ರಿಂದ ಈಚೆಗೆ ಗಮನಿಸಿದರೆ, ಪ್ರತಿವರ್ಷ ಒಂದು ಲಕ್ಷ ಜನಸಂಖ್ಯೆಯಲ್ಲಿ 200 ಜನ ಲಕ್ವಕ್ಕೆ ಬಲಿಯಾಗುತ್ತಿದ್ದರು. ಅದುವೇ ಈಗ, ಲಕ್ವಕ್ಕೆ ಬಲಿಯಾಗುತ್ತಿರುವವರ ಸಂಖ್ಯೆ ಶೇಕಡಾ 30ಕ್ಕೆ ಏರಿದೆ. ಇಂದಿನ ಜಾಗತಿಕ ಪರಿಸ್ಥಿತಿಯಲ್ಲಿ, ಧೂಮಪಾನ, ವ್ಯಾಯಾಮದ ಕೊರತೆ ಮತ್ತು ಶಾರೀರಿಕ ದುಡಿಮೆಗೆ ಹೊರತಾದ ಜೀವನಶೈಲಿ ಲಕ್ವಕ್ಕೆ ಮೂಲ ಕಾರಣ. ಇತರೆ ಅಪಾಯಕಾರಿ ಅಂಶಗಳು ಎಂದರೆ ಹೆಚ್ಚಿನ ಒತ್ತಡ, ಅಧಿಕ ಕೊಲೆಸ್ಟ್ರಾಲ್ ಅಥವಾ ಕೊಬ್ಬು ಮತ್ತು ಮದ್ಯಸಾರ. ಮೆದುಳಿನ ನಿಗದಿತ ಒಂದು ಭಾಗಕ್ಕೆ ಸರಿಯಾದ ರೀತಿಯಲ್ಲಿ ರಕ್ತ ಪೂರೈಕೆ ಆಗದೇ ಹೋದಾಗ ಇಲ್ಲವೇ, ಮೆದುಳಿನ ರಕ್ತನಾಳಗಳಲ್ಲಿ ರಕ್ತ ಹೆಪ್ಪುಗಟ್ಟಿದಾಗ, ಇಲ್ಲವೇ ಮೆದುಳಿನ ಒಳಗೆ ರಕ್ತಸ್ರಾವ ಉಂಟಾದಾಗ ಕಂಡುಬರುವ ಪರಿಸ್ಥಿತಿಯೇ ಲಕ್ವ ಅಥವಾ ಪಾರ್ಶ್ವವಾಯುವಿನ ಹೊಡೆತ. ಇವಿಷ್ಟನ್ನು ಗಮನಿಸಿದರೆ, ಲಕ್ವ ಎಂದರೆ ಮೆದುಳಿಗೆ ರಕ್ತಪೂರೈಕೆಯಲ್ಲಿ ಕೊರತೆ ಕಂಡುಬಂದಾಗ ಉಂಟಾಗುವ ಪರಿಸ್ಥಿತಿ ಎಂಬುದು ಸ್ಪಷ್ಟವಾಗಿ ಮನವರಿಕೆಯಾಗುತ್ತದೆ.



ಸಾಮಾನ್ಯವಾಗಿ, ಪ್ರತಿ 100 ಮಿಲಿಗ್ರಾಂ ಮೆದುಳಿಗೆ 50ರಿಂದ 55 ಎಂಎಲ್‌ನಷ್ಟು ರಕ್ತ ಪ್ರತಿ ನಿಮಿಷ ಪೂರೈಕೆ ಆಗುತ್ತಿರುತ್ತದೆ. ಈ ರಕ್ತದ ಮೂಲಕ ಅಗತ್ಯ ಪೋಷಕಾಂಶ ಮತ್ತು ಆಮ್ಲಜನಕ ಮೆದುಳಿಗೆ ಪೂರೈಕೆ ಆಗುತ್ತದೆ. ಈ ಪ್ರಮಾಣದಲ್ಲಿ ಶೇಕಡ 25ರಷ್ಟು ಕಡಿಮೆ ಆದರೂ, ಕೂಡಲೇ ಮೆದುಳಿನ ಜೀವಕೋಶಗಳು ಸಾಯಲಾರಂಭಿಸುತ್ತವೆ. ಹೀಗೆ ಸಾಯಲಾರಂಭಿಸಿದ ಅದೇ ಹೊತ್ತಿಗೆ ಮತ್ತೆ ರಕ್ತದ ಪೂರೈಕೆ ಸರಿಯಾದಲ್ಲಿ, ಮೆದುಳಿನ ಜೀವಕೋಶಗಳು ನಿಧಾನವಾಗಿ ಚೇತರಿಸಿಕೊಂಡು ಮತ್ತೆ ಮೊದಲಿನಂತೆ ಕೆಲಸ ಮಾಡಲು ಆರಂಭಿಸುತ್ತವೆ. ಹೃದಯದಿಂದ ಪಂಪ್ ಆಗಿ ಹೊರಬರುವ ರಕ್ತ ಕುತ್ತಿಗೆ ಸಮೀಪದ ರಕ್ತನಾಳದಲ್ಲಿ ಅಥವಾ ಅಪಧಮನಿಯಲ್ಲಿ ಹೆಪ್ಪುಗಟ್ಟಿ ಅಡಚಣೆ ಉಂಟಾದಾಗ ಮೆದುಳಿಗೆ ರಕ್ತಪೂರೈಕೆಯಲ್ಲಿ ಕೊರತೆ ಉಂಟಾಗುತ್ತದೆ. ಇಂತಹ ಸಂದರ್ಭದಲ್ಲಿ, ಮೆದುಳಿನ ರಕ್ತಪೂರೈಕೆ ಮರುಸ್ಥಾಪನೆಗೆ ಇರುವ ಡೆಡ್‌ಲೈನ್ ಕೇವಲ 6 ಗಂಟೆ. ಈ ಅವಧಿಯನ್ನು **"ಗೋಲ್ಡನ್ ಪೀರಿಯಡ್ ಆಫ್ ಸಿಕ್ಸ್ ಅವರ್ಸ್"** ಅಥವಾ **"ಆರು ಗಂಟೆಗಳ ಸುವರ್ಣಾವಕಾಶ"** ಎಂದೇ ಹೇಳಲಾಗುತ್ತದೆ.

**ಲಕ್ವದ ಸಾಮಾನ್ಯ ಗುಣಲಕ್ಷಣಗಳು**

*ಒಂದು ಭಾಗದ ಕೈ ಅಥವಾ ಕಾಲಿನಲ್ಲಿ ಶಕ್ತಿ ಹೀನತೆ, ಇಲ್ಲವೇ ಶರೀರದ ಒಂದು ಭಾಗ ಸಂಪೂರ್ಣ ಸ್ವಾಧೀನ ತಪ್ಪಿದಂತಾಗುವುದು, ಇದ್ದಕ್ಕಿದ್ದಂತೆ ಪ್ರಜ್ಞೆ ಕಳೆದುಕೊಳ್ಳುವುದು, ಮೊದಲಸಲ ಕಂಡುಬಂದ ಫಿಟ್ಸ್ ಅಥವಾ ಮೂರ್ಛೆರೋಗ, ಮುಖದ ಒಂದು ಭಾಗ ತಿರುವಿದಂತಾಗಿ ವಿರೂಪಗೊಳ್ಳುವುದು, ಜೊಲ್ಲು ಸುರಿಯುವುದು, ನಡೆಯುವಾಗ ನಿಯಂತ್ರಣ ತಪ್ಪುವುದು, ಮಾತು ನಿಂತುಹೋಗುವುದು ಅಥವಾ ಇದ್ದಕ್ಕಿದ್ದಂತೆ ದೃಷ್ಟಿಹೀನವಾಗುವುದು.*

ಇಲ್ಲಿ ಹೇಳಿದ ಯಾವುದೇ ಗುಣಲಕ್ಷಣಗಳು ಕಂಡುಬಂದಲ್ಲಿ, ಕೂಡಲೇ ಆಸ್ಪತ್ರೆಗೆ ದಾಖಲಾಗಬೇಕು. ಯಾಕೆಂದರೆ ಅದು, ಹೃದಯಾಘಾತ (ಹಾರ್ಟ್ ಅಟ್ಯಾಕ್)ದಷ್ಟೇ ಅಪಾಯ ತಂದೊಡ್ಡುವ ಮೆದುಳಿನ ಆಘಾತ (ಬ್ರೈನ್ ಅಟ್ಯಾಕ್). ಈ ಗುಣಲಕ್ಷಣಗಳನ್ನು ಸುಲಭವಾಗಿ ನೆನಪಿಟ್ಟುಕೊಳ್ಳಲು ಆಂಗ್ಲಭಾಷೆಯಲ್ಲಿ FAST ಎಂದು ಹೇಳುತ್ತಾರೆ. ಎಫ್–ಎಂದರೆ, ಫೇಷಿಯಲ್ ಡಿಸ್‌ಫಿಗರ್‌ಮೆಂಟ್ (ಮುಖ ವಿಕಾರಗೊಳ್ಳುವುದು). ಎ–ಎಂದರೆ ಆರ್ಮ್ (ಕೈ) ತನ್ನ ಸ್ವಾಧೀನತೆ ಕಳೆದುಕೊಂಡಿರುವುದು, ಎಸ್–ಎಂದರೆ ಸ್ಪೀಚ್ (ಮಾತು–ಲಕ್ವ ಹೊಡೆದವರಿಗೆ ತಕ್ಷಣಕ್ಕೆ ಮಾತು ಬರದು), ಟಿ–ಎಂದರೆ ಟೈಮ್ – ಸಮಯ ಹಾಳು ಮಾಡದೇ ಕೂಡಲೇ ಆಸ್ಪತ್ರೆಗೆ ದಾಖಲಿಸಬೇಕು ಯಾಕೆಂದರೆ, **"ಟೈಮ್ ಈಸ್ ಬ್ರೈನ್"**.

ಲಕ್ವ ಹೊಡೆದವರನ್ನು ಅಥವಾ ಪಾರ್ಶ್ವವಾಯು ಪೀಡಿತರನ್ನು

ಜಾಹೀರಾತು

ತಕ್ಷಣವೇ ಅಂದರೆ, ಸುವರ್ಣ ಅವಕಾಶದ ಆರು ಗಂಟೆಗಳ ಅವಧಿಯಲ್ಲೇ ಆಸ್ಪತ್ರೆಗೆ ದಾಖಲಿಸಿದರೆ, ರೋಗ ಗುಣಪಡಿಸಲು ವಿಭಿನ್ನ ಅವಕಾಶ ಇರುತ್ತದೆ.

**ಅವಕಾಶ 1** – ಹೆಪ್ಪುಗಟ್ಟಿದ ರಕ್ತವನ್ನು ಕರಗಿಸುವ ಔಷಧವನ್ನು ಕೈಯ ಹೊರಭಾಗದಿಂದಲೇ ರಕ್ತನಾಳ (ಅಭಿಧಮನಿ)ಕ್ಕೆ ಸೇರಿಸಬಹುದು.

**ಅವಕಾಶ 2** – ಮೆದುಳಿನ ಯಾವಭಾಗದಲ್ಲಿ ರಕ್ತ ಹೆಪ್ಪುಗಟ್ಟಿದೆ ಎಂಬುದನ್ನು ಪರಿಶೀಲಿಸಿ ಅಲ್ಲಿಗೇ ನೇರವಾಗಿ ಹೆಪ್ಪುಗಟ್ಟಿದ ರಕ್ತವನ್ನು ಕರಗಿಸುವ ಔಷಧವನ್ನು ನೀಡಬಹುದು.

**ಅವಕಾಶ 3** – ಪೆನುಂಬ್ರಾ ಎಂಬ ನಳಿಕೆಯ ಮೂಲಕ ಅಪಧಮನಿಯಲ್ಲಿ ಹೆಪ್ಪುಗಟ್ಟಿದ ರಕ್ತವನ್ನು ಹೀರಿ ಹೊರ ತೆಗೆದು ರಕ್ತ ಪೂರೈಕೆಯನ್ನು ಮರುಸ್ಥಾಪಿಸಬಹುದು.

**ಅವಕಾಶ 4** – ಹೆಪ್ಪುಗಟ್ಟಿದ ರಕ್ತವನ್ನು ಸ್ಟೆಂಟ್ ಮೂಲಕ ಹೊರತೆಗೆದು ಶರೀರಕ್ಕೆ ಪುನಃ ರಕ್ತ ಪೂರೈಸುವುದು.

ಇವೆಲ್ಲವೂ ಮೆದುಳಿಗೆ ರಕ್ತಪೂರೈಸುವಲ್ಲಿ ಪರಿಣಾಮಕಾರಿ ಪದ್ಧತಿಗಳು. ಆ ಮೂಲಕ ಮೆದುಳಿನ ಕಾರ್ಯಕ್ಷಮತೆಯನ್ನು ಉಳಿಸಿ ಕೊಳ್ಳುವುದು ಅಂದರೆ ಜೀವ ಉಳಿಸುವುದು. ಆದರೆ, ಇವೆಲ್ಲವೂ ಲಕ್ವ ಹೊಡೆದವರನ್ನು ಆರು ಗಂಟೆಯ ಒಳಗಾಗಿ ಆಸ್ಪತ್ರೆಗೆ ದಾಖಲಿಸಿದರೆ ಮಾತ್ರ ಸಾಧ್ಯ. ಆರು ಗಂಟೆ ಒಳಗೆ ಆಸ್ಪತ್ರೆಗೆ ದಾಖಲಿಸದೇ ಹೋದರೆ, ಮೆದುಳಿನ ಜೀವಕೋಶಗಳು ಸಾಯ ತೊಡಗುತ್ತವೆ. ಅದಕ್ಕೆ ಚೇತರಿಕೆ ಕೊಡುವುದು ಅಸಾಧ್ಯದ ಮಾತಾಗುತ್ತದೆ. ಕುತ್ತಿಗೆ ಭಾಗದ ರಕ್ತನಾಳಗಳಲ್ಲಿ ರಕ್ತ ಹೆಪ್ಪುಗಟ್ಟಿರುವುದು ಕಂಡುಬಂದರೆ, ಆಂಜಿಯೋಪ್ಲಾಸ್ಟಿ ಮತ್ತು ಸ್ಟೆಂಟ್ ಮೂಲಕ ಇದನ್ನು ವಾಸಿ ಮಾಡಬಹುದು. ತೊಡೆ ಸಂದಿನ ರಕ್ತನಾಳದಲ್ಲಿ ಸಣ್ಣ ತೂತು ಮಾಡುವ ಮೂಲಕ ಈ ಚಿಕಿತ್ಸೆ ನೀಡಬಹುದು. ಇದಕ್ಕೆ ಬೇರೆ ಶಸ್ತ್ರಚಿಕಿತ್ಸೆಯ ಅಗತ್ಯ ಇಲ್ಲ. ಈ ಚಿಕಿತ್ಸೆಯ ಗುಣ ಏನು ಅಂದರೆ, ಲಕ್ವ ಹೊಡೆದ ವ್ಯಕ್ತಿ ಮೊದಲಿನಂತೆ ಯಾರದೇ ಸಹಾಯವಿಲ್ಲದೇ ತನ್ನ ಕೆಲಸ ತಾನೇ ಮಾಡಿಕೊಳ್ಳುವ ಸಾಮರ್ಥ್ಯ ಮತ್ತೆ ಪಡೆಯುತ್ತಾನೆ. ಕೆಲವೊಮ್ಮೆ ಜೀವದಾನ ಪಡೆಯಬಹುದು. ಅದೇ ರೀತಿ, ವ್ಯಕ್ತಿ ಕುಟುಂಬದ ಆಧಾರಸ್ತಂಭವಾಗಿದ್ದಲ್ಲಿ ಎಲ್ಲವೂ ಅತ್ಯಂತ ಪ್ರಾಮುಖ್ಯತೆ ಪಡೆಯುತ್ತದೆ. ತಂತ್ರಜ್ಞಾನ ಅಭಿವೃದ್ಧಿ ಹೊಂದುತ್ತಿರುವ ಈ ಕಾಲದಲ್ಲಿ, ಸೂಕ್ತ ಸಮಯದಲ್ಲಿ ಆಸ್ಪತ್ರೆಗೆ ದಾಖಲಿಸಲ್ಪಟ್ಟರೆ, ಲಕ್ವ ಹೊಡೆದವರು ಕೂಡ ಗುಣಮುಖರಾಗಿ ಎಂದಿನಂತಾಗಬಹುದು. ವ್ಯಕ್ತಿಗೆ ಆಗುವ ವೈಯಕ್ತಿಕ ನಷ್ಟವನ್ನು ಹಾಗೆಯೇ ಕುಟುಂಬಕ್ಕೆ ಮತ್ತು ದೇಶಕ್ಕೆ ಆಗುವ ಮಾನವ ಸಂಪನ್ಮೂಲದ ನಷ್ಟವನ್ನು ಕೂಡಾ ತಡೆಯಬಹುದು.

**ಡಾ. ರವೀಂದ್ರ ಕಾಂಬ್ಳೆ,** ಎಂಡಿ, ಡಿಎನ್‌ಬಿ, ಡಿಎಂ,
ನ್ಯೂರೋರೇಡಿಯಾಲಜಿ, ಕನ್ಸಲ್ಟಂಟ್ ಇಂಟರ್‌ವೆನ್ಷನಲ್
ರೇಡಿಯಾಲಜಿಸ್ಟ್, ವಿಕ್ರಂ ಆಸ್ಪತ್ರೆ, ಬೆಂಗಳೂರು




VIKRAM
Humble | Humane | Honest

sono wand

removing a tumour in totality

A BOON TO PATIENTS WITH BRAIN TUMOURS

FULL CURE
grade 1 stage tumours

EXTENDED LIFE
grade 4 stage tumours

for appointments:
☎: +91-99000 14820
on millers road, bengaluru. ☎: +91-80-4500 4500



toll free
1800-123-4500



ನಭಾವಲೋಕನ

# ಯುತಿ - ವಿಯುತಿ

ಗ್ರಹಗಳ ನಿರಂತರ ಚಲನೆಯ ಕಾರಣ ಉಂಟಾಗುವ ವೈವಿಧ್ಯಮಯ ಖಗೋಳ ಘಟನೆಗಳಿಗೆ ಈ ತಿಂಗಳಲ್ಲಿ ಮೂರು ಉದಾಹರಣೆಗಳಿವೆ. ಸಂಜೆಯ ಆಕಾಶದಲ್ಲಿ ಕಾಣುತ್ತಿದ್ದ ಬುಧ ೭ನೇ ತಾರೀಖಿನಿಂದ ಹಿನ್ನಡೆ ಆರಂಭಿಸುತ್ತದೆ. ಅಂದರೆ ದಿಗಂತದಿಂದ ಕೆಳಗಿಳಿಯಲು ಆರಂಭಿಸುತ್ತದೆ. ವಾಸ್ತವದಲ್ಲಿ ಇದು ಸೂರ್ಯನಿಗೂ ನಮಗೂ ಮಧ್ಯೆ ಹಾದುಹೋಗುತ್ತದೆ. ಆದರೆ ಸೂರ್ಯನ ದಕ್ಷಿಣದಿಂದ ಹಾದುಹೋಗುವುದರಿಂದ ಇದು ಗ್ರಹಣ ಅಥವಾ ಸಂಕ್ರಮದಂತೆ ಕಾಣುವುದಿಲ್ಲ. ೧೭ರಂದು ಸೂರ್ಯನಿಂದ ನಾಲ್ಕೂವರೆ ಡಿಗ್ರಿ ದಕ್ಷಿಣಕ್ಕೆ ಇರುತ್ತದೆ. ಸೂರ್ಯನ ಈ ಸಾನ್ನಿಧ್ಯದ ನೋಟ ನಮಗಿಲ್ಲ. ಇನ್ನೊಂದು ಗ್ರಹ ಶುಕ್ರ ಬೆಳಗಿನ ಆಕಾಶದಿಂದ ಸಂಜೆಗೆ ಬರುತ್ತಿದೆ. ಅಂದರೆ ಸೂರ್ಯನ ಆಚೆ ಬದಿಯಿಂದ ಹಾದುಹೋಗುತ್ತದೆ. ಇದು ಸೂರ್ಯನ ಉತ್ತರಕ್ಕೆ ೧ ಡಿಗ್ರಿ ಅಂತರದಲ್ಲಿ ೧೬ರಂದು ಹಾದುಹೋಗುತ್ತದೆ. ಈ ನೋಟವೂ ನಮಗೆ ಸಿಕ್ಕುವಂತಹುದಲ್ಲ. ಆದರೆ ಇದಕ್ಕೊಂದು ಉಪಾಯವಿದೆ. ಸೋಹೋ ಎಂಬ ಬಾಹ್ಯಾಕಾಶ ನೌಕೆ ಸೂರ್ಯನನ್ನು ಸತತವಾಗಿ ವೀಕ್ಷಿಸಿ ಚಿತ್ರಗಳನ್ನು ಕಳಿಸುತ್ತದೆ. ಇದನ್ನು ಅಂತರ್ಜಾಲದಲ್ಲಿ ನೋಡಬಹುದು. (http://sohowww.nascom.nasa.gov/data/realtime-images.html) ಇದರಲ್ಲಿ LASCO C3 ಎಂಬ ಚಿತ್ರ ಸೂರ್ಯನ ಕಿರೀಟವನ್ನು ತೋರಿಸುತ್ತದೆ. ೧೫, ೧೬, ೧೭, ೧೮ ಈ ತಾರೀಖುಗಳ ಚಿತ್ರಗಳಲ್ಲಿ ನೋಡಿದಿರಾದರೆ ಎಡದಿಂದ ಬಲಕ್ಕೆ ಒಂದು ಚುಕ್ಕೆ ಸೂರ್ಯನ ಕೆಳಭಾಗದಿಂದ ಸರಿದು ಹೋಗುವುದನ್ನು, ಜೊತೆಯಲ್ಲೇ ಇನ್ನೊಂದು ಚುಕ್ಕೆ ಸೂರ್ಯನ ಮೇಲ್ಭಾಗದಿಂದ ಹಾಯುವುದನ್ನು ನೋಡಬಹುದು. ಒಟ್ಟಿನಲ್ಲಿ ಹೇಳುವುದಾದರೆ ಬರಿಗಣ್ಣಿಗೆ ಈ ಎರಡೂ ಗ್ರಹಗಳು ನೋಡಲು ಸಿಗುವುದಿಲ್ಲ. ಶುಕ್ರಕ್ಕಿಂತ ಬುಧ ಬೇಗ ಚಲಿಸುತ್ತದೆ. ಆದ್ದರಿಂದ ತಿಂಗಳ ಕೊನೆಗಾಗಲೇ ಬುಧ ಗ್ರಹ ಬೆಳಗಿನ ಜಾವ ಪೂರ್ವದ ಅಂಚಿನಲ್ಲಿ ಕಾಣಿಸಿಕೊಳ್ಳುತ್ತದೆ. ನಿಧಾನವಾಗಿ ಚಲಿಸುವ ಶುಕ್ರ ಸೆಪ್ಟೆಂಬರ್ ಕೊನೆಯ ವೇಳೆಗೆ ಸಂಜೆಯ ಆಕಾಶದಲ್ಲಿ ಕಾಣಿಸುತ್ತದೆ.

ಹೀಗೆ ಈ ಎರಡೂ ಒಳವಲಯದ ಗ್ರಹಗಳು (ಭೂ ಕಕ್ಷೆಯ ಒಳಗೆ ಇವುಗಳ ಕಕ್ಷೆಗಳಿವೆ) ಬೆಳಗಿನ ಆಕಾಶದಿಂದ ಸಂಜೆಯ ಆಕಾಶಕ್ಕೆ ಪುನಃ ಅದರ ವಿರುದ್ಧವಾಗಿ ಸ್ಥಳ ಪಲ್ಲಟ ಮಾಡಿಕೊಳ್ಳುತ್ತಲೇ ಇರುತ್ತವೆ. ಸೂರ್ಯನ ಮತ್ತು ಭೂಮಿಯ ನಡುವೆ ಹಾದು ಹೋದರೆ ಆ ಘಟನೆಗೆ ನೀಚಯುತಿ (inferior conjunction) ಎಂಬ ಹೆಸರಿದೆ. ಸೂರ್ಯನ ಆಚೆ ಬದಿಯಿಂದ ಹಾದು ಹೋದರೆ ಅಂದರೆ ಗ್ರಹ ಮತ್ತು ಭೂಮಿಯ ನಡುವೆ ಸೂರ್ಯನಿದ್ದರೆ ಅದಕ್ಕೆ ಉಚ್ಚಯುತಿ (superior conjunction) ಎಂಬ ಹೆಸರಿದೆ. ಈ ತಿಂಗಳಲ್ಲಿ ಈ ಎರಡೂ ಘಟನೆಗಳ ಉದಾಹರಣೆಗಳು ಒಂದು ದಿನದ ಅವಧಿಯಲ್ಲಿ ನಡೆಯುತ್ತಿರುವುದೇ ವಿಶೇಷ. ಅದನ್ನು ಅಂತರ್ಜಾಲದ ಮೂಲಕ ಸೋಹೋ ಒದಗಿಸುತ್ತಿರುವುದು ಇನ್ನೊಂದು ವಿಶೇಷ.



*೨೦ ಆಗಸ್ಟ್ ಗುರು - ಚಂದ್ರ ಜೋಡಿ*

ಹೊರವಲಯದ ಗ್ರಹಗಳಲ್ಲಿ ಬೇರೊಂದು ಬಗೆಯ ಘಟನೆ ನಡೆಯಬಹುದು. ಉದಾಹರಣೆಗೆ ಗುರು ಮತ್ತು ಸೂರ್ಯರ ನಡುವೆ ಭೂಮಿ ಬರಬಹುದು. ಇದಕ್ಕೆ ವಿಯುತಿ ಎಂದು ಹೆಸರು. ಈ ಗ್ರಹಗಳು ಭೂಮಿಗಿಂತ ನಿಧಾನವಾಗಿ ಚಲಿಸುವುದರಿಂದ ವರ್ಷಕ್ಕೊಮ್ಮೆಯಾದರೂ ಭೂಮಿ ಇವನ್ನು ಹಿಂದೆ ಹಾಕಿ ಮುಂದೆ ಓಡುತ್ತದೆ. ಸಮೀಪದ ಮಂಗಳ ಗ್ರಹಕ್ಕೆ ಮಾತ್ರ ಇದು ಸುಮಾರು ಎರಡು ವರ್ಷಗಳಿಗೊಮ್ಮೆ ನಡೆಯುವುದು. ಅಕ್ಟೋಬರ್‌ನಲ್ಲಿ ಗುರುಗ್ರಹವನ್ನು ಹಿಂದೆ ಹಾಕಿ ಭೂಮಿ ಓಡುವುದರ ಕುರುಹಾಗಿ ಈ ತಿಂಗಳಲ್ಲಿ ಗುರುಗ್ರಹದ ಹಿನ್ನಡೆ ಆರಂಭವಾಗುತ್ತದೆ. ಮುಂದಿನ ಎರಡು-ಮೂರು ತಿಂಗಳು ಅದು ನಕ್ಷತ್ರಗಳ ಹಿನ್ನೆಲೆಯಲ್ಲಿ ವಿರುದ್ಧ ದಿಕ್ಕಿನಲ್ಲಿ ಓಡುತ್ತಿದೆ ಎಂದು ಭಾಸವಾಗುತ್ತದೆ. ಭೂಮಿ ಅದನ್ನು ಸಮೀಪಿಸುತ್ತಿರುವುದರಿಂದ ಅದರ ಪ್ರಕಾಶ ಕ್ರಮೇಣ ಹೆಚ್ಚುತ್ತದೆ.

ಸಂಜೆಯ ಆಕಾಶದಲ್ಲಿ ಶನಿ ಕಾಣಿಸಿಕೊಂಡರೆ ಮಂಗಳ ಬೆಳಗಿನ ಜಾವ ಕಾಣಿಸುತ್ತದೆ. ಮಂಗಳ ವೃಷಭದಿಂದ ಮಿಥುನಕ್ಕೆ ಸಾಗುವಾಗ ಪುನರ್ವಸು ಜೋಡಿಯೊಡನೆ ಸೇರುವುದನ್ನು ಕಾಣಬಹುದು.

ಆಗಸ್ಟ್ ೧೨ರಂದು ಪರ್ಸಿಯೈಡ್ ಉಲ್ಕಾವೃಷ್ಟಿ ಇದೆ. ಹಿಂದೆ ಬಂದು ಹೋದ ಸ್ವಿಫ್ಟ್ ಟಟಲ್ ಎಂಬ ಧೂಮಕೇತುವಿನ ಕಕ್ಷೆಯನ್ನು ಭೂಮಿ ಅಂದು ಸಮೀಪಿಸುತ್ತದೆ. ಅಲ್ಲಿ ಹರಡಿಕೊಂಡಿರುವ ಧೂಮಕೇತುವಿನ ಧೂಳು ಭೂಮಿಯತ್ತ ಧಾವಿಸಿ ಬಂದು ಬೀಳುತ್ತವೆ. ಅವು ಆಕಾಶದಲ್ಲಿ ಉರಿದು ಹೋಗುವುದರಿಂದ ನಮಗೆ ಬೆಳಕಿನ ತುಣುಕೊಂದು ಬಿದ್ದ ಹಾಗೆ ಕಾಣುತ್ತದೆ. ಆ ದಿನ ಚಂದ್ರನ ಪ್ರಕಾಶ ಹೆಚ್ಚು; ಆದ್ದರಿಂದ ಉಲ್ಕಾವೃಷ್ಟಿ ಅಷ್ಟೇನೂ ಆಕರ್ಷಕವಾಗಿ ಕಾಣಲಾರದು.

ಆಗಸ್ಟ್ ತಿಂಗಳಲ್ಲಿ ಮಳೆ ಮೋಡ ಬಿಡುವು ಕೊಡುವ ಅವಕಾಶ ಕಡಿಮೆ. ಹಾಗೊಮ್ಮೆ ಸಿಕ್ಕಿದಾಗ ಮಟಮಟ ಮಧ್ಯಾಹ್ನ ನಿಮ್ಮ ನೆರಳನ್ನು ನೋಡಿಕೊಳ್ಳಿ. ತಿಂಗಳ ಯಾವುದೋ ಒಂದು ದಿನ ಬಿಸಿಲಿದ್ದರೂ ಮಧ್ಯಾಹ್ನದ ನೆರಳು ಕಾಣೆಯಾಗಿರುತ್ತದೆ ! ಆ ದಿನ ಯಾವುದು ಎಂದು ಗುರುತಿಸುವುದೇ ಒಂದು ಸವಾಲು.

ಉ
ಧ್ರುವ
ಸಪ್ತರ್ಷಿ ಮಂಡಲ
ರಾಜಹಂಸ
ವೀಣಾ
ಸಹದೇವ
ಭೀಮ
ಸ್ವಾತಿ
ಪೂ
ಗರುಡ
ಪ
ಉರಗಧರ
ಶನಿ
ಕನ್ಯಾ
ತುಲಾ
ಚಿತ್ರಾ
ಮಕರ
ಧನು
ವೃಶ್ಚಿಕ
ಕಿನ್ನರ
ತ್ರಿಶಂಕು
ದ

**ಖಗೋಳ ದಿನಚರಿ**

ಆಗಸ್ಟ್ ೨ ಬುಧಗ್ರಹದ ಹಿನ್ನಡೆ ಆರಂಭ. ಚಂದ್ರ - ಭೂಮಿ ನಡುವೆ ಕನಿಷ್ಠ ದೂರ
೪ ಶನಿ - ಚಂದ್ರ ಜೋಡಿ.
೬ ಚಾಂದ್ರಮಾಸದ ಪ್ರಥಮ ಪಾದ
೧೨ ಪರ್ಸಿಯೈಡ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೧೪ ಹುಣ್ಣಿಮೆ ೦೦ : ೨೭ಕ್ಕೆ
೧೫ ಶುಕ್ರ - ಬುಧ ಜೋಡಿ
೧೬ ಶುಕ್ರಗ್ರಹದ ಯುತಿ (ಉಚ್ಚ)
೧೭ ಬುಧಗ್ರಹದ ಯುತಿ (ನೀಚ)
೧೮ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೨೦ ಗುರು - ಚಂದ್ರ ಜೋಡಿ
೨೧ ಚಾಂದ್ರಮಾಸದ ಕೊನೆಯ ಪಾದ
೨೫ ಚಂದ್ರ - ಮಂಗಳ ಜೋಡಿ
೨೬ ಬುಧ ಗ್ರಹದ ಹಿನ್ನಡೆ ಮುಕ್ತಾಯ
೨೮ ಬುಧ - ಚಂದ್ರ ಜೋಡಿ
೨೯ ಅಮಾವಾಸ್ಯೆ ೦೮:೩೪. ಚಂದ್ರ - ಶುಕ್ರ ಜೋಡಿ
೩೦ ಗುರುಗ್ರಹದ ಹಿನ್ನಡೆ ಆರಂಭ. ಚಂದ್ರ - ಭೂಮಿ ನಡುವೆ ಕನಿಷ್ಠ ಅಂತರ
೩೧ ಶನಿ - ಚಂದ್ರ ಜೋಡಿ
ಸೆಪ್ಟೆಂಬರ್ ೩ ಬುಧ ಗ್ರಹದ ಗರಿಷ್ಠ ಕೋನೋನ್ನತಿ.

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

# ಜನಲೋಕಪಾಲ : ಶಕ್ತಿ ಮತ್ತು ಮಿತಿ

ಪ್ರೊ॥ ಬರಗೂರು ರಾಮಚಂದ್ರಪ್ಪ

ಅಣ್ಣಾ ಹಜಾರೆಯವರು - ಜನಲೋಕಪಾಲ ಕರಡನ್ನು ಆಧರಿಸಿ ಅಧಿನಿಯಮ ರೂಪಿಸಬೇಕೆಂದು ಒತ್ತಾಯಿಸಲು ಉಪವಾಸ ಕೂತಾಗ, ಅಭೂತಪೂರ್ವ ಬೆಂಬಲ ದೊರಕಿತು. ಇದಕ್ಕೆ ಕಾರಣ ಭ್ರಷ್ಟಾಚಾರ ವಿರೋಧದ ಮನಸ್ಥಿತಿಯೇ ಹೊರತು ಜನ ಲೋಕಪಾಲವನ್ನು ಕುರಿತ ತಿಳುವಳಿಕೆಯಲ್ಲ. ಯಾಕೆಂದರೆ ಬಹುಪಾಲು ಜನಕ್ಕೆ ಗೊತ್ತಿದ್ದ ವಿಷಯವೆಂದರೆ – ಅಣ್ಣಾ ಹಜಾರೆ ಸತ್ಯಾಗ್ರಹವು ಭ್ರಷ್ಟಾಚಾರದ ವಿರುದ್ಧ ಎಂದು ಮಾತ್ರ. ಅದೇನೇ ಇರಲಿ, ಭ್ರಷ್ಟಾಚಾರ ನಿರ್ಮೂಲನೆಯ ದಿಕ್ಕಿನಲ್ಲಿ ಜನಲೋಕಪಾಲದ ಕಲ್ಪನೆಯು ಒಂದು ಮುಖ್ಯ ಹೆಜ್ಜೆ ಮತ್ತು ಅಣ್ಣಾ ಹಜಾರೆಯವರ ಸತ್ಯಾಗ್ರಹವು ಒಂದು ಪ್ರಾಮಾಣಿಕ ಕ್ರಿಯೆ.

ಕೇಂದ್ರ ಸರ್ಕಾರವು ಈ ಮೊದಲು ರೂಪಿಸಿರುವ ಲೋಕಪಾಲ ಮಸೂದೆಗೂ ಅಣ್ಣಾಹಜಾರೆ ತಂಡದ ಜನಲೋಕಪಾಲ ಕರಡಿಗೂ ಸಾಕಷ್ಟು ವ್ಯತ್ಯಾಸಗಳಿವೆ. ಸರ್ಕಾರದ ಲೋಕಪಾಲ ಮಸೂದೆಯ ಪ್ರಕಾರ ಸ್ವಯಂಪ್ರೇರಿತ ಕ್ರಮ ತೆಗೆದುಕೊಳ್ಳಲು ಮತ್ತು ಸಾರ್ವಜನಿಕರಿಂದ ದೂರು ಸ್ವೀಕರಿಸಿ ಕ್ರಮ ಕೈಗೊಳ್ಳಲು ಅವಕಾಶವಿಲ್ಲ. ಸಂಸದರ ಮೇಲೆ ತನಿಖೆ ನಡೆಸಲು ಲೋಕಸಭಾಧ್ಯಕ್ಷರು ಮತ್ತು ರಾಜ್ಯಸಭಾಧ್ಯಕ್ಷರ ಒಪ್ಪಿಗೆ ಬೇಕು; ಜೊತೆಗೆ ಲೋಕಪಾಲಕ್ಕೆ ಸಲಹೆಯ ಅಧಿಕಾರವಿದೆಯೇ ಹೊರತು ನೇರ ಕ್ರಮದ ಅಧಿಕಾರವಿಲ್ಲ. ಮಂತ್ರಿಗಳ ವಿಷಯದಲ್ಲಿ ಪ್ರಧಾನಮಂತ್ರಿ, ಸಂಸದರು ಹಾಗೂ ಪ್ರಧಾನಮಂತ್ರಿಗಳ ವಿಷಯದಲ್ಲಿ ಲೋಕಸಭೆ ಹಾಗೂ ರಾಜ್ಯಸಭೆಯ ಅಧ್ಯಕ್ಷರಿಗೆ ಲೋಕಪಾಲರ ಸಲಹೆಯನ್ನು ಒಪ್ಪುವ ಅಥವಾ ಒಪ್ಪದಿರುವ ಅಧಿಕಾರವಿದೆ; ಅಲ್ಲದೆ, ಎಫ್.ಐ.ಆರ್. ದಾಖಲಿಸುವ ಅಧಿಕಾರವು ಲೋಕಪಾಲರಿಗೆ ಇರುವುದಿಲ್ಲ. ಮುಖ್ಯವಾಗಿ ಲೋಕಪಾಲರ ವ್ಯಾಪ್ತಿಗೆ ಪ್ರಧಾನಿ, ಸಂಸದರು ಮತ್ತು ಮಂತ್ರಿಗಳು ಬರುತ್ತಾರೆಯೇ ಹೊರತು ಅಧಿಕಾರಿಗಳಲ್ಲ; ನ್ಯಾಯಾಧೀಶರ ವಿರುದ್ಧದ ಭ್ರಷ್ಟಾಚಾರದ ಆರೋಪಗಳನ್ನೂ ತನಿಖೆ ಮಾಡುವಂತಿಲ್ಲ. ಭ್ರಷ್ಟ ಎಂದು ಸಾಬೀತಾದರೆ ಆರು ತಿಂಗಳಿಂದ ಏಳು ವರ್ಷದವರೆಗೆ ಶಿಕ್ಷೆ ಕೊಡಬಹುದು. ಭ್ರಷ್ಟಾಚಾರದಿಂದ ಗಳಿಸಿದ ಸಂಪತ್ತನ್ನು ವಾಪಸ್ ಪಡೆಯುವ ಪ್ರಸ್ತಾಪ ಇಲ್ಲ. ಸರ್ಕಾರದ ಲೋಕಪಾಲ ಮಸೂದೆಯಲ್ಲಿ ಇರುವ ಈ ಎಲ್ಲ ಮಿತಿಗಳನ್ನೂ ಜನಲೋಕಪಾಲ ಕರಡು ತೊಡೆದುಹಾಕಿದೆ. ಸಾರ್ವಜನಿಕರಿಂದ ದೂರು ಸ್ವೀಕರಿಸುವ,



ಸ್ವಯಂಪ್ರೇರಿತ ದೂರು ದಾಖಲಿಸಿ ತನಿಖೆ ನಡೆಸುವ, ಯಾರ ಒಪ್ಪಿಗೆಯನ್ನೂ ಪಡೆಯದೆ ಮುಂದುವರೆಯುವ, ಪ್ರಧಾನಿ, ಸಂಸದ, ಮಂತ್ರಿ, ನ್ಯಾಯಾಧೀಶ ಈ ಎಲ್ಲರ ಭ್ರಷ್ಟಾಚಾರದ ವಿಚಾರಣೆ ನಡೆಸುವ ಅಧಿಕಾರವನ್ನು ಲೋಕಪಾಲರಿಗೆ ಕೊಡಬೇಕೆಂದು ಹೇಳಲಾಗಿದೆ. ಐದು ವರ್ಷದಿಂದ ಜೀವಾವಧಿಯವರೆಗೆ ಶಿಕ್ಷೆ ನೀಡುವ ಅಧಿಕಾರ ಇದೆ. ಗರಿಷ್ಠ ಎರಡು ವರ್ಷಗಳಲ್ಲಿ ತನಿಖೆ ಮತ್ತು ವಿಚಾರಣೆ ಪೂರ್ಣಗೊಂಡು ತೀರ್ಪು ಬರಬೇಕಾದ್ದು ಕಡ್ಡಾಯವಾಗಿದೆ. ಭ್ರಷ್ಟಾಚಾರದಿಂದ ಸರ್ಕಾರಕ್ಕಾದ ನಷ್ಟವನ್ನು ಆಪಾದಿತರಿಂದಲೇ ಭರಿಸಬೇಕಾಗುತ್ತದೆ. ಹೀಗೆ ಜನಲೋಕಪಾಲ ಕರಡಿನಲ್ಲಿ ಜನಪರವಾದ ಕೆಲವು ಅಂಶಗಳಿವೆ. ಹಾಗೆಂದು ಜನಲೋಕಪಾಲವು ಪರಿಪೂರ್ಣವೆಂದು ಹೇಳಲಾಗುವುದಿಲ್ಲ.

ಸರ್ಕಾರದ ಲೋಕಪಾಲ ಮಸೂದೆ ಮತ್ತು ಅಣ್ಣಾ ಹಜಾರೆ ತಂಡದ ಜನಲೋಕಪಾಲ ಕರಡು, ಕೇವಲ ಕೇಂದ್ರ ಸರ್ಕಾರದ ವ್ಯಾಪ್ತಿಗೆ ಸಂಬಂಧಿಸಿದ್ದೇ ಹೊರತು ಇಡೀ ದೇಶದ ಎಲ್ಲ ವಲಯಗಳ ಭ್ರಷ್ಟಾಚಾರ ನಿರ್ಮೂಲನ ವ್ಯಾಪ್ತಿಯದಲ್ಲ ಎಂಬ ಅಂಶವನ್ನು ಮೊದಲು ಮನಗಾಣಬೇಕು. ಜೊತೆಗೆ, ಲೋಕಪಾಲರಿಗೆ ಸಮಗ್ರ ಅಧಿಕಾರ ನೀಡಬೇಕಾದರೆ, ಸರ್ಕಾರದ ಇತರೆ ನಿಯಮಾವಳಿಗಳೂ ತಿದ್ದುಪಡಿಗೆ ಒಳಪಡಬೇಕೆಂಬ ಅಂಶವನ್ನೂ ಅರಿಯಬೇಕು. ಉದಾಹರಣೆಗೆ, ಸರ್ಕಾರಿ ನೌಕರರಿಗೆ ಸಂಬಂಧಿಸಿದ ಸೇವಾ ನಿಯಮಗಳಲ್ಲಿ ಅವರ ವಿರುದ್ಧದ ತನಿಖೆಗೆ ಸಂಬಂಧಿಸಿದ ನಿಯಮಗಳಿವೆ. ನ್ಯಾಯಾಧೀಶರಿಗೆ ಸಂಬಂಧಿಸಿದಂತೆ ಪ್ರತ್ಯೇಕ ನಿಯಮಗಳಿರುತ್ತವೆ. ಈಗ ಅಸ್ತಿತ್ವದಲ್ಲಿ ಇರುವ ಕಾನೂನು ವ್ಯವಸ್ಥೆಯಲ್ಲಿ ಇವರೆಲ್ಲ ತಂತಮ್ಮ ಸೇವಾ ನಿಯಮಾವಳಿಯ ವ್ಯಾಪ್ತಿಗೆ ಬರುತ್ತಾರೆ. ಇವರ ವಿರುದ್ಧ ಕೈಗೊಳ್ಳುವ ಕ್ರಮಗಳು ಸೇವಾ ನಿಯಮಗಳ ವ್ಯಾಪ್ತಿಯೊಳಗೆ ಇರುತ್ತವೆ. ಹೀಗಾಗಿಯೇ ರಾಜ್ಯಗಳ ಲೋಕಾಯುಕ್ತರ ಕ್ರಮಗಳಿಂದ ನುಣುಚಿಕೊಂಡು ನಗೆಬೀರುವ ಉದಾಹರಣೆಗಳು ನಮ್ಮಲ್ಲಿ ಸಾಕಷ್ಟಿವೆ. ಆದ್ದರಿಂದ, ಜನಲೋಕಪಾಲದ ಕರಡಿನಲ್ಲಿರುವ ಕೆಲ ಅಂಶಗಳು ಅನುಷ್ಠಾನವಾಗಬೇಕಾದರೆ ಸೇವಾನಿಯಮಗಳಲ್ಲೂ ಲೋಕಪಾಲರ ಪಾತ್ರ ನಮೂದಾಗಬೇಕಾಗುತ್ತದೆ. ಅಂದರೆ ಸರ್ಕಾರಿ ವಲಯದ ಭ್ರಷ್ಟಾಚಾರ ನಿರ್ಮೂಲನೆಗಾಗಿ ಸಶಕ್ತ ಲೋಕಪಾಲದ ಜೊತೆಗೆ ಇತರ ನಿಯಮಾವಳಿಯ ತಿದ್ದುಪಡಿಗಳ ಅಗತ್ಯವಿರುತ್ತದೆ. ಅಲ್ಲವೆ ?

ಜನಲೋಕಪಾಲದ ಕರಡು ನಂಬಿರುವುದು ಪ್ರಮುಖವಾಗಿ ತನ್ನ ದೃಷ್ಟಿಕೋನದ ಬುದ್ಧಿಮತ್ತೆಯ ವಲಯವನ್ನು ಮಾತ್ರ ಎಂದು ನನಗನ್ನಿಸುತ್ತದೆ. ಜನಲೋಕಪಾಲ ಸಂಸ್ಥೆಯಲ್ಲಿ ಅಧ್ಯಕ್ಷರ ಜೊತೆಗೆ ಹತ್ತು ಜನ ಸದಸ್ಯರಿರಬೇಕೆಂದು ಹೇಳಲಾಗಿದೆ. ಇವರನ್ನು ಆಯ್ಕೆ ಮಾಡಲು ಒಂದು ಸಮಿತಿಯಿರಬೇಕೆಂದು ಸೂಚಿಸಲಾಗಿದೆ. ಈ ಆಯ್ಕೆ ಸಮಿತಿಯಲ್ಲಿ ಇಬ್ಬರು ಸುಪ್ರೀಂಕೋರ್ಟ್ ನ್ಯಾಯಾಧೀಶರು, ಇಬ್ಬರು ಹೈಕೋರ್ಟ್ ನ್ಯಾಯಾಧೀಶರು, ಆಡಿಟರ್ ಜನರಲ್, ಚುನಾವಣಾ ಆಯೋಗದ ಆಯುಕ್ತರು ಇರುವುದರ ಜೊತೆಗೆ ಭಾರತ ಮೂಲದ ಎಲ್ಲ ನೊಬೆಲ್ ಪ್ರಶಸ್ತಿ ಪುರಸ್ಕೃತರು ಮತ್ತು ಇತ್ತೀಚಿನ ಮೂವರು ಮಾಗ್ಸೆಸೆ ಪ್ರಶಸ್ತಿ ಪುರಸ್ಕೃತರು ಇರಬೇಕೆಂದು ಹೇಳಲಾಗಿದೆ. ನೊಬೆಲ್ ಮತ್ತು ಮಾಗ್ಸೆಸೆಗಳನ್ನು ಮಾನದಂಡವಾಗಿ ಸ್ವೀಕರಿಸುವ ಈ ಕರಡು, ಅಪ್ಪಿತಪ್ಪಿಯೂ ಮಹಿಳೆಯ ಬಗ್ಗೆ ಮಾತಾಡುವುದಿಲ್ಲ, ಸಂಕೀರ್ಣ ಸಮಾಜವುಳ್ಳ ನಮ್ಮ ದೇಶದ ವಿವಿಧ

ಸಾಮಾಜಿಕ ವರ್ಗಗಳ ವಿವೇಕಕ್ಕೆ ಮನ್ನಣೆ ನೀಡುವ ಸಂವಿಧಾನಾತ್ಮಕ ಆಶಯ ಕಾಣಿಸುವುದಿಲ್ಲ. ಅಷ್ಟೇ ಅಲ್ಲ, ಜನ ಲೋಕಪಾಲದಲ್ಲಿ ಪರಿಣತಿಯ ಮಾನದಂಡದ ಮೇಲೆಯೇ ಮಹಿಳೆ ಮತ್ತು ತಳ ಸಮುದಾಯಗಳಿಗೆ ಪ್ರಾತಿನಿಧ್ಯ ಕೊಡಬೇಕೆಂಬ ಸಾಮಾಜಿಕ ಆಯಾಮವಿಲ್ಲ. ಇಂದು ಭ್ರಷ್ಟಾಚಾರಕ್ಕೆ ತುತ್ತಾಗಿ ಎಲ್ಲರಿಗಿಂತ ಹೆಚ್ಚು ಶೋಷಣೆಗೆ ಒಳಗಾಗಿರುವ ವರ್ಗಗಳೆಂದರೆ - ಮಹಿಳೆ ಮತ್ತು ತಳ ಸಮುದಾಯದ ಸಾಮಾನ್ಯ ಜನವರ್ಗ ಎಂಬುದನ್ನು ಇಲ್ಲಿ ಮರೆಯಬಾರದು.

ಇನ್ನು ರಾಜಕಾರಣದ ಪ್ರಶ್ನೆ: ನಿಜ; ಇಂದು ರಾಜಕಾರಣಿಗಳಲ್ಲಿ ನೀತಿ ನಿಯತ್ತಿನ ಜನರು ತೀರಾ ವಿರಳ. ಹಾಗೆಂದು ರಾಜಕಾರಣವನ್ನೇ ನಿರಾಕರಿಸಬೇಕಾಗಿಲ್ಲ. ಸೈದ್ಧಾಂತಿಕ ರಾಜಕಾರಣದ ಅಭಾವದಿಂದ ಅನೈತಿಕ ರಾಜಕಾರಣಿಗಳು ಹೆಚ್ಚಾಗಿದ್ದಾರೆ; ನೀತಿ ನಿಯತ್ತು ರಾಜಕಾರಣಿಯ ನಡವಳಿಕೆಗೆ ಮಾತ್ರ ಸಂಬಂಧಿಸಿದ್ದಲ್ಲ; ರಾಜಕಾರಣಿಯೊಬ್ಬ ನಂಬುವ ಸಿದ್ಧಾಂತ ಮತ್ತು ಆತನ ಪಕ್ಷದ ಸಿದ್ಧಾಂತಕ್ಕೂ ಸಂಬಂಧಿಸಿದ್ದು. ಇಂದಿನ ಬಹುಪಾಲು ರಾಜಕೀಯ ಪಕ್ಷಗಳಿಗೆ ತಾವು ಹೇಳುವ ಸಿದ್ಧಾಂತಕ್ಕಿಂತ ಅನುಭವಿಸುವ ಅಧಿಕಾರ ಮುಖ್ಯವಾಗಿದೆ. ಅದಕ್ಕಾಗಿ ಯಾವ ದಾರಿಯಾದರೂ ಸರಿ ಎಂಬಂತಾಗಿದೆ. ಅಭಿವೃದ್ಧಿಯ ಹಾದಿಯೂ ಇದೇ ಮಾದರಿಯದಾಗಿದೆ. ಆದ್ದರಿಂದ ರಾಜಕಾರಣದ ಸೈದ್ಧಾಂತಿಕ ಗ್ರಹಿಕೆಯಿಲ್ಲದ ಭ್ರಷ್ಟಾಚಾರ ವಿರೋಧಿ ಹೋರಾಟ ಅಷ್ಟರಮಟ್ಟಿಗೆ ತೆಳುವಾಗುತ್ತದೆ. ಇಂತಹ ತೆಳು ತಿಳುವಳಿಕೆಗಳು ಅಣ್ಣಾ ಹಜಾರೆಯವರ ಬಾಯಿಂದ ನರೇಂದ್ರಮೋದಿಯವರ ಅಭಿವೃದ್ಧಿ ಪಥದ ಪ್ರಶಂಸೆ ಮಾಡಿಸುತ್ತವೆ; ಸಾಯಂಕಾಲದ ವೇಳೆಗೆ ಗ್ರಾಮೀಣಾಭಿವೃದ್ಧಿಗೆ ಮಾತ್ರ ತನ್ನ ಪ್ರಶಂಸೆಯೆಂದೂ ಕೋಮುವಾದಕ್ಕೆ ತಾನು ವಿರೋಧಿಯೆಂದೂ ಲಿಖಿತ ಹೇಳಿಕೆ ಹೊರಬರುತ್ತದೆ; ಮೋದಿಯವರು ಏಳು ವರ್ಷಗಳಿಂದ ಲೋಕಾಯುಕ್ತರ ನೇಮಕ ಮಾಡದೆ ಇರುವ ಅಂಶ ಮಧ್ಯೆ ನುಸುಳುತ್ತದೆ.

ಹಸಿವಿನ ಭಾಷೆ ಅರ್ಥವಾಗದ ಅಭಿವೃದ್ಧಿಯು ಬಂಡವಾಳಶಾಹಿ ಸಿದ್ಧಾಂತಕ್ಕೆ ಬದ್ಧವಾಗಿರುತ್ತದೆ; ಹೆಚ್ಚು ಪ್ರಚಾರವನ್ನೂ ಪಡೆಯುತ್ತದೆ. ನಿಜ; ಈ ದೃಷ್ಟಿಯಿಂದ 'ಮೋದಿ ಗುಜರಾತ್'ನಲ್ಲಿ ಅಭಿವೃದ್ಧಿ ಆಗುತ್ತಿರಬಹುದು. ಆದರೆ 'ಗಾಂಧಿ ಗುಜರಾತ್'ನ ಗತಿ ಏನಾಗಿದೆ ? ಈ ಪ್ರಶ್ನೆ ಹುಟ್ಟದೇ ಹೋದರೆ ರಾಜಕೀಯ ಭ್ರಷ್ಟಾಚಾರದ ವಿರೋಧಕ್ಕೆ ತನ್ನದೇ ಆದ ಮಿತಿ ಒದಗುತ್ತದೆ. ಇಲ್ಲಿ ನನಗೆ ಮೋದಿಯವರ ಅಭಿವೃದ್ಧಿಪರ-ವಿರೋಧದ ಪ್ರಶ್ನೆಗಿಂತ ಭ್ರಷ್ಟಾಚಾರದ ವಿರೋಧವು ಗಳಿಸಬೇಕಾಗಿರುವ ಸಾಮಾಜಿಕ-ರಾಜಕೀಯ ಪ್ರಜ್ಞೆಯ ಪ್ರಶ್ನೆ ಮುಖ್ಯವಾಗಿದೆ. ರಾಜಕೀಯ ಕ್ಷೇತ್ರದಲ್ಲಿ ಭ್ರಷ್ಟಾಚಾರ ತುಂಬಿ ತುಳುಕುತ್ತಿರುವುದನ್ನು ವಿರೋಧಿಸುವಾಗ ಕೇವಲ ಲಂಚದ ವಿಷಯವನ್ನಷ್ಟೇ ವಿರೋಧಿಸಿದರೆ ಸಾಲದು; ಲಂಚವನ್ನೂ ಒಳಗೊಂಡಂತೆ ರಾಜಕೀಯ ವ್ಯವಸ್ಥೆಯನ್ನೇ ಭ್ರಷ್ಟಗೊಳಿಸುತ್ತಿರುವ ಮೂಲ ಕಾರಣಗಳನ್ನು ಕಂಡುಕೊಳ್ಳಬೇಕು. ಅದಕ್ಕಾಗಿ ರಾಜಕೀಯ ಪ್ರಜ್ಞೆ ಬೇಕು. ರಾಜಕೀಯ ಪ್ರಜ್ಞೆಯೆಂದರೆ ರಾಜಕೀಯ ಪಕ್ಷವಲ್ಲ; ಸಕ್ರಿಯ ರಾಜಕೀಯವೂ ಅಲ್ಲ. ಅದನ್ನು ಮೀರಿದ ತಿಳುವಳಿಕೆ. ಈ ತಿಳುವಳಿಕೆಯಿಂದ ಭ್ರಷ್ಟ ರಾಜಕೀಯದ ಬಹುಪಾಲು ಕಾರಣಗಳಿರುವುದು ಚುನಾವಣಾ ಭ್ರಷ್ಟತೆಯಲ್ಲಿ ಎಂಬ ಅಂಶ ಅರ್ಥವಾಗುತ್ತದೆ. ಚುನಾವಣೆಯ ಭ್ರಷ್ಟತೆಯು ಹಣಕ್ಕೆ ಸಂಬಂಧಿಸಿರುವುದಷ್ಟೇ ಅಲ್ಲ, ಸೈದ್ಧಾಂತಿಕ ರಾಜಕಾರಣದ ಅಭಾವಕ್ಕೂ ಸಂಬಂಧಿಸಿದೆ. ಆದ್ದರಿಂದ ಭ್ರಷ್ಟಾಚಾರ ವಿರೋಧಿ ಹೋರಾಟಕ್ಕೆ ಸಮಗ್ರ ರಾಜಕೀಯ ಪ್ರಜ್ಞೆಯ ಅಗತ್ಯವಿದೆ. ಈ ಅರ್ಥದಲ್ಲಿ ಭ್ರಷ್ಟಾಚಾರ ವಿರೋಧಿ ಹೋರಾಟವು ರಾಜಕೀಯ ಪಕ್ಷಗಳನ್ನು ಮೀರಿದ 'ವ್ಯವಸ್ಥೆ ವಿರೋಧಿ ರಾಜಕೀಯ ಹೋರಾಟ'ವಾಗಬೇಕಾಗುತ್ತದೆ. ಆದರೆ ರಾಜಕಾರಣಿಗಳ ಹೋರಾಟವಲ್ಲ; ಜನತೆಯ ಹೋರಾಟ.




ನನ್ನ ಮಾತುಗಳ ಅರ್ಥವೆಂದರೆ – ಭ್ರಷ್ಟಾಚಾರ ವಿರೋಧಿ ಹೋರಾಟವು ವ್ಯಕ್ತಿಯ ನೈತಿಕತೆಗೆ ಸಂಬಂಧಿಸಿದ್ದು ಮಾತ್ರವಲ್ಲ; ಒಟ್ಟು ವ್ಯವಸ್ಥೆಗೆ, ಸಾಮಾಜಿಕ ನೈತಿಕತೆಗೆ, ರಾಜಕಾರಣದ ಸಿದ್ಧಾಂತಗಳಿಗೆ ಸಂಬಂಧಿಸಿದ್ದು. ಈ ಎಲ್ಲದರ ಗ್ರಹಿಕೆಯನ್ನು ಅಂತರ್ಗತ ಮಾಡಿಕೊಂಡರೆ ನಾವು ಇಡುವ ಹೆಜ್ಜೆಗಳು ತನಗೆ ತಾನೇ ನೈತಿಕವಾಗಿರುತ್ತವೆ. ಇಲ್ಲದಿದ್ದರೆ ಭಾವಾವೇಶದ ಒತ್ತಡದಲ್ಲಿ ಎಡವಿಬೀಳುವ ಆತಂಕವೂ ಇರುತ್ತದೆ. ಈಗ ಲೋಕಪಾಲ ಮಸೂದೆಯ ಕರಡನ್ನು ಸಿದ್ಧಪಡಿಸಲು ರಚಿತವಾದ ಜಂಟಿ ಸಮಿತಿಯಲ್ಲಿರುವ ಅಣ್ಣಾ ಹಜಾರೆ ತಂಡವನ್ನು ಗಮನಿಸಿ. ಶಾಂತಿಭೂಷಣ್ ಅವರೂ ಹಿಂದೆ ರಾಜಕಾರಣಿಯಾಗಿದ್ದವರೇ. ಅದು ಅವರನ್ನು ಅನರ್ಹರನ್ನಾಗಿಸಬೇಕಾಗಿಲ್ಲ. ಆದರೆ ಅಣ್ಣಾ ಹಜಾರೆಯವರು ಶಾಂತಿಭೂಷಣರಿಗೆ ಸಹ ಅಧ್ಯಕ್ಷರ ಹುದ್ದೆ ಬೇಕೆಂದು ಪಟ್ಟು ಹಿಡಿಯಬೇಕಿತ್ತೆ? ಅವರ ಪುತ್ರರಾದ ಪ್ರಶಾಂತ್ ಭೂಷಣ್ ಅವರನ್ನೂ ಸಮಿತಿಗೆ ಸೇರಿಸಬೇಕಿತ್ತೆ? ಬಾಬಾ ರಾಮದೇವ್ ಅವರು ಅಪ್ಪ-ಮಗನ ಪ್ರಶ್ನೆಯನ್ನು ಎತ್ತಿ ಆಮೇಲೆ ವಾಪಸ್ ಪಡೆದರಾದರೂ ಸಾರ್ವಜನಿಕ ನೈತಿಕತೆಯ ದೃಷ್ಟಿಯಿಂದ ಆ ಪ್ರಶ್ನೆ ಹಾಗೇ ಉಳಿಯುತ್ತದೆ. ಶಾಂತಿ ಭೂಷಣ್ ಮತ್ತು ಪ್ರಶಾಂತ್ ಭೂಷಣರಲ್ಲಿ ಒಬ್ಬರ ಸ್ಥಾನಕ್ಕಾದರೂ ಬರುವ ಇನ್ನೊಬ್ಬ ತಜ್ಞ ಭೂಷಣರು ಇಲ್ಲದಷ್ಟು ಭಾರತ ಬಡವಾಗಿದೆಯೆ – ಎಂದು ಶಾಂತಿ ಮತ್ತು ಪ್ರಶಾಂತಿಯಿಂದ ಪ್ರಶ್ನಿಸಬೇಕಾಗುತ್ತದೆ. ಜಂಟಿಸಮಿತಿಯ ಸಭೆ ಸೇರುವ ಮುನ್ನವೇ ಅಣ್ಣಾ ಹಜಾರೆಯವರು 'ನಡಾವಳಿಯನ್ನು ಚಿತ್ರೀಕರಿಸಿ ತೋರಿಸುತ್ತೇವೆ' ಎಂದು ಏಕಾಏಕಿ ಘೋಷಿಸುವುದು ಸರಿಯೇ ಎಂಬ ಪ್ರಜಾಸತ್ತಾತ್ಮಕ ಪ್ರಶ್ನೆ ಏಳುತ್ತದೆ. ಯಾಕೆಂದರೆ ಈ ತೀರ್ಮಾನ ಆಗಬೇಕಾದ್ದು ಸಮಿತಿಯಲ್ಲಿ; ಏಕವ್ಯಕ್ತಿಯಿಂದ ಅಲ್ಲ.

ಬಹುಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ – ಜನರು ಬೆಂಬಲ ಕೊಟ್ಟದ್ದು ಕೇವಲ ಜನಲೋಕಪಾಲಕ್ಕಲ್ಲ; ಇಡಿಯಾಗಿ ಭ್ರಷ್ಟಾಚಾರ ನಿರ್ಮೂಲನೆಯ ಆಶಯಕ್ಕೆ. ಇದು ನನ್ನ ನಮ್ರ ತಿಳುವಳಿಕೆ. ಜನಲೋಕಪಾಲ ಅನುಷ್ಠಾನಗೊಂಡಾಗ ಕೇಂದ್ರ ಸರ್ಕಾರದ ವ್ಯಾಪ್ತಿಯಲ್ಲಿ ಭ್ರಷ್ಟಾಚಾರ ಕಡಿಮೆಯಾಗುತ್ತದೆ; ನಿಜ. ಆದರೆ ಸರ್ಕಾರೇತರ ವಲಯಗಳೂ 'ಶುದ್ಧವಾಗುವುದು' ಹೇಗೆ ? ಸರ್ಕಾರವನ್ನು ಆಯ್ಕೆ ಮಾಡುವ ಚುನಾವಣೆಗಳು 'ಶುದ್ಧವಾಗುವುದು' ಯಾವಾಗ ? ಮಂತ್ರಿ, ಪ್ರಧಾನಮಂತ್ರಿ, ಸಂಸದರನ್ನು ಆಯ್ಕೆ ಮಾಡುವ ಪ್ರಕ್ರಿಯೆಯಲ್ಲಿ ತುಂಬಿಕೊಂಡಿರುವ ಭ್ರಷ್ಟತೆಯನ್ನು ತೊಡೆಯದೆ, ಭ್ರಷ್ಟರಲ್ಲದ ಅಧಿಕಾರಸ್ಥರನ್ನು ಎಷ್ಟರಮಟ್ಟಿಗೆ ನಿರೀಕ್ಷಿಸಬಹುದು ? ಜಾತಿ ಭೇದ, ಲಿಂಗ ತಾರತಮ್ಯ, ಧಾರ್ಮಿಕ ಅಸಹನೆಗಳಿಂದ ಶೋಷಣೆಗೆ ತುತ್ತಾಗುತ್ತಲೇ ಭ್ರಷ್ಟಾಚಾರದ ಬಲಿಪಶುಗಳಾಗುತ್ತಿರುವ ಜನ ವರ್ಗಗಳ ಉನ್ನತಿಯನ್ನು ಬಯಸದ ಹೋರಾಟ ಪರಿಪೂರ್ಣವಾಗಬಲ್ಲದೆ ? ಈ ಜನವರ್ಗಗಳನ್ನು ಒಳಗೊಳ್ಳಬೇಕಾದ್ದು ಪ್ರಮುಖ ಆದ್ಯತೆಯಲ್ಲವೆ ? ಇನ್ನು ಖಾಸಗಿವಲಯಕ್ಕೆ ಬಂದರೆ, ಖಾಸಗಿ ಆಸ್ಪತ್ರೆಗಳು, ಖಾಸಗಿ ಶಾಲೆ-ಕಾಲೇಜುಗಳು, ಖಾಸಗಿ ಕಂಪನಿಗಳು ಜನರ ಜೀವ ಹಿಂಡುತ್ತಿಲ್ಲವೆ ? ಸರ್ಕಾರಿ ವಲಯ ಕನಿಷ್ಠ, ಖಾಸಗಿ ವಲಯ ಶ್ರೇಷ್ಠ ಎಂದು ಭಾವಿಸಲಾದೀತೆ ? ದೇಶದ ಭ್ರಷ್ಟಾಚಾರವೆಂದರೆ ಎಲ್ಲ ವಲಯಗಳ ಭ್ರಷ್ಟಾಚಾರ ಎಂದರ್ಥವಲ್ಲವೆ ?

ಈ ಎಲ್ಲ ಪ್ರಶ್ನೆಗಳೂ ಅಣ್ಣಾ ಹಜಾರೆ ತಂಡಕ್ಕೆ ತಿಳಿದಿಲ್ಲವೆಂದು ನಾನು ಭಾವಿಸಿಲ್ಲ. ತಿಳಿದಿದ್ದೂ ಅವರ ಆಯ್ಕೆ ಮತ್ತು ಆದ್ಯತೆಗಳು ಬೇರೆಯಿರಬಹುದು. ಅದೇನೇ ಇದ್ದರೂ ಜನಲೋಕಪಾಲ ಕಲ್ಪನೆಯನ್ನು ಸಾಕಾರಗೊಳಿಸಲು ಸತ್ಯಾಗ್ರಹ ನಡೆಸಿದ ಅಣ್ಣಾ ಹಜಾರೆಯವರನ್ನು ಅಭಿನಂದಿಸುತ್ತಲೇ ಎಲ್ಲ ವಲಯಗಳ ಭ್ರಷ್ಟತೆಯ ವಿರುದ್ಧ ಸಾಮಾಜಿಕ ಹೋರಾಟವನ್ನು ಕಟ್ಟುವ ಬಗ್ಗೆ ನಾವು ಕ್ರಿಯಾಶೀಲರಾಗಬೇಕು. ಭ್ರಷ್ಟಾಚಾರದ ಮುಖ್ಯ ಬಲಿಪಶುಗಳಾದ ಜನವರ್ಗಗಳನ್ನು ಈ ಹೋರಾಟ ಒಳಗೊಳ್ಳಬೇಕು.

**ಪ್ರೊ॥ ಬರಗೂರು ರಾಮಚಂದ್ರಪ್ಪ**
ನಂ. ೨೭೫, ೧೧/ಬಿ ಅಡ್ಡರಸ್ತೆ, ೧೪ನೇ ಮುಖ್ಯರಸ್ತೆ
ವಿ.ಇ.ಟಿ. ಪಾಲಿಟೆಕ್ನಿಕ್ ಹತ್ತಿರ
ಜೆ. ಪಿ. ನಗರ ೨ನೇ ಹಂತ
ಬೆಂಗಳೂರು - ೫೬೦ ೦೭೮

ಕೆ. ಎಸ್. ಪಾರ್ಥಸಾರಥಿ

# ಒಂದಿಷ್ಟು ಅರ್ಥಶಾಸ್ತ್ರ

# ಸಾರ್ವಜನಿಕ ಉದ್ದಿಮೆಗಳನ್ನು ನಡೆಸುವುದು ಹೇಗೆ? ಫುಡ್ ಕಾರ್ಪೊರೇಷನ್ ಆಫ್ ಇಂಡಿಯಾ ಕುರಿತು ಒಂದು ಟಿಪ್ಪಣಿ

**ಯಾ**ವುದೇ ಪಕ್ಷ, ಅಂದರೆ ಎಡಪಕ್ಷಗಳನ್ನು ಹೊರತುಪಡಿಸಿ, ಇನ್ನಾವುದೇ ಪಕ್ಷ ಅಧಿಕಾರದಲ್ಲಿರಲಿ, ಅದರ ಆಳುವ ವರ್ಗದ ನೀತಿ ಸಾರ್ವಜನಿಕ ಉದ್ಯಮಗಳನ್ನು ಹಾಳುಗೆಡಹುವುದು. ಚುನಾವಣೆಯಲ್ಲಿ ಗೆದ್ದರೂ ಎಡಪಕ್ಷಗಳು ಈ ವ್ಯವಸ್ಥೆಯಲ್ಲಿ ಅದನ್ನು ನಡೆಸುವ ವರ್ಗಕ್ಕಿಂತ ಮೂಲಭೂತವಾಗಿ ಬೇರೆಯದೇ ರೂಪದ ಆಡಳಿತ ನೀಡಲಾರದು ಎಂದು ಈಗಾಗಲೇ ಸಾಬೀತಾಗಿದೆ. ಖಾಸಗೀಕರಣವೇ ಆದರೂ ಅದನ್ನು ಎಡಪಕ್ಷಗಳು ಮಾಡುವಂತಿಲ್ಲ! ಟಾಟಾ – ನ್ಯಾನೋ ಪ್ರಕರಣದ ಕತೆ ಅದೇ. ಈಗ ಮಮತಾ ನ್ಯಾನೋ ತಯಾರಿಸುವುದನ್ನು ಕಾದು ನೋಡಬಹುದು. ಫುಡ್ ಕಾರ್ಪೊರೇಷನ್ ಆಫ್ ಇಂಡಿಯಾ ಎಂಬ ಸಂಸ್ಥೆ ಸರ್ಕಾರದ ಪರವಾಗಿ ಅದರ ನೀತಿಗನುಸಾರ ಆಹಾರ ಧಾನ್ಯಗಳನ್ನು ರೈತರಿಂದ ನೇರವಾಗಿ ಖರೀದಿಸಿ, ಸಂಸ್ಕರಿಸಿ, ಜತನದಿಂದ ಕಾಪಾಡಿ, ಸರ್ಕಾರದ ನೀತಿಗನುಗುಣವಾಗಿ ಪಡಿತರ ವ್ಯವಸ್ಥೆ ಅಥವಾ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಮುಂತಾದುವುಗಳ ಮೂಲಕ ಉತ್ತಮ ಗುಣಮಟ್ಟದ ಧಾನ್ಯವನ್ನು ಮುಖ್ಯವಾಗಿ ಬಡಜನತೆಗೆ ತಲುಪಿಸುವ ಹೊಣೆ ಹೊತ್ತಿದೆ. ಬ್ರಿಟಿಷರ ಆಳ್ವಿಕೆಯಲ್ಲಿ ದೇಶದಲ್ಲಿ ಆಹಾರಧಾನ್ಯ ಸಾಕಷ್ಟು ಲಭ್ಯವಿದ್ದಾಗಲೂ ದೇಶದ ವಿವಿಧ ಭಾಗಗಳಲ್ಲಿ ಆಗಾಗ್ಗೆ, ಉದಾಹರಣೆ, ೧೯೪೬ರಲ್ಲಿ ಬಂಗಾಳದಲ್ಲಿ, ಭೀಕರ ಕ್ಷಾಮ ತಲೆದೋರುತ್ತಿತ್ತು. ಸ್ವತಂತ್ರ ಭಾರತದ ಸರ್ಕಾರಗಳು ಈ ಪರಿಸ್ಥಿತಿಯನ್ನು ಸಾಕಷ್ಟು ಸುಧಾರಿಸಿವೆ. ಇತ್ತೀಚಿನವರೆಗೂ ಫುಡ್ ಕಾರ್ಪೊರೇಶನ್ (ಎಫ್‌ಸಿಐ) ಈ ಕೆಲಸವನ್ನು ಅಷ್ಟೇನೂ ಸಮರ್ಪಕವಾಗಿ ನಿರ್ವಹಿಸು ತ್ತಿರಲಿಲ್ಲ. ಈಗ ಪ್ರತಿದಿನ ಅದರ ವೈಫಲ್ಯಗಳು ಸುದ್ದಿ ಮಾಡುತ್ತಿವೆ. ಖಾಸಗಿ ದೂರದರ್ಶನ ಚಾನೆಲ್‌ಗಳು ಎಫ್‌ಸಿಐ ಗೋದಾಮುಗಳಲ್ಲಿ ಧಾನ್ಯರಾಶಿ ಮಳೆಯ ಪಾಲಾಗುತ್ತಿರುವ, ಕ್ರಿಮಿಕೀಟಗಳು, ಹೆಗ್ಗಣಗಳು ತಾಂಡವ ವಾಡುತ್ತಿರುವ, ತೆರವಾದ ಪ್ರದೇಶದಲ್ಲಿ ಬಿಸಿಲು ಮಳೆಯಲ್ಲಿ ದವಸಧಾನ್ಯಗಳು ಹಾಳಾಗುತ್ತಿರುವ ದಾರುಣ ಚಿತ್ರಗಳನ್ನು ತೋರಿಸುತ್ತಿವೆ. ಈ ಕುರಿತು ಕಟು ಟೀಕೆಗಳು ಸುಮಾರು ಹತ್ತು ವರ್ಷಗಳಿಂದಲೂ ನಡೆಯುತ್ತಿದ್ದರೂ ಎಫ್‌ಸಿಐ ಎಚ್ಚೆತ್ತು, ಸರಿಪಡಿಸುವ ಕ್ರಮವನ್ನು ಸಾಕಷ್ಟು ಕೈಗೊಂಡಂತಿಲ್ಲ. ಉಚ್ಚ ನ್ಯಾಯಾಲಯ ಕೆಂಡಾಮಂಡಲವಾಗಿ ಧಾನ್ಯವನ್ನು ಕೂಡಲೆ, ಉಚಿತವಾಗಿಯೇ ಆದರೂ ಸರಿಯೆ, ಈ ಕೂಡಲೆ ಬಡವರಿಗೆ ಹಂಚಿಬಿಡಿ ಎಂದು ಗುಡುಗಿದೆ. ಆದರೂ ಸರ್ಕಾರ ಪ್ರತಿಸ್ಪಂದಿಸುತ್ತಿಲ್ಲ. ಇದೇಕೆ ಹೀಗೆ? ಅದು ಅವರ ನೀತಿಯೇ?



ಎಫ್‌ಸಿಐ ಈ ಹೊಣೆಗಾರಿಕೆಯನ್ನು ಬಂಡವಾಳ ಜಗತ್ತಿನ ಉದ್ಯಮವೆಂಬಂತೆ ಪರಿಗಣಿಸಿ ನಡೆಸಿದ್ದರೂ ಲಾಭ ಗಳಿಸಬಹುದಿತ್ತು. ರೈತರಿಗೆ ತನ್ಮೂಲಕ ಇನ್ನೂ ಹೆಚ್ಚು ಪರಿಹಾರ ನೀಡಬಹುದಿತ್ತು. ಇದೊಂದು ಲಾಭದಾಯಕ ಉದ್ದಿಮೆ. ಯಾವುದೇ ನಿಷ್ಠಾವಂತ ದಕ್ಷ ಪ್ರಜೆಗೆ ಜವಾಬ್ದಾರಿ ಹೊರಿಸಿದರೂ ಸ್ವಾಯತ್ತತೆಯೊಂದನ್ನು ನೀಡಿದರೆ ಇದನ್ನು ಸಮರ್ಥವಾಗಿ ನಿರ್ವಹಿಸಿ ತೋರಿಸಬಲ್ಲರು. ರಾಷ್ಟ್ರದ ಎಲ್ಲ ಪ್ರಾಂತ್ಯಗಳಲ್ಲೂ ಸಮಾನವಾಗಿ ಹೆಚ್ಚುವರಿ ಆಹಾರ ಉತ್ಪಾದನೆಯಾಗುವುದಿಲ್ಲ. ಕೆಲವು ಕಡೆ ಅತಿಹೆಚ್ಚು, ಕೆಲವು ಕಡೆ ಆ ಪ್ರದೇಶಕ್ಕೇ ಸಾಲದು ಮತ್ತು ಕೆಲವೆಡೆ ಬೆಳೆಯದೆಯೇ ಇರಬಹುದು. ಆದರೂ ಒಟ್ಟಾರೆ ದೇಶದ ಉತ್ಪತ್ತಿ ನಮಗೆ ಸಾಕಷ್ಟು ಇರುವುದರಿಂದ ಎಫ್‌ಸಿಐ ಹೆಚ್ಚಿರುವೆಡೆ ಕೊಂಡು, ಅಗತ್ಯವಿರುವೆಡೆಗೆ ತುರ್ತಾಗಿ, ಸಮರ್ಪಕವಾಗಿ ಸರಬರಾಜು ಮಾಡಬೇಕು. ಕೇವಲ ಪಡಿತರವೇ ಅಲ್ಲದೆ, ಖಾಸಗೀ ಮಾರುಕಟ್ಟೆಯಲ್ಲಿ ಬೆಲೆ ಹೆಚ್ಚಿದಾಗ, ತನ್ನ ಗೋದಾಮಿನ ಸಂಗ್ರಹದಿಂದ, ಮಾರುಕಟ್ಟೆಗೆ ಒಂದಿಷ್ಟು ಮಾರಿ, ಪೂರೈಸಿ, ಬೆಲೆ ನಿಯಂತ್ರಿಸಬಹುದು. ಈ ಸಾಧ್ಯತೆಯನ್ನು ಕಂಡರೆ ಖಾಸಗೀ ವರ್ತಕರಿಗೆ ಭಯ, ಕೋಪ. ಅವರ ಕಾಳಸಂತೆಗೆ ಇದು ಮಾರಕ. ಅದು ಕದ ಮುಚ್ಚಿದರೆ ಖಾಸಗಿ ವರ್ತಕರು ಸಿಹಿ ಹಂಚುತ್ತಾರೆ.

ಪಡಿತರ ಕ್ಷೇತ್ರಕ್ಕೆ ಅಗತ್ಯವಿರುವುದಕ್ಕಿಂತ ಹೆಚ್ಚಾಗಿ, ಎರಡು ವರ್ಷಗಳ ಬೇಡಿಕೆಗೆ ಸಾಕಾಗುವಷ್ಟು ದಾಸ್ತಾನು ಶೇಖರಿಸಿ, ಆಹಾರ ರಕ್ಷಣೆಯನ್ನು ಕಾಯ್ದುಕೊಳ್ಳುತ್ತಿತ್ತು ಎಫ್‌ಸಿಐ. ಹೊಸ ವರ್ಷದ ಧಾನ್ಯ ಬರುತ್ತಿದ್ದಂತೆಯೇ ಹಳೆಯ ದಾಸ್ತಾನನ್ನು ಮಾರುಕಟ್ಟೆಗೆ ಬಿಟ್ಟು, ಹೊಸ ದಾಸ್ತಾನಿಗೆ ಸ್ಥಳ ಮಾಡಿಕೊಳ್ಳಬೇಕು. ಎರಡು ವರ್ಷಕ್ಕಾದರೂ, ಪಡಿತರ ವ್ಯವಸ್ಥೆಗೆ ಸಾಕಷ್ಟು ಧಾನ್ಯ ಸಂಗ್ರಹ ಮಾಡಲು, ದಾಸ್ತಾನು ಮಾಡಲು ಸಾಕಷ್ಟು ರಕ್ಷಿತ ಗೋದಾಮುಗಳು ಇದರ ವಶದಲ್ಲಿರಬೇಕು. ಈ ಗೋದಾಮು ಅವರ

ಸ್ವಂತದ್ದಿರಬಹುದು ಅಥವಾ ಖಾಸಗೀಕ್ಷೇತ್ರದಲ್ಲಿ ನಿರ್ಮಿಸಲು ಪ್ರೋತ್ಸಾಹ ನೀಡಿ, ಅವನ್ನು ಬಾಡಿಗೆಗೆ ಪಡೆಯುವಂತಿರಬೇಕು. ಮಾರುಕಟ್ಟೆಯ ಪರಿಸ್ಥಿತಿಗೆ ತಕ್ಕಂತೆ, ಬೇಡಿಕೆ, ಧಾರಣೆ ವಾಸಿ, ಅಂತರರಾಷ್ಟ್ರೀಯ ಪರಿಸ್ಥಿತಿ, ಬೆಳೆ-ಮಳೆ ಮುಂತಾದುವನ್ನು ನಿರಂತರವಾಗಿ ರಾಷ್ಟ್ರಮಟ್ಟದಲ್ಲಿ ವೀಕ್ಷಿಸಿ, ತೀರ್ಮಾನ ತೆಗೆದುಕೊಳ್ಳುವ ತಾಂತ್ರಿಕ ಜಾಲ ಬೇಕು. ದಿನನಿತ್ಯದ ಕಾರ್ಯ ನಿರ್ವಹಣೆಯಲ್ಲಿ, ತಾತ್ಕಾಲಿಕ ನೀತಿಗಳನ್ನು ಕ್ಷಣಾರ್ಧದಲ್ಲಿ ತೆಗೆದುಕೊಳ್ಳಲು ಸೂಕ್ತವಾದ ತೀರ್ಮಾನ ತೆಗೆದುಕೊಳ್ಳುವ ಸ್ವಾಯತ್ತತೆ ಸಂಸ್ಥೆಗೆ ಇರಬೇಕು (ಇವೆಲ್ಲಾ ಕಾಳಸಂತೆಯ ವರ್ತಕನಿಗೆ ಇವೆ). ಈಗ ಎಫ್‌ಸಿಐ ಅಧಿಕಾರಶಾಹಿ ಮತ್ತು ರಾಜಕೀಯ ನಿಯಂತ್ರಣದಿಂದ ಕುಲಗೆಟ್ಟಿರುವುದು ಸ್ಪಷ್ಟ. ಜಗತ್ತಿನ ಅತ್ಯಂತ ವೇಗವಾಗಿ ಬೆಳೆಯುವ ಭಾರತದ ಆರ್ಥಿಕ ವ್ಯವಸ್ಥೆಗೆ ಎಫ್‌ಸಿಐಗೆ ಅಗತ್ಯವಾದ ಗೋದಾಮುಗಳನ್ನು ಪೂರೈಸಲು ಆಗದಿರುವುದಕ್ಕೆ ಕಾರಣ ಅದರ ಅಸಾಧ್ಯತೆಯಲ್ಲ, ಉದ್ದೇಶಪೂರ್ವಕ ಪಿತೂರಿ ಎನ್ನದೆ ಬೇರೆ ದಾರಿಯಿಲ್ಲ.

ಇತ್ತೀಚೆಗೆ ನಾನು ಅಮೆರಿಕ ಸಂಯುಕ್ತ ಸಂಸ್ಥಾನದ ಪ್ರವಾಸದಲ್ಲಿ ಗಮನಿಸಿದಂತೆ ಆ ದೇಶದಾದ್ಯಂತ ಹಲವು ಹಂತದ, ಹಲವು ರೀತಿಯ ಗೋದಾಮುಗಳು ಲಭ್ಯವಿವೆ. ನನಗೆ ವೈಯಕ್ತಿಕವಾಗಿ ಅಗತ್ಯಬಿದ್ದಾಗ ನನ್ನ ಮನೆಯ ಸಾಮಾನುಗಳನ್ನೆಲ್ಲ ಅಂಥ ಗೋದಾಮಿನಲ್ಲಿ ಬಾಡಿಗೆಗೆ ಇಟ್ಟು ನಿಶ್ಚಿಂತೆಯಿಂದ ಇರಬಹುದು. ಇಂಥ ಸರಕುಗಳನ್ನು ನಾವೇ ಸಾಗಿಸಿಕೊಳ್ಳಬಹುದಾದ ಸಣ್ಣ ಸಾರಿಗೆ ವ್ಯವಸ್ಥೆ ಇದೆ. ಜಗತ್ತಿಗೆ ಅಗತ್ಯವಾದ ಧಾನ್ಯ ರಾಶಿಯನ್ನು ಅಮೆರಿಕದ ಕೃಷಿಕೇಂದ್ರ ಉತ್ಪಾದಿಸುತ್ತದೆ. ರೈತರು ತಮ್ಮ ಧಾನ್ಯರಾಶಿಯನ್ನು ಸರ್ಕಾರದ, ಸಹಕಾರಿ ಕ್ಷೇತ್ರದ, ಖಾಸಗಿಯ ಗೋದಾಮುಗಳಲ್ಲಿ ದಾಸ್ತಾನು ಮಾಡಬಹುದು. ಇಷ್ಟಪಟ್ಟಾಗ ಮಾರಬಹುದು. ಗೋದಾಮಿನಲ್ಲಿಟ್ಟಿರುವ ದಾಸ್ತಾನಿನ ಆಧಾರದ ಮೇಲೆ ತಾತ್ಕಾಲಿಕ ಸಾಲ ಪಡೆಯ ಬಹುದು. ಮಾರುಕಟ್ಟೆಯಲ್ಲಿ ಒಳ್ಳೆಯ ಲಾಭ ಬಂದಾಗ ಮಾರಿಕೊಳ್ಳಬಹುದು. ಹಾಗೆ ಅಂಥ ಉತ್ತಮ ಬೆಲೆ ಬರದೆ ಹೋದಾಗ ಅಥವಾ ಯಾವಾಗ ಬಯಸಿದರೂ ಸರ್ಕಾರ ಅವರ ಧಾನ್ಯವನ್ನು ನಿಗದಿತ ಆಶ್ವಾಸನೆಯ ಬೆಲೆಗೆ ಕೊಂಡುಕೊಳ್ಳುತ್ತದೆ. ಹೀಗಾಗಿ ರೈತ ಸ್ವಲ್ಪ ನಿಶ್ಚಿಂತನಾಗಿರುತ್ತಾನೆ. ಈ ಗೋದಾಮುಗಳ ಸಮೀಪದಲ್ಲೇ ರೈತ ತನ್ನ ಕೃಷಿಗೆ ಬೇಕಾದ ಬೀಜ, ಔಷಧಿ, ಉಪಕರಣಗಳನ್ನು ಪಡೆಯಬಹುದಲ್ಲದೆ ಬ್ಯಾಂಕುಗಳೂ, ಮಾರುಕಟ್ಟೆಗಳೂ ಇವೆ. ಬೆಳೆಯುವ ಪ್ರಕ್ರಿಯೆಯಲ್ಲಿ, ಪ್ರಕರಣದಿಂದ ವಿವಿಧ ಹಂತದಲ್ಲಿ ಸರ್ಕಾರಿ ಸಾಲ ದೊರೆಯುತ್ತದೆ ರೈತನಿಗೆ. ಆಹಾರ ಧಾನ್ಯ ಮತ್ತು ಕೃಷಿಯ ವಾಣಿಜ್ಯೇತರ ಉತ್ಪನ್ನಗಳಿಗೆ ಈ ನಿಶ್ಚಿಂತೆಯನ್ನು ಸರ್ಕಾರದ ನೀತಿ ಒದಗಿಸಿಕೊಟ್ಟಿರುವುದರಿಂದ, ಬಳಕೆದಾರರಿಗೆ ಸಾಮಾನ್ಯವಾಗಿ ಆಹಾರದ ಬೆಲೆ ತುಟ್ಟಿಯಾಗುವುದಿಲ್ಲ. ಅಂತರ ರಾಷ್ಟ್ರೀಯವಾಗಿ ಕೊರತೆ, ಹಸಿವು ಇರುವವರೆಗೆ ಯಾರೇ ಎಲ್ಲೇ ಹೆಚ್ಚು ಆಹಾರ ಬೆಳೆದರೂ ಅದು ಲಾಭದಾಯಕವೆ. ಅಂದರೆ ಅದಕ್ಕೆ ಒಂದು ನೀತಿಯ ಬೆಂಬಲವಿದ್ದರೆ, ಕೃಷಿ ಲಾಭದಾಯಕ ಉದ್ಯಮ.




ಖಾಸಗಿ ದೂರದರ್ಶನ ಛಾನೆಲ್‌ಗಳಿಗೆ ಎಫ್‌ಸಿಐ ಮೇಲೆ ವಿಶೇಷ ಅಕ್ಕರೆಯೇನೂ ಇಲ್ಲ. ಅವು ಖಾಸಗೀ ವಾಣಿಜ್ಯದ ಪ್ರಚಾರ ಶಾಖೆಗಳಷ್ಟೆ. ಅವು ಈ ಸಂಸ್ಥೆಯ ವಿರುದ್ಧ ಹಲವಾರು ವಾಸ್ತವಾಂಶಗಳನ್ನು, ಹಲವಾರು ಮಿಥ್ಯೆಗಳನ್ನು ಕಲಬೆರೆಸಿ ನಿರಂತರ ಪ್ರಚಾರ ಮಾಡುತ್ತವೆ. ತನ್ಮೂಲಕ ಖಾಸಗಿ ಉದ್ಯಮವು ಸರ್ಕಾರವು ಆಹಾರ ಕ್ಷೇತ್ರದಿಂದ, ಪಡಿತರ ವ್ಯವಸ್ಥೆಯಿಂದ ಹಿಂದೆ ಸರಿಯಲು ಪ್ರೇರೇಪಿಸುತ್ತದೆ. ಇದಕ್ಕೆ ತಕ್ಕ ಸಾರ್ವಜನಿಕ ಅಭಿಪ್ರಾಯ ಮೂಡಿಸಲು ಸಂಚು ಹೂಡುತ್ತದೆ. ಇದು ಈಗೀಗ ಅವರು ಬಯಸಿದ ಪರಿಣಾಮ ನೀಡಲು ಪ್ರಾರಂಭಿಸಿದೆ.

ಸರ್ಕಾರ ಪಡಿತರ ಪದ್ಧತಿಯನ್ನು ರದ್ದುಮಾಡಿ, ಎಫ್‌ಸಿಐ ಅನವಶ್ಯಕವೆಂದೂ ಅದು ಅಸಮರ್ಥವೆಂದೂ, ಸರಿಪಡಿಸಲಾಗದ್ದೆಂದೂ ಹೇಳಿ ಕದ ಮುಚ್ಚಿ, ಖಾಸಗಿ ವ್ಯವಹಾರಕ್ಕೆ ದಾರಿ ಮಾಡಿಕೊಡಲು ಬಯಸುತ್ತದೆ. ಬಡವರಿಗೆ ಪಡಿತರದ ಬದಲು ನೇರ ಒಂದಿಷ್ಟು ನಗದು ಹಣ ನೀಡಿ, ಒಟ್ಟಿನಲ್ಲಿ ಆಯ್ತು ತನ್ನ ಕೆಲಸ ಎನ್ನಬಹುದು. ಮಾರುಕಟ್ಟೆ ಸ್ವತಃ ಜಾಣ, ಅದು ಈ ಕ್ಷೇತ್ರವನ್ನು ಸಮರ್ಥವಾಗಿ ನಿರ್ವಹಿಸುತ್ತದೆ ಎನ್ನುವುದು ಈ ವಾದ. ಇದು ಸರಿ ಅಲ್ಲವೆಂದು ಇಡೀ ಪಾಶ್ಚಿಮಾತ್ಯ ಬಂಡವಾಳದ ವ್ಯವಸ್ಥೆಯೊಳಗಿನ ಪರಿಸ್ಥಿತಿ ಹೇಳುತ್ತದೆ. ಇರುವ ವ್ಯವಸ್ಥೆಯೊಳಗೂ ಅಲ್ಲಿಂಯ ಸರ್ಕಾರಗಳು ರಾಷ್ಟ್ರೀಯ ರಕ್ಷಣೆಯ ವಿಷಯವೋ ಎಂಬಂತೆ ಆಹಾರ ಕ್ಷೇತ್ರವನ್ನು ಸಮರ್ಪಕವಾಗಿ ನಿರ್ವಹಿಸುತ್ತಿವೆ. ನೇರ ನಗದು ನೀಡುತ್ತಿರುವ ಬ್ರೆಜಿಲ್‌ನಂತಹ ರಾಷ್ಟ್ರಗಳಲ್ಲೂ ಆಹಾರದ ಉತ್ಪಾದನೆ, ವಿತರಣೆಯ ಮೇಲೆ ಸರ್ಕಾರ ಸಾಂಸ್ಥಿಕವಾಗಿ ನಿಯಂತ್ರಣ ಸಾಧಿಸಿದೆ. ಸಮಾಜವಾದವಿಲ್ಲದಿದ್ದರೆ ಬೇಡ, ಉತ್ತಮವಾದ ಬೂರ್ಷ್ವಾ ಪ್ರಜಾಪ್ರಭುತ್ವವಾದರೂ ಬೇಡವೇ ನಮಗೆ? ಈ ಕ್ರೋನಿ ಅಣಕು ಕ್ಯಾಪಿಟಲಿಸಂನಿಂದ ನಮ್ಮ ಜನರನ್ನು ರಕ್ಷಿಸುವುದು ಇಂದಿನ ತುರ್ತಾದ ವಿಷಯ. ಕ್ರೋನಿಇಸಂ ಅಂದರೆ ಸ್ವಭಾವ ಪಕ್ಷಪಾತವೆಂದು ಅರ್ಥ. ಅದು ಟಾಟಾ, ಬಿರ್ಲಾಗಳು ಸರ್ಕಾರದ ಆಪ್ತಮಿತ್ರರೆಂಬಂತೆ, ಪ್ರಜೆಗಳು ನಗಣ್ಯರಾದಾಗ ಬರುವಂತಹ ವ್ಯವಸ್ಥೆ. ಟೆಲಿಕಾಂ ಹಗರಣದ ಚರ್ಚೆಯಲ್ಲಿ ದೇಶದ ಬೃಹದುದ್ಯಮದ ಅತ್ಯುಚ್ಚ ವ್ಯಕ್ತಿಗಳನ್ನು ಸಿಲುಕಿಸದೆ ಉಳಿಸುತ್ತಿರುವ ಪ್ರಯತ್ನ ಇಂಥದೆ. ಅದೇ ಕ್ರೋನಿ ಅಂದರೆ : ಟಾಟಾ ನಮ್ಮ ಪವಿತ್ರ ಹಸು; ಆತನ ಮುಖಕ್ಕೆ ಮಸಿ ಬಳಿಯಕೂಡದು, ತಪ್ಪು ಮಾಡಿದ್ದರೂ ಎನ್ನುವ ನೀತಿ.

ರೈತರಿಗೆ ಒಳ್ಳೆಯ ಬೆಲೆ ನೀಡಬೇಕು. ಇಲ್ಲದಿದ್ದರೆ ಅವನಿಗೆ ಸರ್ಕಾರಕ್ಕಾಗಲಿ, ಬೇರಾರಿಗೇ ಆಗಲಿ ಮಾರಲು ನಿರಾಕರಿಸುವ, ತನಗೆ ಇಷ್ಟ ಬಂದಾಗ ಮಾರುವ, ಸಾಮರ್ಥ್ಯ ನೀಡಬೇಕು. ಇದರಲ್ಲಿ ಅಮೆರಿಕದ ಉದಾಹರಣೆ ನಮಗೆ ಅಭ್ಯಸನೀಯ. ಇದಕ್ಕೆ ಬೇಕಾದಷ್ಟು ಗೋದಾಮುಗಳನ್ನು ತ್ವರಿತವಾಗಿ ನಿರ್ಮಿಸಬೇಕು. ಅವು ಆಧುನಿಕ ತಂತ್ರಜ್ಞಾನವನ್ನು ಒಳಗೊಂಡಿರಬೇಕು. ವಿನಾಶ ತರುವ ಅಣುಸ್ಥಾವರಗಳನ್ನು ನಮಗೆ ಮಾರುವ ಬದಲು, ಅಮೆರಿಕ ಈ ಕ್ಷೇತ್ರಕ್ಕೆ ನೆರವು ನೀಡಬಹುದಿತ್ತು. ಆದರೆ ಭಾರತ ಮತ್ತಿತರ ಹಿಂದುಳಿದ ರಾಷ್ಟ್ರಗಳು ಆಹಾರ ಸ್ವಾವಲಂಬನೆ ಪಡೆದುಬಿಟ್ಟರೆ ಅಮೆರಿಕದ ಗತಿ ಏನಾಗಬೇಡ? ವಾಸ್ತವದಲ್ಲಿ ಈ ಹೆದರಿಕೆ ನಿರಾಧಾರ. ಆದರೂ ಇದು ಈ ಕುರಿತ ರಾಜಕೀಯ ವಾಸ್ತವ. ಅದು ಹಾಗಿರಲಿ. ನಮ್ಮ ಯುವ ವಾಣಿಜ್ಯ ಸಾಹಸಿಗಳು ಗೋದಾಮುಗಳನ್ನು ನಿರ್ಮಿಸುವ ಉದ್ಯಮವನ್ನು ತುರ್ತಾಗಿ ಪ್ರವೇಶಿಸಲಿ. ಅವರಿಗೆ ದೀರ್ಘ ಕಾಲೀನವಾದ ಕಡಿಮೆ ಬಡ್ಡಿಯ ಬಂಡವಾಳ ದೊರೆಯುವ ನೀತಿ ಬರಲಿ. ಗೋದಾಮುಗಳನ್ನು ಆಹಾರ ಬೆಳೆಯುವ ಪ್ರದೇಶಗಳಿಗೆ ಕೇಂದ್ರವಾಗಿ ಸ್ಥಾಪಿಸಬೇಕು. ಈ ಜಾಲಕ್ಕೆ ಅಗತ್ಯವಿರುವ ಹಲವು ಬಗೆಯ ಚಿಕ್ಕ, ಮಧ್ಯಮ, ಹಿರಿಯ ಪ್ರಮಾಣದ ಸಾರಿಗೆ ವ್ಯವಸ್ಥೆಯನ್ನು ಅಸ್ತಿತ್ವಕ್ಕೆ ತರಬೇಕಿದೆ. ಇದರಿಂದ ಉದ್ದಿಮೆಯ ಸದವಕಾಶ ತೆರೆದುಕೊಳ್ಳುತ್ತದೆ. ಇಲ್ಲೆಲ್ಲಾ ಏರ್‌ಕಂಡೀಷನ್ಡ್ ಕ್ರಿಮಿನಾಶಕ ಮಾರಾಟ ಮಾಡುವ ಹಲವು ಬಿಡಿ ಬಿಡಿ ಉದ್ಯಮಗಳೂ ಹುಟ್ಟಿಕೊಳ್ಳುತ್ತವೆ. ಇವನ್ನು ನಿರ್ಮಿಸುವಾಗ ಖಾಸಗಿ, ಸಾರ್ವಜನಿಕ, ಸಹಕಾರೀ, ಈ ಎಲ್ಲ ಕ್ಷೇತ್ರಗಳಲ್ಲೂ ಕೆಲಸ ನಡೆಯಲಿ. ರೈತನಿಗೆ ಅವನ ಭೂಮಿಯ ಆಧಾರದ ಮೇಲೆ, ಬೆಳೆಯ ದಾಸ್ತಾನಿನ ಆಧಾರದ ಮೇಲೆ ಸುಲಭ ಸಾಲ ದೊರಕುವಂತಹ ವ್ಯವಸ್ಥೆ ಏರ್ಪಡಲಿ. ಈ ವ್ಯವಸ್ಥೆಯ ಒಳಗೆ ಸಮರ್ಪಕ ಪಡಿತರ ವ್ಯವಸ್ಥೆ ಬೇಕು. ಇದು ಸಾರ್ವತ್ರಿಕ ವ್ಯವಸ್ಥೆಯಾಗಬೇಕು. ಈಗಾಗಲೇ ಹಲವು ದೇಶಗಳ ಅನುಭವದ ಹಿನ್ನೆಲೆಯಲ್ಲಿ, ನಮ್ಮದೇ ಅನುಭವದ ಹಿನ್ನೆಲೆಯಲ್ಲಿ, ಸಾರ್ವತ್ರಿಕ ವ್ಯವಸ್ಥೆ ಉತ್ತಮ ವ್ಯವಸ್ಥೆ ಎಂದು ಸ್ಪಷ್ಟವಾಗಿದೆ. ಸಾರ್ವತ್ರಿಕ ಪಡಿತರವೆಂದ ಮಾತ್ರಕ್ಕೆ ಎಲ್ಲರೂ ಪಡಿತರ ಅಂಗಡಿಗೆ ನುಗ್ಗುವುದಿಲ್ಲ; ಅದು ಕೇವಲ ಒಂದು ಆಶ್ವಾಸನೆಯಂತೆ ಕೆಲಸ ಮಾಡುತ್ತಿದೆ ಮತ್ತು ಸಾಮಾನ್ಯ ಬೆಲೆಯನ್ನು ನಿಯಂತ್ರಿಸುತ್ತದೆ ಎಂದು ದಾಖಲೆಗಳು ಹೇಳುತ್ತವೆ. ಈ ವ್ಯವಸ್ಥೆಯಲ್ಲಿ ಹೆಚ್ಚುವರಿ ಆಹಾರ ಬೆಳೆದು, ಗುಣಮಟ್ಟ ಕಾಯ್ದುಕೊಂಡು, ರಫ್ತು ಮಾಡಲೂ ಸಾಕಾಗುವಷ್ಟು ಪ್ರಗತಿ ಸಾಧ್ಯ. ಬೆಳೆ ನಾಶವಾದಾಗ ಕಷ್ಟಕಾಲದ ನಿಧಿಯನ್ನು ಸ್ಥಾಪಿಸಿ ಪರಿಹಾರ ನೀಡಬಲ್ಲಷ್ಟು ಲಾಭ ಗಳಿಸುವುದು ಸಾಧ್ಯ. ಇಂಥ ಒಂದು ನೀತಿ, ಕಮ್ಯೂನಿಸಂ ಅಲ್ಲದ ಸಾಮಾಜಿಕ ನೀತಿಯಿಂದ ಸಹ ಸಾಧ್ಯವಿರುವಾಗ, ಈ ಸರ್ಕಾರ ಇರುವ ವ್ಯವಸ್ಥೆಯನ್ನು ಹಾಳುಮಾಡಲು ಹೊರಟಂತಿದೆ. ಇದು ನಿಂದನೀಯ. ಸಾಮಾಜಿಕ ಚಳುವಳಿಗಳನ್ನು ನಡೆಸುವವರಿಗೆ ಈ ಕ್ಷೇತ್ರ ಬಾಗಿಲು ತೆರೆದಿದೆ. ಪ್ರಗತಿಪರ ಶಕ್ತಿಗಳು ಮುಂದೆ ಬರಲಿ. ಬಾಬಾಗಳು ಹುಸಿ ರಾಜಕೀಯ ಮಾಡುವ ಬದಲು ಇಂತಹ ವಿಷಯಗಳನ್ನು ಪ್ರಚಾರಮಾಡಿ ಸಾಮಾಜಿಕ ಜನಜಾಗೃತಿ ಉಂಟುಮಾಡಬಹುದಿತ್ತು.

**ಕೆ. ಎಸ್. ಪಾರ್ಥಸಾರಥಿ**
೨೪೭, 'ಬೆಳಕು', ವನಸಿರಿ ಬಡಾವಣೆ, ವಿದ್ಯಾನಗರ, ಬೆಟ್ಟಹಲಸೂರು ಅಂಚೆ, ಬೆಂಗಳೂರು - ೫೬೨ ೧೫೭

## ವಿಷ್ಣು ನಾಯ್ಕ

ಕಳೆದ ಮೂರನೇ ತಾರೀಖಿನಿಂದ ದೇಶ ವಿದೇಶಗಳ ದೈನಿಕಗಳಲ್ಲಿ ಕೇರಳ ರಾಜ್ಯಕ್ಕೆ ಸೇರಿದ ಅನಂತ ಪದ್ಮನಾಭ ದೇಗುಲದ ನೆಲಮಾಳಿಗೆಗಳಲ್ಲಿ ದೊರೆತ - ದೊರಕುತ್ತಿರುವ ಕ್ವಿಂಟಲ್‌ಗಟ್ಟಲೆ ಚಿನ್ನಾಭರಣಗಳದ್ದೇ ಸುದ್ದಿ! ಈ ಲೇಖನ ಸಿದ್ಧವಾಗುವಾಗ ಎಣಿಕೆಯ ಕಾರ್ಯ ನಡೆದೇ ಇತ್ತು. ಈಗಾಗಲೇ ನೂರು ಲಕ್ಷ ಕೋಟಿಗೂ ಹೆಚ್ಚು ಮೌಲ್ಯದ ಚಿನ್ನಾಭರಣ ಮತ್ತಿತರ ಸಂಪತ್ತುಗಳು ಲಭ್ಯವಾಗಿರುವ ಮಾಹಿತಿ ಸಿಕ್ಕಿದೆ.

ಇದು ಯಾರೋ ಹುಟ್ಟಿಸಿದ ಕಥೆಯೆಂದು ಮರೆತುಬಿಡುವಂತಿಲ್ಲ. ಸ್ವತಃ ಸುಪ್ರೀಂ ಕೋರ್ಟು, – ತನ್ನ ಬಳಿ ಬಂದ ಮೇಲ್ಮನವಿಯೊಂದರ ಚರ್ಚೆಯ ಹಿನ್ನೆಲೆಯಲ್ಲಿ ರಚಿಸಿದ ಏಳು ಜನ ನ್ಯಾಯ ಮೂರ್ತಿಗಳ ತಂಡಕ್ಕೆ ದೊರೆತ ಅಧಿಕೃತ ವರದಿ. ಆದ್ದರಿಂದ ಉಡಾಫೆಯ ಸೃಷ್ಟಿಯಾಗಿರಲಂತೂ ಖಂಡಿತ ಸಾಧ್ಯ ಇಲ್ಲ.

ಮಾಧ್ಯಮಗಳಲ್ಲಿ ಬಂದಿರುವ ವರದಿಗಳಲ್ಲಿ ಎಷ್ಟು ಲಕ್ಷ ಕೋಟಿ ಎಂಬ ಬಗ್ಗೆ ವ್ಯತ್ಯಾಸಗಳಿವೆಯೇ ಹೊರತು ನೆಲಮಾಳಿಗೆಯಲ್ಲಿ ರಾಶಿ ಬಿದ್ದ ಚಿನ್ನಾಭರಣಗಳು ಸಿಕ್ಕಿದ ಬಗ್ಗೆ ಎರಡು ಅಭಿಪ್ರಾಯ ಕೂಡ ಇಲ್ಲ. ಸ್ವತಃ ತಿರುವನಂತಪುರ ಜಿಲ್ಲೆಯ ಎಸ್.ಪಿ. ಅವರೇ, 'ಇಷ್ಟು ಪ್ರಮಾಣದ ಸಂಪತ್ತನ್ನು ಕಾಯುವುದಕ್ಕೆ ಪೊಲೀಸ್ ಇಲಾಖೆಗೆ ಖಂಡಿತ ಸಾಧ್ಯವಿಲ್ಲ. ವಿಶೇಷ ತರಬೇತಿ ಇರುವ ಸೇನಾಭದ್ರತಾ ಪಡೆಯೇ ಬೇಕು' ಎಂಬ ಮಾತನ್ನು ಹೇಳಿರುವುದೂ ವರದಿಯಾಗಿದೆ.

ಇದೆಲ್ಲಾ ಯಾರು ಇಟ್ಟದ್ದು - ಮುಂದೆ ಯಾರಿಗೆ ಸೇರಬೇಕು? ದೇವಸ್ಥಾನದ ಆಡಳಿತಕ್ಕೊ - ತಿರುವಾಂಕೂರು ರಾಜಮನೆತನಕ್ಕೊ ಅಥವಾ ಸರಕಾರಕ್ಕೊ ಎಂಬ ಚರ್ಚೆ ನಡೆಯುತ್ತಲೇ ಇದೆ. ಈ ನಡುವೆ ತುಂಬ ಅಪಾಯಕಾರಿಯಾದ ಸುದ್ದಿಗಳನ್ನು ಒಂದೆರಡು ದೈನಿಕಗಳು ದಪ್ಪ ಅಕ್ಷರಗಳಲ್ಲಿ ಪ್ರಕಟಿಸಿವೆ. ಐದು ಕ್ವಿಂಟಲ್ ತೂಕದ ಚಿನ್ನದ ಹಾರವೊಂದು ಸಿಕ್ಕಿದೆ ಎಂಬ ಸುದ್ದಿಯ ಜೊತೆಯಲ್ಲೇ 'ಸ್ವತಃ ಎದ್ದು ಬಂದ ವಿಷ್ಣುಮೂರ್ತಿ!' ಎಂದು ಅಚ್ಚಾದ ವಾರ್ತೆಯದು. ಅಂದರೆ ಈಗ ಸಿಕ್ಕಿರುವ ಲಕ್ಷಕೋಟಿ ಮೌಲ್ಯದ ಸಂಪತ್ತನ್ನು ತಮ್ಮ ಸುಪರ್ದಿಯಲ್ಲಿಟ್ಟುಕೊಳ್ಳಲು, 'ಎದ್ದು ಬಂದ ವಿಷ್ಣುಮೂರ್ತಿ' ಎಂಬ ಕಥೆ ಹೆಣೆಯುವ ಮೂಲಕ, ಹಿತಾಸಕ್ತ ಆಸ್ತಿಕ ವರ್ಗ ಇವೆಲ್ಲವಕ್ಕೂ ದೈವಿಕ ಸ್ಪರ್ಶ ನೀಡುವ ಮೂಲಕ ಸರಕಾರ ಮುಟ್ಟದಂತೆ ಮಾಡುವ ಹುನ್ನಾರು ನಡೆಸಿದಂತಿದೆ.

ಬ್ರಿಟಿಷ್ ಕಾಲಾವಧಿಯಲ್ಲೋ ಅಥವಾ ಅದಕ್ಕಿಂತ ಪೂರ್ವದ ಮೊಘಲರ ಆಳ್ವಿಕೆಯಲ್ಲೋ ಮಣ್ಣರೆಯಲ್ಲಿಟ್ಟು ಕಣ್ಮರೆ ಮಾಡಿದ ಅನೇಕ ಸಂಪತ್ತುಗಳು ಈ ದೇಶದ ಉದ್ದಗಲ ಇದ್ದಿರಬೇಕು ಎಂಬುದಕ್ಕೆ - ಅನಂತ ಪದ್ಮನಾಭ ದೇವಾಲಯದ ನೆಲಮಾಳಿಗೆಗಳಲ್ಲಿ ಬಚ್ಚಿಟ್ಟ ಈ ಲಕ್ಷ ಕೋಟಿ ಸಂಪತ್ತು - ಕಣ್ಣಳತೆಯ ಒಂದು ನಿದರ್ಶನ, ಅಷ್ಟೇ. ಇದು ಯಾರ ಕಾಲಾವಧಿಯದು, ಯಾವ ಅರಸನಿಗೆ ಸೇರಿದ್ದು ಎಂಬುದನ್ನು ಪುರಾತತ್ವ ಇಲಾಖೆಯ ತಜ್ಞರಿಗೆ ಬಿಡೋಣ. ಮುಖ್ಯವಾಗಿ ಯೋಚಿಸಬೇಕಾದದ್ದು ಮುಂಬರುವ ವರ್ಷಗಳಲ್ಲಿ ಇದನ್ನು ಕಾಯುವ ಕೆಲಸವು ಸರಕಾರದ್ದೇ ಅಥವಾ ಈ ಸಂಪತ್ತಿನ ಮೇಲೆ ಸರಕಾರಕ್ಕೆ ಹಕ್ಕಿದೆಯೇ, ಎಂಬುದು. ಈ ಬಗ್ಗೆ ದೇಶದ ಪ್ರಜ್ಞಾವಂತ ಮನಸುಗಳು ಗಂಭೀರವಾಗಿ ಯೋಚಿಸದೇ ಹೋದಲ್ಲಿ ಖಂಡಿತವಾಗಿಯೂ ಹಿತಾಸಕ್ತ ವರ್ಗ ಈ ಭಾರೀ ಮೌಲ್ಯದ ಸಂಪತ್ತನ್ನು ತನ್ನ ಸುಪರ್ದಿಗೆ ತೆಗೆದುಕೊಳ್ಳುವ ಅಪಾಯ ಇಲ್ಲದಿಲ್ಲ.

* * *

ನಾನು ಹೇಳಲೇಬೇಕಾದ ಮುಖ್ಯ ಮಾತು ಬೇರೆಯೇ ಇದೆ. ಆರೆಂಟು ತಿಂಗಳಷ್ಟು ಹಿಂದೆ ಬೆಂಗಳೂರಿನ ಒಂದು ಚಿಂತನಗೋಷ್ಠಿಯಲ್ಲಿ ಪ್ರಸ್ತಾಪವಾದ ಸಂಗತಿಯೊಂದರ ಬಗ್ಗೆ ನಮ್ಮ ಪತ್ರಿಕೆಗಳು ಅಷ್ಟೊಂದು ಮಹತ್ವ ಕೊಟ್ಟಂತೆ ಕಾಣಲಿಲ್ಲ. ''ಮೊನ್ನೆ ತಾನೇ ಆಂಧ್ರ ಸರ್ಕಾರವು ಅಧಿಕೃತವಾಗಿ ಬಿಡುಗಡೆ ಮಾಡಿದ ವರದಿಯಲ್ಲಿ ತಿರುಪತಿ ತಿಮ್ಮಪ್ಪನ ಭಂಡಾರದ ಮೊತ್ತ ಬಹಿರಂಗಪಡಿಸಿದೆ; ಈಗಿರುವಂತೆ, ಐವತ್ತೆರಡು ಸಾವಿರ ಕೋಟಿ ಮೌಲ್ಯದ ಚಿನ್ನ, ಬೆಳ್ಳಿ, ನಗದು ಇರುವುದಾಗಿ ಸರಕಾರದ ಪ್ರಕಟಣೆ ತಿಳಿಸುತ್ತದೆ. ಇಂಥ ಮತ್ತು ಇದಕ್ಕಿಂತಲೂ ಶ್ರೀಮಂತವಾದ ದೇಗುಲಗಳು ಈ ದೇಶದಲ್ಲಿ ಪುಷ್ಕಳವಾಗಿವೆ. ಸುಗ್ರೀವಾಜ್ಞೆಯೊಂದರ



ಮೂಲಕ ರಾಜಧನ ರದ್ದುಮಾಡಿದ, ಹೆಚ್ಚು ಆದಾಯ ತರುತ್ತಿರುವ ಖಾಸಗಿ ಬ್ಯಾಂಕುಗಳನ್ನೆಲ್ಲಾ ರಾಷ್ಟ್ರೀಕರಣ ಮಾಡಿದ ಸರಕಾರಕ್ಕೆ ಕಪ್ಪು ಹಣದ ಕೊಳವಾಗಿರುವ ದೇಗುಲಗಳನ್ನು ತನ್ನ ಸುಪರ್ದಿಗೆ ತೆಗೆದುಕೊಳ್ಳುವ ಇಚ್ಛಾಶಕ್ತಿ ಯಾಕಿಲ್ಲ?'' ಎಂಬ ಪ್ರಶ್ನೆಯನ್ನು ನಾನೇ ಕೇಳಿದ್ದೆ. ಈ ಬಗೆಯ ಕ್ರಾಂತಿಕಾರಿ ಹೆಜ್ಜೆ ಇಡಲು ಇರುವ ಸಮಸ್ಯೆಗಳ ಬಗ್ಗೆ ಯಾದರೂ ನಮ್ಮ ಸಂಸತ್ತು (ಒಮ್ಮೆ ಯಾದರೂ) ಚರ್ಚಿಸಿದ್ದಿದೆಯೇ ?... ನಮ್ಮ ನಡುವಿನ ಜ್ವಲಂತ ಸಮಸ್ಯೆಗಳಲ್ಲಿ ಒಂದೆಂದು ಈ ದೇಶ ಭಾವಿಸಿರುವ ನಕ್ಸಲೈಟ್‌ರ ಧಾಳಿಗೆ ಇಲ್ಲೇ ಎಲ್ಲೋ ಒಂದು ಪರಿಹಾರ ಕಂಡುಕೊಳ್ಳಬಹುದಿತ್ತಲ್ಲ!... ನಕ್ಸಲೈಟರ ಧಾಳಿಗೆ ಹೆಚ್ಚು ಬೆಲೆ ತೆರುತ್ತಿರುವ ಈ ದೇಶದ ಕೆಲವೇ ರಾಜ್ಯಗಳಲ್ಲಿ ಆಂಧ್ರವೂ ಒಂದು. ಆ ರಾಜ್ಯದಲ್ಲಿ ಸ್ವಂತ ನೆಲವಿಲ್ಲದ, ನೆತ್ತಿಯ ಮೇಲೊಂದು ಸೂರಿಲ್ಲದ ಜನರ ಸಂಕಷ್ಟವನ್ನು ಮೂರು ತಿಂಗಳೊಳಗಾಗಿ ಪರಿಹರಿಸಬಲ್ಲಷ್ಟು ಸಂಪತ್ತು ನಮ್ಮ ತಿರುಪತಿ ತಿಮ್ಮಪ್ಪನ ಬಳಿಯೇ ಇದೆ. ಮನಸ್ಸು ಮಾಡಿದರೆ ೨೪ ತಾಸುಗಳಲ್ಲಿ ಈ ದೇಶಕ್ಕಿರುವ ಎಲ್ಲ ವಿದೇಶೀ ಸಾಲಗಳನ್ನು ತೀರಿಸಿ, ಬಡತನವನ್ನು ಓಡಿಸಿ ಬಿಡಬಲ್ಲಷ್ಟು ಸಂಪತ್ತು ಈ ದೇಶದ ದೇಗುಲಗಳ ಭಂಡಾರಗಳಲ್ಲೇ ಇಲ್ಲವೇ ?... ಸರಕಾರಕ್ಕಿರುವ ಇಚ್ಛಾಶಕ್ತಿಯ ಕೊರತೆಯಿಂದಾಗಿಯೇ ಇಂದು ಆ ಸಂಪತ್ತು ಯಾವುದೋ ಒಂದು ಗುಂಪಿನ, ಯಾವುದೋ ಒಂದು ಟ್ರಸ್ಟಿನ ಸ್ವತ್ತಾಗಿ ಉಳಿದುಕೊಂಡಿರುವುದನ್ನು ಮರೆಮಾಚಲು ಹೇಗೆ ಸಾಧ್ಯ ?



ಯಾವ ಊರಿನಲ್ಲಿ ಆಗರ್ಭ ಶ್ರೀಮಂತನೊಬ್ಬ ಸಿಗುತ್ತಾನೋ ಆ ಊರಿನಲ್ಲಿ ಕನಿಷ್ಠ ನೂರು ಕುಟುಂಬಗಳಾದರೂ ಕಡು ಬಡತನದಿಂದ ನಲುಗುತ್ತಿರುತ್ತವೆ. ಇದು ಅತ್ಯಂತ ಸರಳ ತರ್ಕಕ್ಕೆ ಸಿಗಬಹುದಾದ ವಾಸ್ತವ ಸಂಗತಿ. ಸಮುದ್ರ ಸೇರುವುದು ಉರಿಬಿಸಿಲಿನ ಹೊಡೆತ ಸಹಿಸಿಕೊಂಡ ದಿನ್ನೆಯ ಮೇಲಿಂದ ಹರಿದು ಬಂದ ನೀರು ತಾನೇ ?

ನಮ್ಮ ಸಂವಿಧಾನದಲ್ಲಿ ಪ್ರತಿಯೊಬ್ಬನಿಗೂ ಪ್ರತಿಯೊಂದು ಸಂಸ್ಥೆಗೂ ಆಸ್ತಿಯ ಹಕ್ಕು ಖಂಡಿತ ಇದೆ. ಆದರೆ ಆ ಹಕ್ಕು ಅತೀವ ದುರುಪಯೋಗಕ್ಕೆ ಬಳಕೆಯಾಗಿದೆ ಎಂಬುದು ಮೊದಲ ನೋಟಕ್ಕೇ ಅನಿಸುತ್ತಿದ್ದ ಮೇಲೂ ನಮ್ಮನ್ನು ಆಳುತ್ತಿರುವ ಸರಕಾರಕ್ಕೆ (ಯಾವ ಪಕ್ಷದ ಸರಕಾರವೇ ಇರಲಿ) ಇಲ್ಲಿ ತಾನು ನಿರ್ವಹಿಸಬೇಕಾದ ಮಹತ್ತರ ಪಾತ್ರವೊಂದಿದೆ ಎಂದೇಕೆ ಅನಿಸುತ್ತಿಲ್ಲ?... ಈ ಪ್ರಶ್ನೆ ದಶಕದಷ್ಟು ದೀರ್ಘಕಾಲದಿಂದ ನನ್ನಂಥವರನ್ನು ಕಾಡುತ್ತಲೇ ಇದೆ. ಆಸ್ತಿಯ ಹಕ್ಕಿನ ಬಗ್ಗೆ ಘೋಷಿಸಿದ ಸಂವಿಧಾನವೇ ಸಮಾನ ಅವಕಾಶದ ಬಗೆಗೂ ಹೇಳಿದೆಯಲ್ಲವೇ ? ಆದರೆ ಎಲ್ಲರೂ ಈ ದೇಶದಲ್ಲಿ ಸಮಾನ ಅವಕಾಶಗಳನ್ನು ಪಡೆದಿಲ್ಲ ಎಂಬುದೇ ವಾಸ್ತವ ! ಸಾಮಾಜಿಕ ನ್ಯಾಯದ ಬಗ್ಗೆ ಶಾಸನಸಭೆಗಳ ವೇದಿಕೆಗಳಲ್ಲಿ ದೊಡ್ಡ ದೊಡ್ಡ ದನಿ ಎತ್ತಿ ಘರ್ಜಿಸುವ ಜನಪ್ರತಿನಿಧಿಗಳು ಕೂಡ ದೇವಾಲಯಗಳ ಹೆಸರಿನಲ್ಲಿ ಬಳಕೆಗೆ ಬಾರದ ಆಸ್ತಿಯಾಗಿ ಬಿದ್ದಿರುವ ಲಕ್ಷಲಕ್ಷ ಕೋಟಿ ಸಂಪತ್ತುಗಳ ಬಗ್ಗೆ ಚಕಾರ ಎತ್ತುವುದಿಲ್ಲ. ಇದು ಯಾರಪ್ಪನ ಆಸ್ತಿ?... ಅದರ ವಿನಿಯೋಗ ಜನಸಾಮಾನ್ಯರ ಕಲ್ಯಾಣಕ್ಕಾಗಿ ಯಾಕೆ ಬಳಕೆಯಾಗಬಾರದು ?

ದೇವರ ಹೆಸರಿನಲ್ಲಿ ಹಣ ಕೂಡಿಡುವ ದಾರಿಯಷ್ಟು ಸುರಕ್ಷಿತವಾದ ಮಾರ್ಗ ಬೇರೊಂದಿಲ್ಲ ಎಂಬುದು ಸಾಬೀತಾಗಿರುವುದರಿಂದಲೇ ಇತ್ತೀಚಿನ ವರ್ಷಗಳಲ್ಲಿ ಮಠಗಳನ್ನು ಕೂಡ ಇದೇ ಉದ್ದೇಶಕ್ಕಾಗಿ ಬಳಸಿಕೊಳ್ಳಲಾಗುತ್ತಿದೆ. ಕೆಲವು ಮಠಗಳು ಇಂದು ಆಳುವ ಪಕ್ಷಗಳ ಸಂರಕ್ಷಕರಂತೆ ಹೇಳಿಕೆಗಳನ್ನು ನೀಡುತ್ತಿರುವುದರ ಹಿಂದಿರುವ ಕಾರಣ ನಾವು ತಿಳಕೊಂಡಷ್ಟು ಸರಳದ್ದಾಗಿಲ್ಲ. ಚುನಾವಣೆಯ ಸಂದರ್ಭದಲ್ಲಿ ಬಳಸುವುದಕ್ಕಾಗಿ ತೆಗೆದಿಟ್ಟ ಕಪ್ಪುಹಣಕ್ಕೆ ಮಠ-ಮಂದಿರಗಳೇ ಅತ್ಯಂತ ಸುರಕ್ಷಿತ ತಾಣಗಳೆಂದು ನಂಬಿರುವ ಧೂರ್ತ ಮನಸ್ಸುಗಳು ಇವೆ. ಮಠ- ಮಂದಿರಗಳು ಕಪ್ಪು ಹಣದ ರಕ್ಷಣಾ ತಾಣಗಳಾಗಿ ಪರಿವರ್ತನೆಗೊಂಡಿರುವುದರಿಂದಲೇ ಅಲ್ಲಿರುವವರೂ ನಾಜೂಕು ಮಾತುಗಳ ರಾಜಕಾರಣಿ ಗಳಾಗಿ ಪರಿವರ್ತನೆಗೊಂಡಿರುವುದು. ಯಾವ ಸರಕಾರ ಅಧಿಕಾರಕ್ಕೆ ಬಂದರೂ ತಮ್ಮ ಕಾಲು ಹಿಡಿಯಲು ಬಂದೇ ಬರುತ್ತಾರೆಂಬ ಇವರ ನಂಬಿಕೆ ಹುಸಿಯಾಗಲೇ ಇಲ್ಲ. ಅವು ಚುನಾವಣೆಗಳಲ್ಲಿ ಮತ ಬ್ಯಾಂಕುಗಳೂ ಆಗಿರುವುದೇ ಇದಕ್ಕೆಲ್ಲ ಮುಖ್ಯ ಕಾರಣ. ಅತ್ಯಂತ ಅಪಾಯದ ಬೆಳವಣಿಗೆ ಇದು. ಪ್ರಜಾಸತ್ತೆ ಸೊಂಟ ಮುರಕೊಂಡು ಬೀಳುವುದು ಇಂತಲ್ಲೇ !

ನಗದು ರೂಪದಲ್ಲೇ ಇರಲಿ, ಆಭರಣಗಳ ರೂಪದಲ್ಲೇ ಇರಲಿ, ವಿಗ್ರಹಗಳ ರೂಪದಲ್ಲೇ ಇರಲಿ ಒಂದೆಡೆ ಸಂಗ್ರಹವಾಗಿರುವ ಈ ಬಗೆಯ ಸಂಪತ್ತು ಯಾರೊಬ್ಬನ ದುಡಿಮೆಯ ಫಲವೂ ಅಲ್ಲ. ಅದರ ಹಿಂದೆ ಕೋಟಿ ಕೋಟಿ ಜನರ ಬೆವರಿನ ಶ್ರಮ ಇದೆ ಎಂಬ ಎಚ್ಚರ ನಮ್ಮೆಲ್ಲರಲ್ಲಿರಬೇಕು. ಭಕ್ತಿಯ ಹೆಸರಿನಲ್ಲಿ, ಹರಕೆಯ ಹೆಸರಿನಲ್ಲಿ - ಭಯದ ಕಾರಣಕ್ಕಾಗಿ, ಅಪರಾಧಿ ಪ್ರಜ್ಞೆಯಿಂದಾಗಿ ತಪ್ಪುಕಾಣಿಕೆಯ ರೂಪವಾಗಿ – ಹೀಗೆ ಬೇರೆಬೇರೆ ಹೆಸರಿನಲ್ಲಿ ಮಠ-ಮಂದಿರಗಳಿಗೆ ಹಣ ಬರುತ್ತದೆ. ಕಾರಣ ಯಾವುದೇ ಇರಲಿ ಒಟ್ಟಿನಲ್ಲಿ ಅಲ್ಲಿ ಸಂಗ್ರಹವಾದ ಸಂಪತ್ತು ಪ್ರಾಮಾಣಿಕ ದುಡಿಮೆಯದಲ್ಲ; ಜನಸಾಮಾನ್ಯರ ಬೆವರನ್ನು ಕದ್ದದ್ದು! ಯಾರನ್ನೋ ಸುಲಿಗೆ ಮಾಡಿ, ಶ್ರೀಮಂತನಾದವನೊಬ್ಬ ಕೋಟ್ಯಾಧಿಪತಿಯಾದಾಗ ತಿರುಪತಿ ತಿಮ್ಮಪ್ಪನಂಥವನಿಗೆ, ಅನಂತ ಪದ್ಮನಾಭನಂಥವನಿಗೆ ಒಂದಷ್ಟು ಕಾಣಿಕೆ ಕೊಟ್ಟು ಬಂದುಬಿಡುತ್ತಾನೆ. ನೋಡುವವರ ಕಣ್ಣುಗಳಿಗೆ ಆತ ಬಹುದೊಡ್ಡ ದಾನಿ, ಔದಾರ್ಯವಂತ, ದೈವೀ ಭಕ್ತ. ವಾಸ್ತವವಾಗಿ ಆತ ಸುಲಿಗೆಗಾರ ! ನೆಮ್ಮದಿಯ ನಿದ್ದೆಗಾಗಿ ಆತ ಹುಡುಕಿಕೊಂಡ ದಾರಿ ಇದು !

ಇದೆಲ್ಲ ಸರಕಾರಕ್ಕೆ ಮೊದಲು ಅರ್ಥವಾಗಬೇಕು. ಇಂದು ಇಂಡಿಯಾದಲ್ಲಿ ಬಳಕೆಗೆ ಬಾರದ ಸಂಪತ್ತೇನಿವೆಯೋ ಅವನ್ನೆಲ್ಲಾ ಸರಕಾರ ತನ್ನ ಆಸ್ತಿಯೆಂದು ಘೋಷಿಸಬೇಕಾದ ಅನಿವಾರ್ಯತೆ ಇದೆ. **ಅಗತ್ಯವಿದ್ದಲ್ಲಿ ಸಂವಿಧಾನಕ್ಕೇ ತಿದ್ದುಪಡಿ ತರಬೇಕಾದದ್ದಿದೆ.** ಇದಕ್ಕೆ ವಿರೋಧಿಯಾದವರ ಬಣ್ಣವನ್ನು ಜನತೆಯ ಮುಂದೆ ಬಿಚ್ಚಿಟ್ಟು ಜಾಗೃತಿ ಮೂಡಿಸಬೇಕಾದದ್ದಿದೆ.

ಒಂದೆಡೆ ದಯನೀಯ ಹಸಿವು, ನಿರುದ್ಯೋಗ, ಅತಂತ್ರ ಸ್ಥಿತಿ, ವಿದೇಶಿ ಸಾಲ ! ಇನ್ನೊಂದೆಡೆ ಲಕ್ಷ ಲಕ್ಷ ಕೋಟಿ ಸಂಪತ್ತಿನ ಶೇಖರಣೆ ! ಈ ಇಂಬ್ಯಾಲನ್ಸನ್ನು ಬ್ಯಾಲೆನ್ಸಿಗೆ ತರುವವರಾರು ? ಇದು ಜನಪ್ರತಿನಿಧಿಗಳ ಕರ್ತವ್ಯ ತಾನೇ ? ಇಷ್ಟನ್ನೂ ಮಾಡಲಾರದ ವ್ಯವಸ್ಥೆ ಇದ್ದರೇನು ಬಿಟ್ಟರೇನು ? ಸ್ವಾತಂತ್ರ್ಯ ಬಂದು ಆರು ದಶಕಗಳೇ ಕಳೆದುಹೋದವು. ಎರಡು ತಲೆಮಾರು ನೋವು ನಷ್ಟಗಳಲ್ಲೇ ಕಣ್ಮರೆಯಾಯಿತು. ಯುವಜನಾಂಗ ದಿಕ್ಕೆಟ್ಟು ನಿಂತಂತಿದೆ; ಅಂಧಶ್ರದ್ಧೆಗಳು ಅವರೊಳಗೂ ಆತಂಕದ ಗೂಡು ಕಟ್ಟಿದೆ ! ಭಾವುಕ ಜಗತ್ತು ಭಕ್ತಿಯ ಹೆಸರಿನಲ್ಲಿ ಏನೆಲ್ಲಾ ಕಳಕೊಳ್ಳಬಹುದು ಎಂಬುದಕ್ಕೆ ಇಂಡಿಯಾಕ್ಕಿಂತ ದೊಡ್ಡ ಉದಾಹರಣೆ ಪ್ರಪಂಚದಲ್ಲಿ ಇನ್ನೊಂದಿರಲಾರದು.

ಈ ಎಲ್ಲ ಹಿನ್ನೆಲೆಯಲ್ಲಿ ಚಿಂತನೆಗೆ ತೊಡಗಿದಾಗ ಏಳುವ ಸರಳ ಪ್ರಶ್ನೆ, – ಈಗೇನು ದೇಶದುದ್ದಗಲ ಮಠ-ಮಂದಿರಗಳಲ್ಲಿ ಕೋಟಿ ಕೋಟಿ ಬಳಕೆಗೆ ಬಾರದ ಸಂಪತ್ತು ಕೂಡಿಡಲಾಗಿದೆಯಲ್ಲ, ಅವು ಯಾರಪ್ಪನ ಸ್ವತ್ತು ?...

**ವಿಷ್ಣು ನಾಯ್ಕ**
'ಪರಿಮಳ', ಅಂಬಾರಕೊಡ್ಲ, ಅಂಕೋಲಾ - ೫೮೧ ೩೧೪, ಉತ್ತರ ಕನ್ನಡ ಜಿಲ್ಲೆ

ಆಯಿತ್ವಾರದ ವಿಶೇಷವಿಲ್ಲದ ವಿಶೇಷ ಪುರವಣಿಗಳನ್ನು ತಿರುವಿ ಹಾಕುತ್ತಿದ್ದೆ ಬಹುತೇಕ ಓದುಗರಂತೆ. ಕಾಟಾಚಾರದ ಕಾಯಕದಲ್ಲಿ ಕೈಲಾಸವಾದರೂ ಹೇಗೆ ಕಂಡೀತು ? ಪೇಪರುಗಳಲ್ಲಿ ಅಂತಹ ವಿಷಯವಿರಲಿಲ್ಲವೋ, ಸೋಮಾರಿ ಕಾಮಾಲಿ ಕಣ್ಣುಗಳಿಗೆ ವಿಷಯಗಳ ಗ್ರಹಿಕೆ ಆಗಲಿಲ್ಲವೋ; ಬಹುಶಃ ನಮ್ಮಂಥವರನ್ನು ನೋಡಿಯೇ ಪೇಪರ್‌ನವರು ಹಿಂದಿನ ದಿನವೇ ದೃಶ್ಯಮಾಧ್ಯಮದವರು ಚೆಲ್ಲಾಡಿದ್ದ ಮುಸುರೆಗೆ ಶಬ್ದಗಳ ಒಗ್ಗರಣೆಯನ್ನು ಹರಡಿರುತ್ತಾರೆಂದು ನನ್ನ ಬದುಕಿ ಸತ್ತುಳಿದ ಮಿತ್ರನೊಬ್ಬನ ಮನದಾಳದ ನುಡಿ! ಕೆಲವು ದೃಶ್ಯಮಾಧ್ಯಮದವರು ವೀಕ್ಷಕರೆಂದರೆ, ಹಲ್ಲಿ, ಕೆಸರಿನಲ್ಲಿ ಬದುಕುಳಿದ ಕಪ್ಪೆಯೆಂದೇ ತಿಳಿದಂತಿರುತ್ತದೆ. ಏಕೆಂದರೆ, ಒಂದೆರಡು ಶಬ್ದಗಳಲ್ಲಿ ಹೇಳಬೇಕಿದ್ದ ವಿಷಯವನ್ನು ಹತ್ತಾರು ವಾಕ್ಯಗಳಲ್ಲ, ಪ್ಯಾರಾಕ್ಕೂ ಮಿಗುವಷ್ಟು ಪುಳ್ಳ ಮಣ್ಣಿನ ಕ್ವಾರಿಯಂತೆ ಕೊರೆಯುತ್ತಾರೆ. ಹತ್ತಾರು ಅದೇ ಹತ್ಯಾಚಾರ ಮತ್ತು ಅತ್ಯಾಚಾರಗಳ ದೃಶ್ಯಗಳನ್ನೂ ಪುನರಾವರ್ತಿಸಿ ವಾಂತಿಬರಿಸುವುದಿದೆ. ಇವರಿಂದ ಮೆಘಾ ಧಾರಾವಾಹಿಗಳು ಉತ್ತೇಜಿತಗೊಂಡವೋ ಅಥವಾ ಮೆಘಾ ಧಾರಾವಾಹಿಗಳನ್ನು ಇವರೇ ಅನುಸರಿಸುತ್ತಿದ್ದಾರೆಯೋ, ಒಟ್ಟಾರೆ ಈ ವಿಷಯವನ್ನು ಪಿಹೆಚ್.ಡಿ. ಆಕಾಂಕ್ಷಿಗಳು ಸಂಶೋಧಿಸಿದರೆ ಮಾತ್ರ ನಿಜಾಂಶ ತಿಳಿಯಬಹುದು ಎಂಬ ದೂರಾಲೋಚನೆಯ ಗೊಂದಲದ ಹುತ್ತದಲ್ಲಿನ ಗೆದ್ದಲಾಗಿದ್ದೆ. ಗೊಂದಲದ ಗಂಜಳದಲ್ಲಿ ಬಿದ್ದು ಹೊರಳಾಡುವಾಗಲ್ಲವೇ ಮನುಷ್ಯ ನಿರ್ಮಿತ ಕಾಣದ ಆ ದೇವರು ಪ್ರತ್ಯಕ್ಷನಾಗೋದು! ಸಕಾಲದಲ್ಲಿ ಪ್ರತ್ಯಕ್ಷನಾಗದಿದ್ದರೆ, ಬರದಲ್ಲಿ ಸುರಿವಂತೆ ಬೈಗುಳದ ಕೆಂಡಾರ್ಚನೆಯಾಗಲಿಕ್ಕಿಲ್ಲವೇ ? ಆ ಅವಮಾನವನ್ನು ಸಹಿಸಲಾಗದ ದೇವರು ತನಗೆ ಬಿಡುವಿಲ್ಲದಿದ್ದರೆ, ದೇವದೂತನನ್ನು ಕಳಿಸುವುದಿದೆಯಂತೆ. ಆಗಲೇ ಮಿತ್ರ ಕ್ಯಾತ ಅಲಕ್ ನಿರಂಜನ್... ಎಂಬಂತೆ ವಕ್ಕರಿಸಿದ!

ತೆರೆದ ಬಾಗಿಲಲ್ಲಿ ಮೊದಲಿಗೆ ಓತಿಕ್ಯಾತದಂತೆ ತಲೆ ತೂರಿಸಿ, ಮನೆಯೊಳಗೆ ಮನೆಯೊಡೆಯ ಇದ್ದಾನೋ ಇಲ್ಲವೋ... ಎಂಬುದನ್ನು ಖಾತ್ರಿಮಾಡಿಕೊಂಡಿದ್ದ. ಆನಂತರ ಬಾಲದಂತಹ ದೇಹವನ್ನು ಒಳಗೆಳೆಯುವುದರ ಮೂಲಕ ನನ್ನ ಗಮನ ಸೆಳೆದಿದ್ದ. ಭಗವಂತ ಅಣುರೇಣುವಿನಲ್ಲಿದ್ದಾನೆಂದು ಕೇಳಿದ್ದೆ. ಈ ದೇವಾಂಶ ಸಂಭೂತನಲ್ಲಿ ಕೋಟಿ ಕೋಟಿ ಅಣುರೇಣುಗಳು ಇರುವಾಗ ಅವನನ್ನು ದೇವನಲ್ಲ ಕತ್ತೆ, ನಾಯಿ, ನರಿ... ಎನ್ನಲಾಗುತ್ತದೆಯೇ ಎಂಬ ಲಾಜಿಕ್ಕಿನ ಮ್ಯಾಜಿಕ್ಕಿಗೆ ಪ್ರಸನ್ನವದನನಾಗಿ,

''ಬಾರೋಲೆ ಬಾ...ಬಾ... ಸದ್ಯ, ಸಿನೆಮಾ ಮುಗಿದ ಮೇಲೆ ರೆಸ್ಕ್ಯೂ ಆಪರೇಶನ್‌ಗೆ ಬರುವ ಪೊಲೀಸ್ ಪಡೆಯಂತೆ ಬೀಡುಬಿಡಲಿಲ್ಲವಲ್ಲ'' ಎಂದೆ.

''ನಾನ್ಯಾಕೋ 'ಬಾಬಾ' ಆಗ್ಲಿ ಅದಿರ್ಲಿ. ಸಿನೆಮಾದಂಥ ಕ್ಲೈಮ್ಯಾಕ್ಸ್ ಏನಾಗಿತ್ತೋ? ಅದಲ್ಲದ, ನಂದ್ಯಾವಾಗ್ಲೂ ರೀಲ್ ಲೈಫಲ್ಲ ರಿಯಲ್ ಲೈಫ್ ಅಂಬೂದನ್ನ ಮರ್ತುಬಿಟ್ಟೇನೋ ಗೆಳೆಯಾ...'' ಎಂದೆನ್ನುತ್ತಲೇ ಮಾತಿನ ಲಾಠಿಗೆ ಮುಂದಾಗುತ್ತಲೇ, ಬೇರು ಬಿಡುವಷ್ಟು ಕುರ್ಚಿಯಲ್ಲಿ ಕುಂಡಿ ಊರಿ ಮೈಯನ್ನು ಹಿಂಬಂಡಿ ಮಾಡಿದ್ದ.

ಮುಂಜಾನೆಯ ವೇಳೆಗೆ ಗೃಹಸ್ಥ ಇರುವ ಮನೆಗೆ ಬರುವ ಸುಧಾಮರು ಮನೆಯೊಡೆಯನಿಗಿಂತ ಮನೆಯೊಡತಿ ಇದ್ದಾಳೋ ಇಲ್ಲವೋ, ಇದ್ದರೆ ರಜ ಕಳೆದುಕೊಂಡಿದ್ದಾಳೋ ಇಲ್ಲವೋ, ರಾತ್ರಿಯ ಹಳಸಿದ್ದು - ಪಳಸಿದ್ದಕ್ಕೆ ಹೊಸ ಒಗ್ಗರಣೆ ಹಾಕಿ, ಬಡಬಾಗ್ನಿಗೆ ಅಗ್ನಿಶಾಮಕ ಆಗುವಳೋ ಇಲ್ಲವೋ ? ಸಜಾತಿಯ ಧ್ರುವಗಳಾದ ನಾವು ಹಾಳ ಹರಟೆಯಲ್ಲಿ ಒಂದನ್ನೊಂದು ನಿರಾಕರಿಸುವ ಮಟ್ಟದ ಮೆಟ್ಟಲೇರಿದಾಗ ಇಳಿಸಲು ನಿಚ್ಚಣಿಕೆ ಮನೆಯೊಡತಿ ಇರದಿದ್ದರೆ ಹೇಗೆ... ಎಂದು ಚಿಂತಿಸುವ ಮಂದಿಗೆ ಬರವಿಲ್ಲ. ಅದಕ್ಕೆ ಒಮ್ಮೊಮ್ಮೆ ಅಲ್ಲ, ಯಾವಾಗಲೂ ನಮ್ಮ ಕ್ಯಾತ ಅಪವಾದವಾಗಲಾರ... ನನ್ನ ಯೋಚನೆ ಮುಂದುವರಿದಿದ್ದಾಗಲೇ, ಅವನು ತನ್ನ ಕುತ್ತಿಗೆಗೆ ವ್ಯಾಯಾಮ ಮಾಡಿಕೊಳ್ಳುವ ನೆಪದಲ್ಲಿ ಮನೆಯೊಡತಿಯ ಇರುವನ್ನು ಪತ್ತೆ ಹಚ್ಚಿದ್ದ. ಅವನ ಆ ಗ್ರಹಿಸೋ ಗ್ರಹಣಕ್ಕೆ ಗ್ರಹಚಾರ ಬಿಡಿಸುವವಳಂತೆ, ನನ್ನಾಕೆ ಅಂಚೀಕಡ್ಡಿ, ಉಪ್ಪು, ಮೆಣಸಿನಕಾಯಿಯನ್ನು ಬೆಂಕಿಗೆ ಹಾಕಿಬಿಟ್ಟಿದ್ದಳು. ಆ ಸೌಂಡ್ ಸಹಿತ ಘಾಟು ವೇಗವಾಗಿ ನಮ್ಮ ಮೂಗಡರಿ ನೆಗಡಿ, ಸೀನು, ಕೆಮ್ಮುಗಳಿಗೆ ಗುಮ್ಮಿದ್ದರೂ ಕ್ಯಾತ ತಾ ಬಂದುದು ವ್ಯರ್ಥವಾಗಲಿಲ್ಲವೆಂಬಂತೆ ಗಾಂಧಿ ಟೋಪಿಯಂತಿದ್ದ ಮುಖವನ್ನು ಹ್ಯಾಟು ಮಾಡಿದ್ದ! ಖುಲ್ ಜಾ ಸಿಮ್ ಸಿಮ್ ಆದ ಬಾಯಿ ಉಗುಳು ನುಂಗಿಸಿತ್ತು. ಅದನ್ನು ನಾನು ನೋಡಿದ್ದು ಅವನಿಗೆ ತಿಳಿಯಿತು. ಹುಳಿಕಾಯಿ ಕಡಿದವರ ಮುಖ ಮಾಡಿದ. ದಿಕ್ಕು ತಪ್ಪಿಸುವ ಸ್ವಾಮೀಜಿ ತರಹ ಬಾಯಿಬಿಟ್ಟ. ''ನಾ ಬರೂಕ ಮೊದಲಽ ಆರ್‌ಸಿಸಿ ಹಕ್ಕಳಿ ತಲೀಮ್ಯಾಲ ಬೀಳಿಸಿಕೊಂಡವರಂಗ ಕುಂತಿದ್ದೆಲ್ಲ? ಆಯಿತ್ವಾರ ಎಲ್ಲರೂ ರಿಲ್ಯಾಕ್ಸ್ ಮೂಡ್ನಾಗ ಇರ್ತಾರು. ನೀ ನೋಡಿದರಽ...'' ಎಂದು ಅರೆಸತ್ಯವನ್ನು ಮಣ್ಣಲ್ಲಿಡಹತ್ತಿದ್ದ.

''ಏನಿಲ್ಲಾ ಖೋಡಿದ. ದೇವ್ರು ನನ್ನನ್ನ ದೊಡ್ಡಾಂವ್ನ ಮಾಡದ ಎಂಥ ಛೇಷ್ ಮಾಡ್ಯಾನಲ... ಅಂತ



# ಸಣ್ಣವ್ರಾಗಿದ್ರ ಎಷ್ಟು ಛಲೋ ಅಲಽ...



ತಲಿಮ್ಯಾಲ ಕೈ ಹೊತ್ತು ಹರಕಿ ತೀರಸ್ತಿದ್ನೋ ನಿನಾಪನ...'', ಎಂದೆನ್ನುತ್ತ ಪುನಃ ತಲೆ ಮೇಲೆ ಕೈಯಿರಿಸಿಕೊಂಡೆ. ಒಂದು ಕ್ಷಣ ಗಹಗಹಿಸಿದ ಕ್ಯಾತ,

''ನಿನ್ನ ಇಂಥ ಹಾಳು ವಿಚಾರನs ನಿನಗೂ ವೈನಿಗೂ ಹಾವು-ಮುಂಗಸಿ ಪ್ರೇಮದಾಟ ಆಗಾಗ ನಡತಿರೂದು. ಇಡೀ ಪ್ರಪಂಚದೊಳಗ ನಿಕೃಷ್ಟ ಪ್ರಾಣಿ ಅಂದ್ರs ಸೂಕರ ಅಂತಾರು. ಆದರ ಅದಲ್ಲ ನೀನs ನೋಡು. ಸಾಹುಕಾರ್ರು, ಸಿದ್ಧರು, ಸ್ವಾಮಿಗಳನ್ನ ಹಿಡಕೊಂಡು, ಆಶ್ರಯ ಮನೆ ಸಿಗದವರವರೆಗೂ ದೇಶದ ರಾಷ್ಟ್ರಪತಿಯಿಂದ ಎಷ್ಟೋ ವರ್ಷ ಪಾರ್ಟಿಕರ್ತರಾಗಿದ್ರೂ ಟಿಕೆಟ್ಟು ಸಿಗದವರ ತನಕ, ದೇವರಿಗಿಂತ ದೊಡ್ಡವರಾಗಲಿಕ್ಕ ಮತ್ತ ಮ್ಯಾಲ ದೇವದೂತ ಅನಸಿಗೊಳ್ಳಾಕ ಹಗಲೂ-ರಾತ್ರಿ ನಿದ್ದೆ ಇಲ್ಲದೆ ಹೋರಾಡ್ತಾರು. ಆ ಕೆಲಸಕ್ಕೆ ಲಂಚ ರುಸುವತ್ತು ಅಂತ ಮಾಡಬಾರದ್ದನ್ನೆಲ್ಲ ಮಾಡ್ತಾರ. ಹೌದಲ್ಲ?'' ಎಂದ. ನಾನು ಹೌದೆನ್ನುವಂತೆ ಕಿವಿಸಹಿತ ತಲೆ ಅಲ್ಲಾಡಿಸಿದೆ. ''ಅಂಥದರಾಗ ನೀ ಹುಲುಕಡ್ಡಿ...'' ಎನ್ನುತ್ತ ಮಧ್ಯದಲ್ಲಿ ಅಡಕೊತ್ತಿನಂತೆ ಬಾಯಿ ಹಾಕಿ ಅವನ ಮಾತನ್ನು ಅಡಿಕೆಯಂತೆ ಕತ್ತರಿಸಿದ್ದೆ.

''ಅದ್ಕs ನಿನಾಪನ ನಾ ದೊಡ್ಡವನಾಗೋದು ಬ್ಯಾಡಂದದ್ದು. ಮರದಂಗ ಬೆಳಿಯೂದು ಬ್ಯಾಡ. ಸುಂಟರಗಾಳಿ, ಕೆಂಧೂಳಿಗೂ ಬುಡ ಮೇಲಾಗಿ ಉರುಳಾದೂ ಬ್ಯಾಡ. ಅದs ನೀ ಅಂದ್ಯಲ್ಲ ಹುಲುಕಡ್ಡಿ. ಹುಲುಕಡ್ಡಿ ನಾವು ಆಗಿದ್ರs ಆ ಗಾಳಿ ಏನೂ ಮಾಡುವಂಗಿಲ್ಲ. ತಿಳಿತೇನು?'' ಎಂದೆ. ಎಲಾ ಇವನ! ನನ್ನ ಬಂಗಾರದ ಕಡ್ಡಿಯಿಂದ ನನ್ನ ಕಣ್ಣೊಳಗೆ ಆಡಿಸಿಬಿಟ್ಟನಲ್ಲ... ಎಂಬಂತೆ ಮುಖ ಮಾಡಿದ. ನಂತರ ನನ್ನತ್ತ ತನ್ನ ದೇವರ ಕೋಣದಂತೆ ಕಣ್ಣು ಬಿಟ್ಟು, ನಂತರ ಅದು ಹೂಂಕರಿಸುವಂತೆ ಹೂಂಕರಿಸಿದ್ದ.

''ಅದೆಲ್ಲ ಬ್ಯಾಡ. ನಾ ಬರೂ ಮೊದಲ ಭೂ ಹಗರಣ ಮೂಟೆ ತಲಿಮ್ಯಾಲ ಹೊತಗೊಂಡು ಕೂತ ಮುಖ್ಯಮಂತ್ರಿ ಮೋತಿ ಆಗಿತ್ತಲ್ಲ ನಿಂದು ಅದು ಯಾಕಂತ ಹೇಳಾಕ ಹತ್ತಿದವನು ಯಾಕೆ ಇಳದ್ಯಲ್ಲ...''

''ಅದs ದೊಡ್ಡ ದೊಡ್ಡ ಮನುಷ್ಯರಾಗೂದು ಬ್ಯಾಡ. ಜನ್ಮ ಹೋಗುವಾಗ ಉಳಿಸಿಗೊಳ್ರೋ ಅಂತ ವಿಲಿವಿಲಿ ಒದ್ದಾಡೂದು ಬ್ಯಾಡಂತ. ಮೊನ್ನೆ ಮೊನ್ನೆ ನಿಧನರಾದರಲ್ಲ ಬಹುಕೋಟಿಗಿ ಬಾಬಾ ಅಂದ್ರಲ್ಲ. ಅವರ ಸಾಯುತ್ತಿದ್ದ ಮಾತು ಯಾರಿಗೂ ಕೇಳಲಿಲ್ಲ. ಯಾಕಂದ್ರs ಹಿಂದೊಮ್ಮೆ ಅಂತರಂಗ-ಬಹಿರಂಗ ಶುದ್ಧಿ ಇಲ್ಲದ ಜನಮರುಳೋ ಜಾತ್ರಿ ಮರುಳ ಮಾಡಲು ಎಲ್ಲೆಲ್ಲಿಂದ ಏನನ್ನೋ ಬರಿಸಿದರು. ಅಡ್ಡಬಂದವರನ್ನು ಆ ಲೋಕಕ್ಕೇ ಅಟ್ಟಿದರು. ಚೇಲಾಗಳಿಂದ ಕೇಸನ್ನು ದಕ್ಕಿಸಿಕೊಂಡ ಪಾಪಾತ್ಮರ ಪಾದ ಮೃತವಾಗಿರದs ಅಮೃತವಾಗಿರಲಿಕ್ಕೆ ಹೇಗೆ ಸಾಧ್ಯ? ಹಣೆಗೆ ಕಾಲನ್ನೋ ಕಾಲಿಗೆ ಹಣೆಯನ್ನು ತಾಗಿಸಿದವರಲ್ಲಿ ಎಷ್ಟೋ ಕಾಯಕದಲ್ಲಿ ಕೈಲಾಸ ಕಂಡ ಬಸವಣ್ಣನಂಥವರಿರಬಹುದು. ಅಂಥವರ ಪುಣ್ಯದ ಸೋಂಕು ಅಂದ್ರs ಸುಮ್ನೇsನ? ೬೩ ಶಿವಶರಣ/ಣೆಯರೆಲ್ಲ ಸಾಮಾನ್ಯ ಮಂದಿ ಅಂಬೂದು ಆ ಅವರಿಗೆ ಗೊತ್ತಿದ್ದಿಲ್ಲ. ಇಲ್‌ದಿದ್ರ ಅವರ ಶಾಪ ಉಃಶಾಪನ ಮಾಡಿಕೋಬಹುದಿತ್ತು. ಸಾವು ಸೋಂಕದ ವಯಸ್ನಾಗ ಎಲ್ಲ ಬಲ್ಲ ಆ ದೇವ್ರು ಲಿವರ್, ಕಿಡ್ನಿ, ಗಂಟ್ಲುಗಳಂಥ ಅವಯವಗಳನ್ನ ಯಾಕ ನಿಷ್ಕ್ರಿಯೆ ಮಾಡ್ತಿದ್ದ. ಅವರ ಸುತ್ತ-ಮುತ್ತ, ಮೇಲೂ ಕೆಳಗೂ ಸಾವಿತ್ರಿಯಂಥ ಡಾಕ್ಟರ್ ಇದ್ರೂ ಯಮನ ಪಾಶಾನ ಕಟ್ ಮಾಡಾಕ ಯಾಕ ಆಗ್ಲಿಲ್ಲ? ಒಟ್ಟೇನಪ ಅಂದ್ರs, ಭಾರಿ ಭಾರಿ ಖಾವಿ ಮಂದಿಗೂ ಹೀಂಗಾಗೂದಂದ್ರs, ಅವರ ಖಾವಿಯೊಳಗ ಖಾಕಿ ಮತ್ತ ಖಾದಿಗಳು ಮಿಸುಕಾಡುತಿರ್ತಾವು ಅಂಬೂದ, ಹೌದಲ್ಲೋ?...'' ಎಂದೆ.

''ನೀ ಹೇಳಿದ್ ಕೇಳಿದ ಮ್ಯಾಗ, ನನಗೂ ಭಾಳ ಸ್ವಾಮಿಗಳ, ಜೀವಂತ ಕಳ್ಳ ದೇವರ ಲೀಲಾ ವಿನೋದ ಲೀಲೆಗಳು ಮತ್ತು ಕೆಲವರ ಅಂತ್ಯ ನೆನಪಾದವು ನೋಡು. ಭಾಳ ಮಂದಿ ನೆಳ್ಳಿ ನೆಳ್ಳಿ ಸತ್ತರ ಮತ್ತಷ್ಟು ಮಂದಿ ಆ್ಯಕ್ಸಿಡೆಂಟ್‌ನೊಳಗ ಹರೋಹರ ಅಂದಾರ...''

''ಈ ವಿದ್ಯಮಾನ ಇದs ಯುಗಕ್ಕೆ ಸೀಮಿತವಾಗಿಲ್ಲ. ಮಹಾ ರಾಮ ಮಹಾ ಆಯಣ ಕಾಲದ ರಾಮ, ಅವನಪ್ಪ ಅವನ ಪತ್ನಿಗಳ ಅಂತ್ಯ ಗೊತ್ತಿಲ್ಲದವರ್‍ಯಾರು? ಕೃಷ್ಣ ಏನೆಲ್ಲ ಆಟ ಆಡಿಸಿದ. ಕೊನೆಗೆ ವ್ಯಾಧನ ಬಾಣಕ್ಕೆ ತುತ್ತಾದ. ನಮ್ಮ ಯಾವ ರಾಜಕಾರಣಿಗಿಂತ ಕಡಿಮಿ ಆಟ ಆಡಿದನಾ? ಈಗಿನ ಕಾಲದಲ್ಲೂ ದೇವಿಯನ್ನೇ ಒಲಿಸಿಕೊಂಡಿದ್ದ ರಾಮಕೃಷ್ಣ ಪರಮಹಂಸರು, ಅರವಿಂದರು, ಕೊನೆಗೆ ನಮ್ಮ ಮಹಾತ್ಮಾ ಗಾಂಧೀಜಿಯವರು, ಸ್ವಾಮಿ ವಿವೇಕಾನಂದರು... ಕೂಡ ಸುಖಾಂತ್ಯ ಕಾಣಲಿಲ್ಲ... ಅಂತ ಹೇಳುವುದಿದೆಯಲ್ಲೋ...''

''ಅದೆಲ್ಲ ಖರೇನ ಅದ. ಈಗ ಅದನ್ನೆಲ್ಲ ಕಟಗೊಂಡು ನೀ ಏನು ಮಾಡಾಂವಿದ್ದೀ? ನಾವು ಕುರಿಗಳಾಗಿರೋ ತನಕ ಖತರ್‌ನಾಕ ಖಾವಿಗಳು ತ್ವಾಳ ಆಗಿ ಬ್ಯಾಟಿ ಆಡಿಕೋತ ಬೀಗತಿರ್ತಾವು... ಹೌದಲ್ಲೋ?...''

''ಜಡ್ಜಮೆಂಟ್ ಆ ಮ್ಯಾಗಿಗಿರ್ಲಿರೀ ಅಣ್ಣಾವ್ರ. ಮೊದಲು ನಾಷ್ಟಾ ಮಾಡ್ರಿ...'' ಎಂದೆನ್ನುತ್ತ ನನ್ನವಳು ಎರಡು ಪ್ಲೇಟು ನಾಷ್ಟಾ ಇಟ್ಟು ಹೋದಳು. ನಾಷ್ಟಾಕ್ಕೆ ಬಾಯಲ್ಲ, ಕೈ ಹಾಕುತ್ತಲೇ,

''ನಾ ಸಣ್ಣಾವನ ಆಗಿದ್ರಂದ್ರs, ಸುಖದ ಸಾವು ಗ್ಯಾರಂಟಿ ಬರ್ತದ...''

'''ನಿನ್ನ ತೆಲಿ. ಹೆಂಗ ಸತ್ರರ ಏನು. ಸಾವು ಸಾವs. ಅದರಾಗ ಕಷ್ಟದ್ದು ಸುಖದ್ದಂತ ಬ್ಯಾರೆ ಬ್ಯಾರೆ ಇರ್ತಾವೇನೋ ಮಳ್ಳ, ಹಳೇ ಮಳ್ಳ...'' ಎಂದೆನ್ನುತ್ತ ಎಮ್ಮೆಯಷ್ಟು ತುತ್ತನ್ನು ಇಟ್ಟುಕೊಂಡು ಬಾಯಾಡಿಸ ಹತ್ತಿದ. ನನ್ನ ಕಣ್ಣಮುಂದೆ ಊಟ ಮಾಡ ಮಾಡುತ್ತಲೇ ಸತ್ತಂತೆ ಹಗಲುಗನಸು ಕಾಣ ಹತ್ತಿದ್ದೆ; ಮೊನ್ನೆ ಮೊನ್ನೆ ಸುಮಾರು ೨೮ ದಿನ ನರಳಿ ನರಳಿ ಸತ್ತ ಅವಧೂತ ಬಾಬಾನನ್ನು ನೆನೆನೆನೆದು.

*ಲೇಖಕರ ಹೆಸರು ಪ್ರಕಟಿಸದಿರುವುದಕ್ಕೆ ಕ್ಷಮೆ ಇರಲಿ. – ಸಂ.*

## ವಿಲೇವಾರಿ



ವಿಲೇವಾರಿಗಿದೆ ಈ ಮನೆ
ರೀಪು ಪಕಾಸಿ ಹಿರಿದ
ಹಲವು ಕಂಬದ ಈ ಹಳೆಮನೆ
ಆರು ದಶಕದ ಹಿಂದೆ ಇತ್ತು
ಅದರದೇ ಆದ ಗೈರತ್ತು
ಗಾಳಿ ಬೆಳಕಿಗೆ ಸದಾ ತೆರೆದ ಮನೆ
ಮೂಲೆ ಮೂಲೆಗಳಲ್ಲಿ
ಗಂಧವತಿ ಪೃಥ್ವಿಯ ಹೊಸ ಹವೆ.

ಅಜ್ಜ ಹೊರಟುಹೋದ
ಮುಚ್ಚುತ್ತಾ ಬಂತು ಒಂದೊಂದೆ ಕಿಟಕಿ ಬಾಗಿಲು
ಉಳಿದವು ಕೆಲವೇ ಲೆಕ್ಕಕ್ಕೆ
ಮೊಮ್ಮಗನ ಕಾಲಕ್ಕೆ
ಬರುಬರುತ್ತಾ
ಒಳಗೆ ಗವ್ವೆನ್ನುವ ಕತ್ತಲು
ಕಾಗೆ ಗೂಬೆಗಳ ಆವಾಸ ಸ್ಥಾನ.

ಅನಾದಿಯ ದೈದೀಪ್ಯಮಾನ ದೀಪ
ಎಣ್ಣೆ ಬತ್ತಿಯ ಕೊರತೆಯಲ್ಲಿ ಕ್ಷೀಣ
ಒಮ್ಮೆಲೆ
ಬಾಗಿಲು ಮುರಿದು ಬಿರುಗಾಳಿ ಒಳನುಗ್ಗಿತು
ತತ್ತರಿಸಿದ ಅಜ್ಜನ ಆತ್ಮ ಹೇಳಿತು
ವ್ಯರ್ಥ ಈ ಹೊತ್ತಿನ ಪ್ರಭುತ್ವ.

**ಡಾ॥ ಶ್ರೀಕಂಠ ಕೂಡಿಗೆ**
ನಂ. ೧೨, 'ತಕ್ಷಶಿಲಾ', ಜೈಲು ರಸ್ತೆ, ೩ನೇ ಕ್ರಾಸ್, ಶಿವಮೊಗ್ಗ - ೫೭೭ ೨೦೧




ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ

ಕಳೆದ ಸೆಪ್ಟೆಂಬರ್ ತಿಂಗಳಲ್ಲಿ ಕೇಂದ್ರ ಸರ್ಕಾರವು, 'ಜಾತಿವಾರು ಜನಗಣತಿ'ಯನ್ನು ೨೦೧೧ರ ಜೂನ್ ತಿಂಗಳಿನಿಂದ ಪ್ರತ್ಯೇಕ ಕಾರ್ಯಕ್ರಮವಾಗಿ ನಡೆಸಲಾಗುವುದೆಂದು ಪ್ರಕಟಿಸಿದ ಮೇಲೆ ಈ ಬಗೆಗೆ ಬಿರುಸಿನ ಚರ್ಚೆ ನಡೆಯುತ್ತಿದೆ. ಈ ಮೊದಲು ಫೆಬ್ರವರಿ ತಿಂಗಳಲ್ಲಿ ಸಾಮಾನ್ಯ ದಶವಾರ್ಷಿಕ ಜನಗಣತಿಯಲ್ಲೆ ಜಾತಿವಾರು ಮಾಹಿತಿಯನ್ನೂ ಸಂಗ್ರಹಿಸುವುದೆಂದು ತಿಳಿಯಲಾಗಿತ್ತು. ಈಗ ಆ ಮೊದಲಿನ ಆಲೋಚನೆಯನ್ನು ಕೈಬಿಟ್ಟು ಜೂನ್- ಸೆಪ್ಟೆಂಬರ್ ಅವಧಿಯಲ್ಲಿ ಒಂದು ಪ್ರತ್ಯೇಕ ಕಾರ್ಯಕ್ರಮವಾಗಿ ಜಾತಿವಾರು ಜನಗಣತಿಯನ್ನು ಹಮ್ಮಿಕೊಳ್ಳುವ ಕೇಂದ್ರ ಮಂತ್ರಿಮಂಡಲದ ತೀರ್ಮಾನವು ಮೊದಲಿನಿಂದಲೂ ಇದ್ದ ಜಾತಿವಾರು ತಲೆ ಎಣಿಕೆಯು ಅಗತ್ಯವಿದೆಯೆ – ಎಂಬ ಪ್ರಶ್ನೆಯ ಜೊತೆಗೆ ಕೆಲವು ಹೊಸ ಪ್ರಶ್ನೆಗಳೂ ತಲೆ ಎತ್ತಲು ಅವಕಾಶಮಾಡಿಕೊಟ್ಟಿದೆ. ಈ ಕುರಿತು ಚರ್ಚೆಯಲ್ಲಿ ಸಮಾಜಶಾಸ್ತ್ರ– ಅರ್ಥಶಾಸ್ತ್ರ ಪರಿಣತರು, ರಾಜನೀತಿ ತಜ್ಞರು, ಕಾನೂನು ಪಂಡಿತರು – ಹೀಗೆ ಹಲವು ಕ್ಷೇತ್ರಗಳ ವಿದ್ವಾಂಸರು ಭಾಗವಹಿಸಿದ್ದಾರೆ. ಅಲ್ಲದೆ, ಭಾರತೀಯ ಜನಗಣತಿ ಆಯೋಗದ ಮಾಜಿ ಅಧ್ಯಕ್ಷರು ಮತ್ತು ರಿಜಿಸ್ಟ್ರಾರ್ ಅವರೂ ಸಾರ್ವಜನಿಕರೂ ಚರ್ಚೆಗೆ ಜೊತೆಗೂಡಿದ್ದಾರೆ. ಸದರಿ ಚರ್ಚೆಯು ಮುಖ್ಯವಾಗಿ ಎರಡು ಅಂಶಗಳನ್ನು ಒಳಗೊಂಡಿದೆ: ಜಾತಿವಾರು ಜನಗಣತಿಯ ಉದ್ದೇಶವೇನು ? ಎಂಬುದು ಮೊದಲ ಪ್ರಶ್ನೆ. ಒಂದು ವೇಳೆ, ವಿವಿಧ ಜಾತಿಗಳ ಜನರ ತಲೆ ಎಣಿಕೆಯನ್ನು ನಡೆಸುವುದೇ ಆದರೆ ಅದಕ್ಕೆ ಸೂಕ್ತವಾದ ಸಂದರ್ಭ ಮತ್ತು ಕಾಲ ಯಾವುದು ಎಂಬುದು ಎರಡನೆಯ ಪ್ರಶ್ನೆ.

ರಾಷ್ಟ್ರೀಯ ಸಂಪನ್ಮೂಲಗಳು ಮತ್ತು (ಉದ್ಯೋಗ) ಅವಕಾಶಗಳನ್ನು ಯಥಾರ್ಥವಾಗಿ ವಿತರಿಸುವ ಸಲುವಾಗಿ ವಿವಿಧ ಸಮುದಾಯಗಳ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಪರಿಸ್ಥಿತಿಯ ಬಗೆಗೆ ವ್ಯಾಪಕವಾದ ಸಮೀಕ್ಷೆಯ ಮೂಲಕ ವಿಶ್ವಾಸಾರ್ಹವಾದ ಮಾಹಿತಿಯನ್ನು ದೊರಕಿಸಿಕೊಳ್ಳುವುದು ಅತ್ಯಗತ್ಯ; ಖಚಿತ ಮಾಹಿತಿ ಇಲ್ಲದಿದ್ದರೆ 'ಸಾಮಾಜಿಕ ನ್ಯಾಯ'ವನ್ನು ಕಾರ್ಯಗತಗೊಳಿಸಲು ಅಡ್ಡಿಯಾಗುತ್ತದೆ – ಎಂಬುದು ಮೊದಲ ಪ್ರಶ್ನೆಗೆ ಸಂಬಂಧಿಸಿದಂತೆ ದೊರೆಯುವ ಸಮಜಾಯಿಷಿ.

ಕಳೆದ ೧೪೦ ವರ್ಷಗಳ ಜನಗಣತಿಯ ಇತಿಹಾಸದಲ್ಲಿ ಯಾವಾಗಲೂ ಜಾತಿವಾರು ಮಾಹಿತಿಯನ್ನು ಪ್ರತ್ಯೇಕವಾಗಿ ಕಲೆಹಾಕಿಲ್ಲ; ಹಾಗಿರುವಾಗ ೨೦೧೧ರ ಜೂನ್ ತಿಂಗಳಲ್ಲಿ ಜಾತಿವಾರು ಜನಗಣತಿಯನ್ನು ಪ್ರತ್ಯೇಕವಾಗಿ ಕೈಗೊಂಡರೆ ಅದು ಕೇವಲ ಆಯಾ ಜಾತಿಗಳ ಜನರ ತಲೆಯೆಣಿಕೆಯಷ್ಟೇ ಆಗುತ್ತದೆ. ಅಂದರೆ ಇದರಿಂದ ದೊರೆಯುವ ಮಾಹಿತಿಯನ್ನು ಸಾಮಾನ್ಯ ಜನಗಣತಿಯ ಮೂಲಕ ಸಂಗ್ರಹಿಸಿದ ಸಾಮಾಜಿಕ, ಆರ್ಥಿಕ ಪರಿಸ್ಥಿತಿ, ಶೈಕ್ಷಣಿಕ ಮಟ್ಟ, ವೈವಾಹಿಕ ಜೀವನ ವೃತ್ತಿ, ಸರಾಸರಿ ಆಯುಃ ಪ್ರಮಾಣ ಇತ್ಯಾದಿಗಳಿಂದ ಕೂಡಿದ ಜನಾಂಗ ಪರಿಸ್ಥಿತಿ ವಿವರಣೆಯೊಂದಿಗೆ ಸಂಯೋಜನೆಗೊಳಿಸಲು ಸಾಧ್ಯವಾಗುವುದಿಲ್ಲ. ಹೀಗಾಗಿ 'ಪ್ರತ್ಯೇಕ ಜಾತಿವಾರು ಜನಗಣತಿ'ಯೆಂಬುದು ಒಂದು ವ್ಯರ್ಥ ಕಾರ್ಯಾಚರಣೆ ಯಾಗುತ್ತದೆಯೆಂಬುದು ಎರಡನೆಯ ಪ್ರಮುಖ ಆಕ್ಷೇಪಣೆ.

ಜಾತಿವಾರು ಮಾಹಿತಿಯನ್ನು ಪ್ರತ್ಯೇಕವಾಗಿ ಸಂಗ್ರಹಿಸುವುದನ್ನು ವಿರೋಧಿಸಲು ಇನ್ನೂ ಕೆಲವು ಪ್ರಬಲ ಕಾರಣಗಳಿವೆ. ಜನಗಣತಿಯನ್ನು ನಡೆಸಲು ಜೂನ್-ಸೆಪ್ಟೆಂಬರ್ ಅವಧಿಯು ಸೂಕ್ತವಾದ ಕಾಲವಲ್ಲ, ಏಕೆಂದರೆ ಈ ಅವಧಿಯಲ್ಲಿ ಉತ್ತರ ಭಾರತದಲ್ಲಿ ಬಿರುಬೇಸಗೆಯು ಮುಂದುವರಿದಿದ್ದರೆ ದಕ್ಷಿಣ ಭಾರತದಲ್ಲಿ ಇದು ಮುಂಗಾರು ಮಳೆಯ ಕಾಲ. ದೇಶದ ಬಹುತೇಕ ರಾಜ್ಯಗಳಲ್ಲಿ ಶಾಲೆಗಳಿಗೆ ಬೇಸಿಗೆ ರಜ ಮುಗಿದು ಶಾಲೆಗಳು ಪುನರಾರಂಭವಾಗಿರುತ್ತವೆ. ಆದ್ದರಿಂದ ಗಣತಿ ಕಾರ್ಯಕ್ಕೆ ಅಗತ್ಯವಾದ ಸುಮಾರು ೨೧ ಲಕ್ಷ ಉಪಾಧ್ಯಾಯರು ಲಭ್ಯವಿರುವುದಿಲ್ಲ. ಫೆಬ್ರವರಿ-ಮಾರ್ಚ್ ತಿಂಗಳುಗಳಲ್ಲಿ ಸಾಮಾನ್ಯ ಜನಗಣತಿ ಕಾರ್ಯವು ಮುಗಿದು ಎರಡೇ ತಿಂಗಳಲ್ಲಿ ಮತ್ತೊಮ್ಮೆ ಇಂಥ ದೈತ್ಯಾಕಾರದ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು ವಿವೇಕವಲ್ಲ; ಇಡೀ ಕಾರ್ಯಕ್ರಮವು ಹರುಕು ಬಟ್ಟೆಗೆ ತೇಪೆ ಹಾಕಿದಂತೆ ಅಪೂರ್ಣವಾಗುತ್ತದೆ. ಅಲ್ಲದೆ, ಫೆಬ್ರವರಿ-ಮಾರ್ಚ್ ತಿಂಗಳಲ್ಲಿ ಸಾಮಾನ್ಯ ಗಣತಿ ಕಾರ್ಯಕ್ಕೆ ೨೪೦೦ ಕೋಟಿ ರೂಪಾಯಿಗಳು ವೆಚ್ಚವಾಗಿದ್ದರೆ, ಜೂನ್‌ನಲ್ಲಿ ನಡೆಸಲು ಉದ್ದೇಶಿಸಿರುವ ಜಾತಿವಾರು ಜನಗಣತಿಗೆ ೨೦೦೦ ಕೋಟಿ ರೂ. ವೆಚ್ಚವಾಗುವುದೆಂದು ಅಂದಾಜು ಮಾಡಲಾಗಿದೆ. ಸಾಮಾನ್ಯ ಜನಗಣತಿಯ ಜೊತೆ ಜೊತೆಯಲ್ಲಿ ಹೆಚ್ಚಿನ ಹಣವನ್ನು ವೆಚ್ಚ ಮಾಡದೆ ಜಾತಿವಾರು ಮಾಹಿತಿಯನ್ನೂ ಸಂಗ್ರಹಿಸುವ ಸಾಧ್ಯತೆ ಇರುವಾಗ, ಮತ್ತೊಮ್ಮೆ ಇಷ್ಟೊಂದು ಹಣವನ್ನು ವೆಚ್ಚಮಾಡಿ ಪ್ರತ್ಯೇಕವಾಗಿ ಗಣತಿ ಕಾರ್ಯ ನಡೆಸುವುದು ಯಾವ ಪುರುಷಾರ್ಥಕ್ಕೆ ?

ಜಾತಿವಾರು ಜನಗಣತಿಯು ಮುಗಿದ ಅನಂತರ ಜಾತಿ/ಬಣ/ಬುಡಕಟ್ಟು ಮೊದಲಾದವುಗಳನ್ನು ವರ್ಗೀಕರಿಸಲು ಪರಿಣತರ ತಂಡವೊಂದನ್ನು ರಚಿಸಲಾಗುವುದೆಂದು ಪ್ರಕಟಣೆಯು ತಿಳಿಸುತ್ತದೆ. ಇದರ ಬದಲು ಸಾಮಾನ್ಯ ಜನಗಣತಿಗೆ ಪೂರ್ವಭಾವಿಯಾಗಿ ಪರಿಣತರ ತಂಡವನ್ನು ರಚಿಸಿ ಅವರ ಮಾರ್ಗದರ್ಶನದಲ್ಲಿ ಜಾತಿವಾರು ಮಾಹಿತಿಯನ್ನು ಸಂಗ್ರಹಿಸುವುದು ಒಳ್ಳೆಯದು. ಹೀಗೆ ಮಾಡುವುದರಿಂದ ಜನಗಣತಿಯ ಮೂಲಕ ಸಂಗ್ರಹಿಸಲಾದ ಮಾಹಿತಿಗಳಿಗೂ, ಜಾತಿವಾರು ಜನಗಣತಿಯ ಮೂಲಕ ಸಂಗ್ರಹಿಸುವ ಮಾಹಿತಿಗಳಿಗೂ ನಡುವೆ ಉಂಟಾಗುವ ಗೊಂದಲವನ್ನು ನಿವಾರಿಸಬಹುದು.

ಸಾಮಾನ್ಯ ಜನಗಣತಿಯಲ್ಲೆ ಜಾತಿವಾರು ಮಾಹಿತಿಯನ್ನೂ ಸಂಗ್ರಹಿಸಲು ಹೊರಟರೆ ಅದರಿಂದ ಜನಗಣತಿಯ ಮಾಹಿತಿಗಳೇ ಸಂಶಯಾಸ್ಪದವಾಗಿ, ಇಡೀ ಜನಗಣತಿಯ ಉದ್ದೇಶವನ್ನೇ ವಿರೂಪಗೊಳಿಸಬಹುದೆಂಬ ಆರೋಪವೊಂದಿದೆ. ಆ ಆಪಾದನೆಯ ಕಾರಣವೇನೆಂದರೆ, ತಮ್ಮ ಜಾತಿಯ ಜನಸಂಖ್ಯೆಯನ್ನು ಉತ್ಪ್ರೇಕ್ಷಿಸುವ ದೃಷ್ಟಿಯಿಂದ ಪ್ರತಿ ಕುಟುಂಬವೂ ತನ್ನ ಸದಸ್ಯರ ಸಂಖ್ಯೆಯನ್ನು ಹೆಚ್ಚು ಮಾಡಿ ತೋರಿಸಬಹುದೆಂಬುದು. ಆದರೆ ಈ ಆಕ್ಷೇಪಣೆಗೆ ಆಧಾರವಿಲ್ಲ ಏಕೆಂದರೆ ಸಾಮಾನ್ಯ ಜನಗಣತಿಯಲ್ಲಿ ಕುಟುಂಬದ ಪ್ರತಿ ಸದಸ್ಯನ ಹೆಸರು, ಲಿಂಗ, ವಯಸ್ಸು,

ಶಿಕ್ಷಣ, ವೈವಾಹಿಕ ಸ್ಥಿತಿ, ಉದ್ಯೋಗ ಇತ್ಯಾದಿ ಎಲ್ಲ ವಿವರಗಳನ್ನು ದಾಖಲಿಸಲಾಗುತ್ತದೆ. ಆದ್ದರಿಂದ ಯಾವುದೇ ಕುಟುಂಬವೂ ತನ್ನಲ್ಲಿ ಇಲ್ಲದ ಸದಸ್ಯರ ಹೆಸರನ್ನು ಸೇರಿಸಿಬಿಡುವ ಸಾಧ್ಯತೆಯಿಲ್ಲ. ಇನ್ನು, ಅನುಭವದ ಹಿನ್ನೆಲೆಯಲ್ಲಿ ಹೇಳುವುದಾದರೆ, ೧೮೭೧ರಿಂದ ೧೯೩೧ರವರೆಗಿನ ಜಾತಿವಾರು ಮಾಹಿತಿಯನ್ನು ಸಂಗ್ರಹಿಸಿ ಪ್ರಕಟಿಸಿದಾಗ ಮತ್ತು ಅನುಸೂಚಿತ ಜಾತಿ (SC) ಹಾಗೂ ಅನುಸೂಚಿತ ಬುಡಕಟ್ಟುಗಳ (ST)ನ್ನು ಕುರಿತ ೧೯೫೧ರಿಂದ ೨೦೦೧ರ ವರೆಗಿನ ದಾಖಲೆಗಳಲ್ಲಿ, ಕುಟುಂಬದ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಿ ತೋರಿಸಿರುವ ಅಥವಾ ವ್ಯತ್ಯಾಸಗೊಳಿಸಿರುವ ಯಾವುದೇ ಸಂದರ್ಭವು ಗಮನಕ್ಕೆ ಬಂದಿಲ್ಲ.

ಆದ್ದರಿಂದ, ೨೦೧೧ರ ಫೆಬ್ರವರಿ-ಮಾರ್ಚ್ ಅವಧಿಯಲ್ಲಿ ಮನೆ ಮನೆಗಳಿಗೆ ಹೋಗಿ, ಮಾಹಿತಿ ಸಂಗ್ರಹಿಸುವ ಸಾಮಾನ್ಯ ಜನಗಣತಿಯ ತಪ್ಸೀಲಿನಲ್ಲಿ ಅನುಸೂಚಿತ ಜಾತಿ (SC) ಹಾಗೂ ಅನುಸೂಚಿತ ಬುಡಕಟ್ಟು (ST) ಎಂಬ ಅಂಕಣವನ್ನು 'ಜಾತಿ' ಎಂದು ಮರುನಾಮಕರಣ ಮಾಡುವ ಮೂಲಕ (ಯಾವ ಯಾವ ಜಾತಿಗಳು/ಬುಡಕಟ್ಟುಗಳು ಈ ವರ್ಗಗಳಲ್ಲಿ ಸೇರುತ್ತವೆಯೆಂಬುದನ್ನು ಈಗಾಗಲೆ ಪಟ್ಟಿ ಮಾಡಲಾಗಿದೆ. 'ಅನುಸೂಚಿತ' ಜಾತಿ ಅಥವಾ ಬುಡಕಟ್ಟು ಎಂದು ಬಳಸುವುದು ಸರ್ಕಾರಿ ದಾಖಲಾತಿಗಳಿಗಾಗಿಯೆ ಹೊರತು, ವ್ಯಕ್ತಿಗಳು ತಮ್ಮ ಜಾತಿಯನ್ನು ಹೊಲೆಯ, ಮಾದಿಗ, ಎಡಗೈ, ಬಲಗೈ ಲಂಬಾಣಿ, ಹಕ್ಕಿಪಿಕ್ಕಿ – ಎಂದೆಲ್ಲ ಹೇಳಿಕೊಳ್ಳುತ್ತಾರೆಯೆ ಹೊರತು "ಅನುಸೂಚಿತ" ಎಂದೇನೂ ಹೇಳಿಕೊಳ್ಳುವುದಿಲ್ಲ), ಜಾತಿವಾರು ಮಾಹಿತಿಯನ್ನು, ಯಾವುದೇ ಹೆಚ್ಚುವರಿ ಹಣದ (ಅಪ)ವ್ಯಯವಿಲ್ಲದೆ ಸಂಗ್ರಹಿಸಬಹುದಾಗಿದೆ.

ಜಾತಿವಾರು ಜನಗಣತಿಯ ಸಾಧಕ-ಬಾಧಕಗಳ ಬಗೆಗೆ ಕೂಡ ಹಲವು ಬಗೆಯ ಅಭಿಪ್ರಾಯಗಳು ವ್ಯಕ್ತವಾಗಿವೆ. ನಮ್ಮ ದೇಶದಲ್ಲಿ ಜಾತಿ ಮತ್ತು ಸಾಮಾಜಿಕಾರ್ಥಿಕ ಪರಿಸ್ಥಿತಿಗಳ ನಡುವೆ ಪ್ರಬಲವೂ ಸಂಕೀರ್ಣವೂ ಆದ ಹೊಂದಾಣಿಕೆ ಇರುವುದು ಮೇಲುನೋಟಕ್ಕೇ ಕಂಡುಬರುವ ಸಂಗತಿ. ಆದ್ದರಿಂದ ಜಾತಿವಾರು ಜನಗಣತಿಯ ಮೂಲಕ ಸಾಮಾಜಿಕ ಮತ್ತು ಆರ್ಥಿಕ ಸುಧಾರಣೆಗೆ ಅಗತ್ಯವಾದ, ಹೆಚ್ಚು ನಿಷ್ಕೃಷ್ಟವಾದ ಅಂಕಿ-ಅಂಶಗಳ ದಾಖಲೆಗಳನ್ನೊದಗಿಸಿ ಕೊಳ್ಳಬಹುದೆಂದು ಭಾವಿಸಲಾಗಿದೆ. ಒಳಹೊಕ್ಕು ನೋಡಿದರೆ ಜಾತಿವಾರು ಜನಗಣತಿಯ ಉಪಯುಕ್ತತೆಯು ಕೂಡ ಒಂದು ಭ್ರಮೆಯೆಂದೆನಿಸುತ್ತದೆ. ಬ್ರಿಟಿಷರ ಆಡಳಿತ ಕಾಲದಿಂದಲೂ ಜಾರಿಯಲ್ಲಿದ್ದ ಅನುಸೂಚಿತ ಜಾತಿ ಮತ್ತು ಬುಡಕಟ್ಟು ಜನರ ಗಣತಿಯನ್ನು ಹೊರತುಪಡಿಸಿ ಮಿಕ್ಕಂತೆ ಜಾತಿವಾರು ಜನಗಣತಿಯನ್ನು ಸ್ವತಂತ್ರ ಭಾರತವು ಕೈಬಿಟ್ಟಿತ್ತು. ಈಗ ಅದನ್ನು ಪುನಃ ಜಾರಿಗೊಳಿಸುತ್ತಿರುವುದರ ಹಿಂದೆ ಯಾವುದೇ ಘನವಾದ ಉದ್ದೇಶವಿರುವಂತೆ ಭಾಸವಾಗುವುದಿಲ್ಲ. ಇದು ನ್ಯಾಯೋಚಿತವೆನ್ನುವುದಕ್ಕಿಂತ ಹೆಚ್ಚಾಗಿ ರಾಜಕೀಯ ಅನುಕೂಲಕ್ಕಾಗಿ, ಜನರಲ್ಲಿ ಪರಸ್ಪರ ಭೇದಭಾವ ಹುಟ್ಟುಹಾಕುವ ಒಂದು ಹುನ್ನಾರವಾಗಿ ತೋರುತ್ತದೆ. ಹೆಚ್ಚೆಂದರೆ ಜಾತಿವಾರು ಜನಗಣತಿಯಿಂದ ಸಾರ್ವಜನಿಕ ಕ್ಷೇತ್ರದ ಅಲ್ಪಸ್ವಲ್ಪ ಪ್ರಮಾಣದ ಉದ್ಯೋಗಾವಕಾಶಗಳು ದೊರೆಯಬಹುದು, ಅಷ್ಟೆ. ಸಮಾಜಶಾಸ್ತ್ರಜ್ಞೆ ನಂದಿನಿ ಸುಂದರ್ ಗುರುತಿಸುವ ಹಾಗೆ, ಕಳೆದೆರಡು ದಶಕಗಳಲ್ಲಿ ಸರ್ಕಾರೀ ಕ್ಷೇತ್ರದ ಸಾಂಪ್ರದಾಯಕ ಉದ್ಯೋಗಾವಕಾಶಗಳು ತಂತಾನೆ ಕ್ಷೀಣಿಸುತ್ತಿವೆ. ದುಡಿಮೆ ಮಾಡಬಲ್ಲ ಭಾರತೀಯರಲ್ಲಿ ಬಹುಸಂಖ್ಯಾತರು ಅನೌಪಚಾರಿಕ ಖಾಸಗಿ ಕ್ಷೇತ್ರಗಳಲ್ಲಿ ಸರಿಯಾದ ಉದ್ಯೋಗಾವಕಾಶಗಳು ದೊರೆಯದೆ ತೊಳಲಾಡುತ್ತಿದ್ದಾರೆ. ಖಾಸಗಿ ಕ್ಷೇತ್ರಗಳಲ್ಲಿ ಉದ್ಯೋಗಾವಕಾಶಗಳನ್ನೊದಗಿಸುವ ವಿಚಾರದಲ್ಲಿ ಸರ್ಕಾರದ ಪಾತ್ರವು ಶೂನ್ಯ. ಹೀಗಾಗಿ ಜಾತಿವಾರು ಜನಗಣತಿ ಮತ್ತು ಅದರ ಮೂಲಕ ಮೀಸಲಾತಿಯನ್ನು ಒದಗಿಸುವ ಮತ್ತು ಸಾಮಾಜಿಕಾರ್ಥಿಕ ಸಮತೋಲನವನ್ನು ಸಾಧಿಸುವ ನಿರೀಕ್ಷೆಯು ತುಂಬ ದುರ್ಬಲವಾಗಿದೆ.

೨೦೧೧ರ ಜೂನ್-ಸೆಪ್ಟೆಂಬರ್ ತಿಂಗಳಲ್ಲಿ ಮನೆ ಮನೆಗಳಿಗೆ ಭೇಟಿಕೊಟ್ಟು ಜಾತಿವಾರು ಮಾಹಿತಿಯನ್ನು ಸಂಗ್ರಹಿಸಲಾಗುತ್ತದೆಯೆಂಬ ಕೇಂದ್ರ ಮಂತ್ರಿಮಂಡಲದ ನಿರ್ಧಾರಕ್ಕೆ ಆಕ್ಷೇಪಣೆಯು ರಾಜಕೀಯ ದೃಷ್ಟಿಯಿಂದ ಪ್ರೇರಿತವಾದುದಲ್ಲ, ಇದಕ್ಕೆ ವಾಸ್ತವಿಕ ಕಾರಣವೂ ಇದೆ. ಎಲ್ಲ ಆಧುನಿಕ ಸಮಾಜಶಾಸ್ತ್ರಜ್ಞರಿಗೆ ಗೊತ್ತಿರುವ ಹಾಗೆ 'ನಿನ್ನ ಜಾತಿ ಯಾವುದು ?' ಅಥವಾ 'ನೀನು ಯಾವ ಜಾತಿ' – ಎಂಬ ಪ್ರಶ್ನೆಗೆ ಉತ್ತರವು ವೈಯಕ್ತಿಕ ಅಂಶಗಳಿಂದ ಪ್ರಭಾವಿತವಾಗಿದ್ದು ಕೆಲವು ವೇಳೆ ಕುಪ್ರಸಿದ್ಧವೆನ್ನುವಷ್ಟು ವೈವಿಧ್ಯಮಯವಾಗಿರಬಹುದು. ಒಮ್ಮೊಮ್ಮೆ ಗಾಬರಿಗೊಳಿಸುವಷ್ಟು ಉಪಜಾತಿಗಳನ್ನೊಳಗೊಂಡ ನಮ್ಮ ದೇಶದಲ್ಲಿ ಜಾತಿಗಳ ಗಣತಿಯು ಹೇಗೋ - ಕೈಜಾರಿ ಬಿಡುತ್ತದೆ. ಸಂದರ್ಭಕ್ಕೆ ಅನುಗುಣವಾಗಿ (ಉದಾಹರಣೆ: ಮದುವೆ ಅಥವಾ ಮತಧಾರ್ಮಿಕ ಆಚರಣೆ) ಉಪಜಾತಿಗಳ ಹೆಸರು ಮತ್ತು ಸಂಖ್ಯೆಗಳು ಬದಲಾಗುತ್ತವೆ. ವಿಸ್ತಾರವಾದ ಈ ದೇಶದಲ್ಲಿ ಒಂದೇ ಜಾತಿಯ ಹೆಸರು ಬೇರೆ ಬೇರೆ ಪ್ರದೇಶಗಳಲ್ಲಿ ವಿಭಿನ್ನವಾಗಿರುತ್ತದೆ; ಹಾಗೆಯೆ ಜಾತಿಯ ಹೆಸರಿನೊಂದಿಗೆ ಅಂಟಿಕೊಂಡ ಸಾಮಾಜಿಕ ಭಾವನೆಗಳೂ ಬೇರೆ ಬೇರೆಯಾಗಿರುತ್ತವೆ. ಅನೇಕ ಸಂದರ್ಭಗಳಲ್ಲಿ ಜಾತಿಯ ಹೆಸರು ಕಸುಬಿನ ದೃಷ್ಟಿಯಿಂದ ಬೇರೆಯಾಗಿದ್ದು, ಮತಾಚರಣೆಯ ದೃಷ್ಟಿಯಿಂದ ಅದಕ್ಕಿಂತ ಭಿನ್ನವಾಗಿರಲು ಸಾಧ್ಯ. ಉದಾಹರಣೆಗೆ ಮರಗೆಲಸ ಮಾಡುವವರನ್ನು ಅಥವಾ ಚಿನ್ನ ಬೆಳ್ಳಿ ಕೆಲಸಮಾಡುವವರನ್ನು ನಿಮ್ಮ ಜಾತಿ ಯಾವುದು – ಎಂದು ಪ್ರಶ್ನಿಸಿದರೆ ಅವರು ನಾವು 'ಬಡಗಿಗಳು' ಎಂದೋ 'ಅಕ್ಕಸಾಲಿಗರು' ಎಂದೋ ಹೇಳಬಹುದು. ಇದು ಅವರವರ ವೃತ್ತಿಯ ದೃಷ್ಟಿಯಿಂದ 'ಬಂದ ಜಾತಿ'. ಆದರೆ ಇದೇ ಬಡಗಿಗಳು ಅಥವಾ ಅಕ್ಕಸಾಲಿಗರು ಮತಧಾರ್ಮಿಕ ದೃಷ್ಟಿ (ಆಚರಣೆ)ಗಳಿಂದ ಬೇರೆ ಬೇರೆ 'ಜಾತಿ'ಗಳಿಗೆ ಸೇರಿರುತ್ತಾರೆ. ಬ್ರಾಹ್ಮಣರ ಒಂದು ಪಂಗಡದ ಅಕ್ಕಸಾಲಿಗರೂ ಇದ್ದಾರೆ.

ಹನ್ನೊಂದನೇ ಶತಮಾನದ ಅನಂತರದ ಕನ್ನಡ ನಾಡು ಇದಕ್ಕೆ ಒಳ್ಳೆಯ ಉದಾರಣೆಗಳನ್ನೊಗಿಸುತ್ತದೆ. ಜೇಡರ (ನೇಕಾರ) ದಾಸಿಮಯ್ಯ, ಮಾದಾರ (ಮೇದರ) ಚನ್ನಯ್ಯ, ಕುಂಭರ (ಮಡಿಕೆ ಕುಡಿಕೆ ತಯಾರಿಸುವ) ಗುಂಡಯ್ಯ, ಅಂಬಿಗರ (ದೋಣಿ ನಡೆಸುವ) ಚೌಡಯ್ಯ – ಮೊದಲಾದ ಶಿವಶರಣರು ವೃತ್ತಿಯ ದೃಷ್ಟಿಯಿಂದ ಬೇರೆ ಬೇರೆ 'ಜಾತಿ'. ಆದರೆ ಮತಧಾರ್ಮಿಕ ದೃಷ್ಟಿಯಿಂದ ಇವರೆಲ್ಲರೂ 'ಲಿಂಗಾಯಿತ' ಅಥವಾ 'ವೀರಶೈವ' 'ಜಾತಿ'ಗೆ ಸೇರಿದವರು. ಲಿಂಗಾಯಿತರು, ಸಾಮಾನ್ಯವಾಗಿ ರಾಜಕೀಯ ದೃಷ್ಟಿಯಿಂದ 'ಹಿಂದೂ ಧರ್ಮೀಯ'ರೆಂದು ಪರಿಗಣಿಸುತ್ತಾರಾದರೂ ಆಗಾಗ ತಮ್ಮದು ಹಿಂದೂ ಧರ್ಮವಲ್ಲ; ವೀರಶೈವ ಅಥವಾ ಲಿಂಗಾಯಿತರೆಂಬ ಧರ್ಮವು ಹಿಂದೂಧರ್ಮಕ್ಕಿಂತ ಬೇರೆಯಾದುದು – ಎಂಬ ಘೋಷಣೆಗಳು ಕೇಳಿಬರುವುದೂ ಮತ್ತು ಚಳುವಳಿಗಳು ನಡೆಯುವುದೂ ಉಂಟು.

ಈ ಹಿನ್ನೆಲೆಯಲ್ಲಿ ನೋಡಿದಾಗ ೨೧ನೇ ಶತಮಾನದ ಯಾವುದೇ ಜಾತಿವಾರು ಜನಗಣತಿಯು ವಸಾಹತುಶಾಹಿ ಕಾಲದ ಜನಗಣತಿಯು ಎದುರಿಸಿದ ಸಮಸ್ಯೆಗಳನ್ನೇ ಎದುರಿಸಬೇಕಾಗುತ್ತದೆ. ಸ್ವಯಂ ಘೋಷಿತ ಜಾತಿಯ ಹೆಸರನ್ನು ಆಧರಿಸಿ ನಡೆಸುವ



**ಮುತ್ತು**

ಮೈ ಮುಖ ಮೆತ್ತುವ
ಕೆಂಪು ಧೂಳು ಹೊತ್ತು
ದುಡಿವ ಕಪ್ಪು ಹುಡುಗರಿಗೆ
ಬೆವರು ಹನಿಗಳೇ ಮುತ್ತು

ಪುಂಡಲೀಕ ಪಾಟೀಲ
ಬೆಳಗಾವಿ

ಜನಗಣತಿಯ ಮಾರ್ಕ್ ಗ್ಯಾಲೆಂಟರ್ ಎಂಬ ಕಾನೂನು ಪಂಡಿತನು ಅಭಿಪ್ರಾಯಪಟ್ಟಂತೆ ಸಾಮಾಜಿಕ ಮತ್ತು ರಾಜಕೀಯ ಅನುಕೂಲಗಳನ್ನು ಪಡೆಯುವುದಕ್ಕಾಗಿ ಪ್ರತಿಯೊಂದು ಜಾತಿಯೂ ತನ್ನ ಜನಸಂಖ್ಯೆಯನ್ನು ಹಿಗ್ಗಿಸಿ ತೋರಿಸುವ ಮತ್ತು ಪರಸ್ಪರ ಕಚ್ಚಾಟವಾಡುವ ಸಾಧ್ಯತೆ ಇದ್ದೇ ಇದೆ.

– ಈವರೆಗೆ ಹೇಳಿದುದೆಲ್ಲವೂ ೨೦೧೧ರ ಮೇ ಮೂರನೆ ವಾರದಲ್ಲಿ ಕೇಂದ್ರ ಸಚಿವ ಸಂಪುಟವು ಜಾತಿ ಆಧಾರಿತ ಜನಗಣತಿಯನ್ನು ನಡೆಸುವ ತನ್ನ ನಿರ್ಧಾರವನ್ನು ಪುನರುಚ್ಚರಿಸುವವರೆಗಿನದು. ಈಗ ತನ್ನ ಮೊದಲ ಹೇಳಿಕೆಯನ್ನು ಸ್ವಲ್ಪ ಮಾರ್ಪಡಿಸಿ 'ಬಡವರ ಜಾತಿ ಗಣತಿಗೆ' ಸಂಪುಟವು ಒಪ್ಪಿಗೆ ನೀಡಿರುವುದು ಪತ್ರಿಕೆಗಳಲ್ಲಿ ವರದಿಯಾಗಿದೆ. (ಪ್ರಜಾವಾಣಿ : ೨೦-೦೫-೨೦೧೧)

'ಸಬ್ಸಿಡಿ' ಕಾರ್ಯಕ್ರಮಗಳು ಫಲಾನುಭವಿಗಳನ್ನು ತಲುಪಲು ಅನುಕೂಲಮಾಡುವ ದಿಸೆಯಲ್ಲಿ ಬಡವರ ಜಾತಿ ಮತ್ತು ಧರ್ಮಾಧಾರಿತ ಗಣತಿ ನಡೆಸಲು ಕೇಂದ್ರ ಸಚಿವ ಸಂಪುಟ ಒಪ್ಪಿಗೆ ನೀಡಿದೆ. ಗ್ರಾಮೀಣ ಮತ್ತು ಪಟ್ಟಣ ಪ್ರದೇಶಗಳಿಗೆ ಸೇರಿದ, ಬಡತನ ರೇಖೆಗಿಂತ ಕೆಳಗಿರುವವರ (ಬಿಪಿಎಲ್) ಗಣತಿಯು ಜೂನ್‌ನಿಂದ ಡಿಸೆಂಬರ್‌ವರೆಗೆ ನಡೆಯಲಿದೆ. ಸಾಮಾಜಿಕ, ಆರ್ಥಿಕ ಮಾನದಂಡದಲ್ಲಿ ಜಾತಿ ಆಧಾರಿತ ಗಣತಿ ನಡೆಸುವುದಾಗಿ ಸರ್ಕಾರ ಸಂಸತ್ತಿನಲ್ಲಿ ನೀಡಿದ್ದ ಭರವಸೆಯನ್ನು ಈಡೇರಿಸಲು ಈ ತೀರ್ಮಾನಕ್ಕೆ ಬರಲಾಗಿದೆ.

''ದಾಖಲೆ ಬರೆದುಕೊಳ್ಳುವ ಜಂಜಾಟ ತಪ್ಪಿಸಲು ಭಾರತ್ ಎಲೆಕ್ಟ್ರಾನಿಕ್ಸ್ ಕಂಪನಿ ತಯಾರಿಸಿರುವ ಪುಟ್ಟ ಸಾಧನವನ್ನು ಗಣತಿದಾರರಿಗೆ ಒದಗಿಸಲಾಗುತ್ತದೆಯಂತೆ. ಇದರಲ್ಲಿ ಬಡವರ ಮಾಹಿತಿಯನ್ನು ಕಲೆಹಾಕಿ ೧೨ನೇ ಪಂಚವಾರ್ಷಿಕ ಯೋಜನೆಯಲ್ಲಿ ಅಳವಡಿಸಿಕೊಳ್ಳಲಾಗುತ್ತದೆ ಹಾಗೂ ವಿಶಿಷ್ಟ ಗುರುತಿನ ಚೀಟಿ ನೀಡಲು ಈ ಮಾಹಿತಿಯನ್ನು ಬಳಸಲಾಗುತ್ತದೆ...

''ಈ ಬಾರಿ ಗಣತಿಗೆ ಶಿಕ್ಷಕರ ಬದಲು ರಾಜ್ಯ ಸರ್ಕಾರಿ ಸಿಬ್ಬಂದಿಯನ್ನು ಬಳಸಲಾಗುತ್ತದೆ. ಅವರು ಮನೆ ಮನೆಗೆ ತೆರಳಿ ಅಗತ್ಯ ಮಾಹಿತಿ ಸಂಗ್ರಹಿಸಲಿದ್ದಾರೆ... ಈ ಮೊದಲು ಗ್ರಾಮಾಂತರ ಪ್ರದೇಶಗಳಲ್ಲಿ ಇರುವ 'ಬಡತನ ರೇಖೆಗಿಂತ ಕೆಳಗಿನ' ಕುಟುಂಬಗಳ ಸಮೀಕ್ಷೆಯನ್ನು ಮಾತ್ರ ನಡೆಸಲಾಗುತ್ತಿತ್ತು. ಈಗ ಇದೇ ಮೊದಲ ಬಾರಿಗೆ ಪಟ್ಟಣ ಪ್ರದೇಶದ ಬಡಜನರ ವಿವರಗಳನ್ನೂ ಕಲೆ ಹಾಕಲು ನಿರ್ಧರಿಸಲಾಗಿದೆ...

''ಗ್ರಾಮಾಂತರ ಪ್ರದೇಶಗಳ ಬಡವರನ್ನು ಗುರುತಿಸಲು ಹೊಸ ಮಾನದಂಡಗಳನ್ನು ಅಳವಡಿಸಲಾಗಿದೆ. ಒಂದೇ ಕೊಠಡಿಯಿರುವ ಮನೆ, ಯಾವುದೇ ಯುವಕರಿಲ್ಲದ ಮನೆ ಹಾಗೂ ೨೫ ವರ್ಷ ದಾಟಿದ ಅನಕ್ಷರಸ್ಥರಿರುವ ಮನೆ ಇವೇ ಮೊದಲಾದವನ್ನು ಪರಿಗಣಿಸಿ 'ಬಡತನ ರೇಖೆಗಿಂತ ಕೆಳಗಿನವರು' ಎಂದು ನಿರ್ಧರಿಸಲಾಗುತ್ತದೆ.

''ಜಾತಿ ಮತ್ತು ಧರ್ಮದ ವೈಯಕ್ತಿಕ ವಿವರಗಳನ್ನು ಗೌಪ್ಯವಾಗಿಟ್ಟು, ಒಟ್ಟು ವಿವರಗಳನ್ನು ಮಾತ್ರ ಪ್ರತ್ಯೇಕವಾಗಿ ಪ್ರಕಟಿಸಲಾಗುತ್ತದೆ'' ಎನ್ನಲಾಗಿದೆ.

– ಈ ಲೇಖನದ ಮೊದಲ ಭಾಗದಲ್ಲಿ ಎತ್ತಿದ ಕೆಲವು ಪ್ರಶ್ನೆಗಳಿಗೆ ಈ ಹೊಸ ನಿರ್ಧಾರದಲ್ಲಿ ಉತ್ತರ ದೊರಕಿದೆಯೆನ್ನಬಹುದು. ಆದರೆ ಎಲ್ಲ ಪ್ರಶ್ನೆಗಳಿಗೂ ಉತ್ತರ ದೊರಕಿಲ್ಲವೆಂಬುದೂ ನಿಜ. ಜನಗಣತಿ ನಡೆಸಲು ಜೂನ್-ಸೆಪ್ಟೆಂಬರ್ ಸೂಕ್ತ ಕಾಲವಲ್ಲವೆಂಬ ಆಕ್ಷೇಪಣೆ ಇದ್ದೇ ಇದೆ; ಹಾಗೆಯೇ ಮತ್ತೊಮ್ಮೆ ಜನಗಣತಿ ನಡೆಸಲು ತಗುಲಬಹುದಾದ ವೆಚ್ಚವೆಷ್ಟೆಂಬ ಬಗೆಗೆ ಪ್ರಸ್ತಾಪವಿಲ್ಲ. ಆದರೆ ಮುಂದಿನ ಜನಗಣತಿ ಕಾರ್ಯಕ್ಕೆ ಶಾಲಾ ಉಪಾಧ್ಯಾಯರನ್ನು ಬಳಸಿಕೊಳ್ಳುವುದಿಲ್ಲವೆಂದೂ, ದಾಖಲಾತಿ ಬರೆದುಕೊಳ್ಳುವ ಜಂಜಾಟ ತಪ್ಪಿಸಲು ಸಣ್ಣ ಯಂತ್ರಗಳನ್ನು ಒದಗಿಸಲಾಗುವುದೆಂದೂ ಹೇಳಿರುವುದು ಸಮಾಧಾನಕರವಾದ ಅಂಶ. ಪಟ್ಟಣ ಪ್ರದೇಶದ ಬಡಜನರ ವಿವರಗಳನ್ನೂ ಕಲೆ ಹಾಕಲು ನಿರ್ಧರಿಸಿರುವುದೂ ಒಳ್ಳೆಯದೇ. ಆದರೆ, 'ಬಡತನ ರೇಖೆಗಿಂತ ಕೆಳಗಿನವರು' ಎಂದು ನಿರ್ಧರಿಸಲು ಗ್ರಾಮಾಂತರ ಪ್ರದೇಶಗಳಿಗೆ ಅಳವಡಿಸಿರುವ ಹಾಗೆ (ಒಂದೇ ಕೊಠಡಿ ಇರುವ ಮನೆ... ಇತ್ಯಾದಿ) ಪಟ್ಟಣ ಪ್ರದೇಶದ ಬಡವರನ್ನು ಗುರುತಿಸಲು ಯಾವ ಮಾನದಂಡವನ್ನೂ ಸೂಚಿಸಿದಂತಿಲ್ಲ. ಮುಂಬಯಿಯ ಧಾರಾವಿ ಅಥವಾ ಉಲ್ಲಾಸನಗರ ಇಲ್ಲವೆ ಬೆಂಗಳೂರಿನ ಕೊಂಪೆಗಳಲ್ಲಿನ ಜನ ಎಷ್ಟು ಕೊಠಡಿಗಳ ಮನೆಗಳಲ್ಲಿ ವಾಸಿಸುತ್ತಾರೆಂದು ಹೇಳುವುದು ?

ಎಲ್ಲಕ್ಕಿಂತ ಮುಖ್ಯವಾಗಿ ಬಡವರು ಹೊಟ್ಟೆ ತುಂಬಿಸಿಕೊಳ್ಳಲು ಅಗತ್ಯವಾದ ದವಸಧಾನ್ಯಗಳನ್ನು ಕೊಳ್ಳಲು ಒಬ್ಬ ವ್ಯಕ್ತಿಗೆ ದಿನವೊಂದಕ್ಕೆ/ತಿಂಗಳಿಗೆ ಕನಿಷ್ಠ ಎಷ್ಟು ರೂಪಾಯಿಗಳು (ಡಾಲರ್‌ಗಳಾಗಲಿ/ಪೌಂಡ್‌ಗಳಾಗಲಿ ಅಲ್ಲ) ಬೇಕಾಗುತ್ತದೆ ಎಂಬ ಬಗೆಗೆ 'ಬಡವರ ಜಾತಿಗಣತಿ'ಯಲ್ಲಿ ಏನೂ ಹೇಳದಿರುವುದು ವಿಷಾದದ ಸಂಗತಿ.

ಯುಪಿಎ ಸರ್ಕಾರವು ಎರಡು ವರ್ಷಗಳ ಹಿಂದೆಯೇ ಭರವಸೆಕೊಟ್ಟಿದ್ದು 'ಆಹಾರ ಭದ್ರತೆ ಶಾಸನಕ್ಕೆ' ಸಂಬಂಧಿಸಿದಂತೆ ಸರ್ವೋಚ್ಚ ನ್ಯಾಯಾಲಯದ ಮುಂದಿರುವ 'ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆ'ಯೊಂದರ ವಿಚಾರಣೆಯ ಸಂದರ್ಭದಲ್ಲಿ ಯೋಜನಾ ಆಯೋಗದ ಪರವಾಗಿ ''ನಗರ ಪ್ರದೇಶದಲ್ಲಿ ದಿನವೊಂದಕ್ಕೆ ೨೦ ರೂಪಾಯಿಗಳು ಮತ್ತು ಗ್ರಾಮೀಣ ಪ್ರದೇಶದಲ್ಲಿ ೧೫ ರೂಪಾಯಿಗಳು, ಮೂಲಭೂತ ಅಗತ್ಯಗಳನ್ನು ಪೂರೈಸಿಕೊಳ್ಳಲು ಸಾಕಾಗುತ್ತದೆ'' – ಎಂಬ ವಾದ ಮಂಡಿಸಲಾಗಿದೆ. ಅಂದರೆ, ಇದಕ್ಕಿಂತ ಹೆಚ್ಚು ಸಂಪಾದನೆಯುಳ್ಳವರೆಲ್ಲ 'ರಾಷ್ಟ್ರೀಯ ಆಹಾರ ಭದ್ರತೆ ಯೋಜನೆ'ಯಿಂದ ಹೊರಗುಳಿಯುತ್ತಾರೆ. ಹೀಗೆ ೧೫ ಅಥವಾ ೨೦ ರೂಪಾಯಿಗಳ ದಿನದ ಖರ್ಚನ್ನು ಒಟ್ಟುಗೂಡಿಸಿ ತಿಂಗಳಿನ ಖರ್ಚನ್ನು ಲೆಕ್ಕಹಾಕುವಾಗ ಅದರಲ್ಲಿ ಮನೆ ಬಾಡಿಗೆ ಮತ್ತು ಸಾರಿಗೆ ವೆಚ್ಚ ಸೇರಿ ರೂ. ೩೧, ಶಿಕ್ಷಣ ೧೮, ಆಸ್ಪತ್ರೆ+ಔಷಧಗಳ ಖರ್ಚು ೨೫, ತರಕಾರಿ(ಕಾಯಿಪಲ್ಯೆ) ೩೬.೫೦ ಕೂಡ ಸೇರಿಸಲಾಗುತ್ತದೆ ! ಈ ಲೆಕ್ಕಾಚಾರವು ಎಷ್ಟು ಹಾಸ್ಯಾಸ್ಪದವಾಗಿದೆಯೆಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ. ಯೋಜನಾ ಆಯೋಗದ ಅಹ್ಲುವಾಲಿಯಾಗೆ ಇದೇ ಲೆಕ್ಕಾಚಾರದಲ್ಲಿ ಸಂಬಳ ಕೊಟ್ಟರೆ ಸಾಕಲ್ಲ!

ವ್ಯಕ್ತಿಯು ಜೀವನ ನಿರ್ವಹಣೆ ಮಾಡಬೇಕಾದರೆ ದಿನವೊಂದಕ್ಕೆ ಕನಿಷ್ಠಪಕ್ಷ ೨೪೦೦ ಕ್ಯಾಲೊರಿ ಆಹಾರ ಸೇವಿಸುವ ಅಗತ್ಯವಿದೆಯೆಂದು ಸ್ವತಃ ಯೋಜನಾ ಆಯೋಗವೇ ನಿರ್ದೇಶಿಸಿದೆ. ಅಂದರೆ, ಮನೆ ಬಾಡಿಗೆ, ಬಟ್ಟೆ ಬರೆ, ಶಿಕ್ಷಣ, ಸಾರಿಗೆ – ಇತ್ಯಾದಿಗಳನ್ನು ಸೇರಿಸಿಕೊಳ್ಳದಿದ್ದರೂ ದಿನವೊಂದಕ್ಕೆ ಅಂದಾಜು ೪೪ ರೂ.ಗಳನ್ನು ವೆಚ್ಚಮಾಡುವುದು ಅಗತ್ಯವಿದೆ. ಆಯೋಗವು ನಮ್ಮ ದೇಶದಲ್ಲಿ ಬಡತನದ ಪ್ರಮಾಣವು ಶೇಕಡ ೩೩ ಎಂದು ನಿರ್ಣಯಿಸಿದರೆ, ರಾಷ್ಟ್ರೀಯ ಸಲಹಾಮಂಡಲಿಯು ಈ ಪ್ರಮಾಣವು ಶೇಕಡ ೪೬ ಎನ್ನುತ್ತದೆ. ಈ ಎರಡೂ ಲೆಕ್ಕಾಚಾರಗಳು ಶೋಚನೀಯವೆನ್ನುವಷ್ಟು ಕನಿಷ್ಠ ಪ್ರಮಾಣದ್ದಾಗಿವೆ. ದಿವಂಗತ ಅರ್ಜುನ್ ಸೆನ್‌ಗುಪ್ತಾ ಲೆಕ್ಕಾಚಾರ ಮಾಡಿದ ಹಾಗೆ ಭಾರತದ ಜನಸಂಖ್ಯೆಯಲ್ಲಿ ಶೇಕಡ ೭೭ರಷ್ಟು ಮಂದಿ ದಿನವೊಂದಕ್ಕೆ ೨೦ ರೂಪಾಯಿಗಿಂತಲೂ ಕಡಿಮೆ ಸಂಪಾದಿಸುತ್ತಾರೆ.

ಆದ್ದರಿಂದ ಯೋಜನಾ ಆಯೋಗ ಅಥವಾ ರಾಷ್ಟ್ರೀಯ ಸಲಹಾ ಮಂಡಲಿಯ ಕಣ್ಕಟ್ಟಿನ ಲೆಕ್ಕಾಚಾರಗಳಿಂದಾಗಿ ದೇಶದ ಎಲ್ಲ ಜನರಿಗೆ ಆಹಾರ ಭದ್ರತೆಯನ್ನೊದಗಿಸುವ ಭರವಸೆಯು ಕೂಡ ನಗೆಪಾಟಲಾಗಿದೆ.

ಇಂಥ ಹಿನ್ನೆಲೆಯಲ್ಲಿ ನಡೆಯಲಿರುವ 'ಬಡವರ ಜಾತಿಗಣತಿ'ಯು ಏನನ್ನು ಸಾಧಿಸುತ್ತದೆ ? ಅಂತಿಮವಾಗಿ ಜಾತಿವಾರು ಜನಸಂಖ್ಯೆಯ ವಿಂಗಡಣೆಯಾದಮೇಲೆ, ದೇಶದಲ್ಲಿ ಲಭ್ಯವಿರುವ ಉದ್ಯೋಗಾದಿ ಅವಕಾಶಗಳನ್ನು ಜಾತಿವಾರು ಜನಸಂಖ್ಯೆಯ ಅನುಪಾತದಲ್ಲಿ ಹಂಚಲಾಗುತ್ತದೆಯೆ ಅಥವಾ ಮುಕ್ತ ಸ್ಪರ್ಧೆಗೆ ಏನಾದರೂ ಅವಕಾಶವಿರುತ್ತದೆಯೆ ? ಎಂದು ಕೂಡ ಹಲವರು ಪ್ರಶ್ನಿಸುತ್ತಾರೆ. ಸದ್ಯಕ್ಕೆ ಈ ಸಂದೇಹಕ್ಕೆ ಅವಕಾಶವಿಲ್ಲವೆಂದು ತೋರುತ್ತದೆ; ಏಕೆಂದರೆ ಸಂವಿಧಾನಕ್ಕೆ ಅನುಗುಣವಾಗಿ ಮೀಸಲಾತಿಯು ಶೇಕಡ ೫೦ನ್ನು ಮೀರಬಾರದೆಂದು ಸರ್ವೋಚ್ಚ ನ್ಯಾಯಾಲಯವು ತೀರ್ಪು ನೀಡಿದೆ. ಒಂದುವೇಳೆ ಯಾವುದೇ ಕಾರಣಕ್ಕೆ ಈ ಪ್ರಮಾಣವನ್ನು ಮೀರಬೇಕಾದರೆ ಸರ್ವೋಚ್ಚ ನ್ಯಾಯಾಲಯಕ್ಕೆ ಖಚಿತ ಅಂಕಿ ಸಂಖ್ಯೆಗಳನ್ನೊದಗಿಸಿ, ಸೂಕ್ತವಾದ ಕಾರಣವನ್ನು ವಿವರಿಸಬೇಕಾಗುತ್ತದೆ.

ಏನೇ ಆಗಲಿ ಭಾರತದ ಭವಿಷ್ಯವು ಜಾತಿವಾರು ಜನಗಣತಿ, ಮೀಸಲಾತಿಯನ್ನು ಹಂಚಿಕೊಳ್ಳಲು ಜಾತಿ-ಉಪಜಾತಿಗಳ ಕಚ್ಚಾಟ, ಸ್ವಜಾತಿಯ ಬೆಂಬಲದಿಂದ ಮಠಾಧೀಶರೆನ್ನಿಸಿಕೊಳ್ಳುವ ಜಗದ್ಗುರುಗಳು, ಇಂಥ ಗುರುಗಳ ಕೈವಾಡದಿಂದಲೆ ಅಧಿಕಾರ ಚಲಾಯಿಸುವ ಆಡಳಿತ - ಇಷ್ಟರಲ್ಲೆ ಪರ್ಯವಸಾನವಾಗದೆ ಮುಂದೆ ಎಂದಾದರೊಂದು ದಿನ ಜಾತ್ಯತೀತ ಸಮಾಜವನ್ನು ನಿರ್ಮಿಸುವ ಕನಸು ನನಸಾದೀತೆ ? ದೇಶದ ಪ್ರತಿಯೊಬ್ಬನಿಗೂ ಅವನವನ ಸಾಮರ್ಥ್ಯಕ್ಕೆ ಅನುಗುಣವಾದ ದುಡಿಮೆಯ ಅವಕಾಶ ಮತ್ತು ಪ್ರತಿಯೊಬ್ಬನಿಗೂ ಅವನವನ ಕನಿಷ್ಠ ಅಗತ್ಯಕ್ಕೆ ಅನುಗುಣವಾದ ಸೌಲಭ್ಯಗಳು ದೊರೆಯಬೇಕೆಂಬ ಆಸೆ ಈಡೇರೀತೆ ? – ಇಂಥ ಪ್ರಶ್ನೆಗಳಿಗೆ ಸದ್ಯಕ್ಕಂತೂ ಉತ್ತರ ದೊರೆಯುವುದಿಲ್ಲ.

**ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ತಿರುವು, ಕೆ. ಆರ್. ರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

# ಶ್ರೀಲಂಕಾ ತಮಿಳರ ಬವಣೆ

ಅಪರೂಪಕ್ಕೆ ಪತ್ರಕರ್ತರನ್ನು ಭೇಟಿಯಾದ ಪ್ರಧಾನಿ ಶ್ರೀಲಂಕಾದಲ್ಲಿ ಉಗ್ರರನ್ನು ಬಡಿದು ಹಾಕಲಾಗಿದೆ, ಈಗ ಏನಿದ್ದರೂ ಸ್ನೇಹ-ಸೌಹಾರ್ದ-ಅಭಿವೃದ್ಧಿಯ ಪ್ರಶ್ನೆಯಷ್ಟೇ ಉಳಿದಿದೆ, ಎಂದರು. ಉಗ್ರರನ್ನು ಸದೆಬಡಿಯುವ ಭಾಗವಾಗಿ ಜನಸಾಮಾನ್ಯರ ಹತ್ಯೆ, ಪೀಡನೆ, ಅಸ್ತವ್ಯಸ್ತವಾದ ಜೀವನ, ಯಾವುದನ್ನೂ ಅವರು ಪ್ರಸ್ತಾಪಿಸಲಿಲ್ಲ. ಎಲ್‌ಟಿಟಿಇ ಉಗ್ರರಲ್ಲದ ನಾಗರಿಕರು ಕನಿಷ್ಠ ಮೂರು ಲಕ್ಷ ಮಂದಿ ಅತ್ಯಂತ ಕ್ರೂರ ಧಾಳಿಗೆ ತುತ್ತಾದರು. ಗಾಯಗೊಂಡ ನಾಗರಿಕರು ಚಿಕಿತ್ಸೆ ಪಡೆಯುತ್ತಿದ್ದ ಆಸ್ಪತ್ರೆಗಳ ಮೇಲೆ ಸಹ ಶ್ರೀಲಂಕಾ ಸೈನ್ಯ ಬಾಂಬು ಸುರಿಸಿ ಸಾವಿರಾರು ಜನರನ್ನು ಕೊಂದಿದೆ. ಕಡೆಗೆ ಚಿಕಿತ್ಸೆ ನೀಡುತ್ತಿದ್ದ ವೈದ್ಯರ ಬಳಿ ಔಷಧಿ, ಸಲಕರಣೆ, ಯಾವುದೂ ಇಲ್ಲದೆ ದಿನನಿತ್ಯ ಬಳಸುವ ಚಾಕು, ಕತ್ತರಿಗಳಿಂದ ಆಪರೇಷನ್‌ಗಳನ್ನು ಮಾಡಿದ್ದುಂಟು, ಶ್ರೀಲಂಕಾ ಮಿಲಿಟರಿ ತಂತ್ರವನ್ನು ಮಾದರಿಯನ್ನಾಗಿಟ್ಟುಕೊಂಡರೆ ಜನಾಂಗಹತ್ಯೆ ಅನಿವಾರ್ಯವಾದೀತು. ಪ್ರಭಾಕರನ್ ಸಿಕ್ಕಿದ ಮೇಲೂ ನಾಗರಿಕರ ಹತ್ಯೆಗಳಾಗಿವೆ. ಏನಿಲ್ಲವೆಂದರೂ ೪೫,೦೦೦ ನಾಗರಿಕರ ಹತ್ಯೆ ನಡೆದಿದೆಯೆಂದು ವಿಶ್ವಸಂಸ್ಥೆ ನೇಮಿಸಿದ್ದ ಸಮಿತಿ ವರದಿ ಮಾಡಿದೆ.

ಶ್ರೀಲಂಕಾದ ತಮಿಳರೆಲ್ಲರೂ ೧೯ನೆಯ ಶತಮಾನದಲ್ಲಿ ಬ್ರಿಟನ್ನಿನ ಆಣತಿಯಂತೆ ಅಲ್ಲಿಗೆ ಹೋದವರಲ್ಲ. ಶತಮಾನಗಳಿಂದ ಅಲ್ಲೇ ಇದ್ದಾರೆ, ಆಳ್ವಿಕೆ ನಡೆಸಿದ್ದಾರೆ, ಆಳ್ವಿಕೆಗೆ ಒಳಗಾಗಿದ್ದಾರೆ. ೧೫೦೫ರಲ್ಲಿ ಪೋರ್ಚುಗಲ್ ಅಧೀನಕ್ಕೆ ಬಂದಾಗ ಆ ದೇಶದಲ್ಲಿ ತಮಿಳು ಮತ್ತು ಸಿಂಹಳ ರಾಜ್ಯಗಳು ಪ್ರತ್ಯೇಕವಾಗಿದ್ದವು. ೧೭೯೬ರಲ್ಲಿ ಬ್ರಿಟನ್ನಿನ ಆಡಳಿತದಡಿ ಬಂದನಂತರ ೧೮೩೩ರಲ್ಲಿ ಎರಡನ್ನೂ ಒಗ್ಗೂಡಿಸಲಾಯಿತು. ಭಾರತ, ಐರ್ಲೆಂಡ್, ಸೈಪ್ರಸ್, ಕಾಂಗೊ, ಪ್ಯಾಲಿಸ್ಟೈನ್, ಮುಂತಾದೆಡೆ ಒಟ್ಟಾಗಿದ್ದುದನ್ನು ಪ್ರತ್ಯೇಕಿಸಿ ಸಮಸ್ಯೆ ಹುಟ್ಟಿಹಾಕಿದಂತೆ ಶ್ರೀಲಂಕಾದಲ್ಲಿ ಪ್ರತ್ಯೇಕವಾಗಿದ್ದುವನ್ನು ಒಗ್ಗೂಡಿಸಿ ಸಮಸ್ಯೆ ತರಲಾಯಿತು. ಸ್ವಾತಂತ್ರ್ಯಾನಂತರ ೧೯೪೮ರಲ್ಲಿ ಆಜ್ಞೆ ಹೊರಡಿಸಿ ೧೦ ಲಕ್ಷ ತೋಟ ಕಾರ್ಮಿಕರಿಗೆ ಪ್ರಜೆಗಳ ಹಕ್ಕನ್ನು ನಿರಾಕರಿಸಿ, ೧೯೫೬ರಲ್ಲಿ ತಮಿಳು ಭಾಷೆಗೆ ಸ್ಥಾನವಿಲ್ಲದಂತೆ ಮಾಡಿದ್ದು ಅಂದಿನ ಸಿಲೋನಿನಲ್ಲಿ ಘರ್ಷಣೆಗೆ ಕಾರಣವಾಯಿತು. ದೇಶದ ಇಬ್ಭಾಗವೇ ಪರಿಹಾರವೆಂದು ತಮಿಳರು, ಏನಾದರೂ ಸರಿಯೆ ಅದನ್ನು ಮಾಡಲು ಬಿಡುವುದಿಲ್ಲವೆಂದು ಸಿಂಹಳೀಯರು, ತೀವ್ರವಾಗಿ ಸೆಣಸಲಾರಂಭಿಸಿದರು.




ಸಿಂಹಳದ ೨ ಕೋಟಿ ೧೦ ಲಕ್ಷ ಜನಸಂಖ್ಯೆಯಲ್ಲಿ ಸಿಂಹಳಿಗಳು ಶೇಕಡ ೭೪, ತಮಿಳರು ಶೇಕಡ ೧೮ ಮತ್ತು ಇಸ್ಲಾಂ ಧರ್ಮೀಯರು ಶೇಕಡ ೭ ಇದ್ದಾರೆ. ೧೯೫೬ರಿಂದ ಸತತವಾಗಿ ಉತ್ತರ ಶ್ರೀಲಂಕಾದಲ್ಲಿರುವ ತಮಿಳರ ಮೇಲೆ ಹಲ್ಲೆಗಳು ಜರುಗಿವೆ. ಆ ಹಿನ್ನೆಲೆಯಲ್ಲಿ ಎಲ್‌ಟಿಟಿಇ ಉಗ್ರರು ಬೆಳೆದರು. ಆಗ ಜನಸಾಮಾನ್ಯರಿಗೆ ಸರ್ಕಾರ ಮತ್ತು ಎಲ್‌ಟಿಟಿಇ ಎರಡೂ ಕಡೆಗಳಿಂದ ಅತೀವ ಉಪದ್ರವ ಬಂತು, ಎರಡು ಬಣಗಳೂ ಜನರನ್ನು ವಧಾಸ್ಥಾನಕ್ಕೆ ಕೊಂಡೊಯ್ಯಲು ಸಿದ್ಧವಾದವು. ಸೆಪ್ಟೆಂಬರ್ ೨೦೦೮ರಿಂದ ಮೇ ೨೦೦೯ರ ವರೆಗೆ ಶ್ರೀಲಂಕಾ ಸೈನ್ಯವು ಎಲ್‌ಟಿಟಿಇ ಪ್ರದೇಶಗಳತ್ತ ಮುನ್ನಡೆದು ಜಯ ಸಾಧಿಸಿತು. ಆ ವೇಳೆಗೆ ಎರಡೂ ಕಡೆಯಿಂದ ಭೀಕರ ಕೊಲೆಗಳು ನಡೆದಿದ್ದವು. ಸೈನ್ಯವು ತಾನು ಮಾಡಿದ್ದೆಲ್ಲ ಕಾನೂನುಬದ್ಧವೆಂದು ೧೯೮೨ರ ಇಂಡೆಮ್ನಿಟಿ ಆ್ಯಕ್ಟ್‌ನಡಿ ರಕ್ಷಣೆ ಪಡೆಯುತ್ತದೆ, ಎಲ್‌ಟಿಟಿಇಗೆ ಯಾವ ಕಾನೂನಿನ ಚೌಕಟ್ಟೂ ಇಲ್ಲ. ಜೊತೆಗೆ ತುರ್ತುಪರಿಸ್ಥಿತಿ ಘೋಷಣೆಯಿಂದಾಗಿ ಸರ್ಕಾರಕ್ಕೆ ಅತ್ಯಧಿಕ ಅಧಿಕಾರವಿದೆ; ''ಸಾರ್ವಜನಿಕರ ಹಿತಕ್ಕಾಗಿ'' ಮಾಡಿದ್ದು ಎಂದರೆ ಸಾಕು, ತಾನು ಮಾಡಿದ್ದನ್ನೆಲ್ಲಾ ಸಮರ್ಥಿಸಿಕೊಳ್ಳಬಹುದು.

ಇಷ್ಟೊಂದು ಅನಾಗರಿಕ ಹತ್ಯೆಗಳನ್ನು ನಡೆಸಿದ ಶ್ರೀಲಂಕಾ ಸರ್ಕಾರವು ತನ್ನ ಮೇಲಿನ ಆಪಾದನೆಗಳನ್ನು ಮುಚ್ಚಿಹಾಕಲು ಒಂದು ಆಯೋಗ ರಚಿಸಿತು. ''ಕಲಿತ ಪಾಠಗಳು ಮತ್ತು ಮನಸ್ತಾಪ ಪರಿಹಾರ ಆಯೋಗ'' ಎಂದು ಅದರ ಹೆಸರು. ಯಾರ ಕಣ್ಣೂ ಒರೆಸದ, ಯಾವ ಪರಿಹಾರವನ್ನೂ ನೀಡದ, ಕೆಲಸಕ್ಕೆ ಬಾರದ ಆಯೋಗ ಅದು. ಅಂತರರಾಷ್ಟ್ರೀಯ ಟೀಕೆಗೆ ಸರ್ಕಾರದ ಮೋಸದ ಉತ್ತರ ಅದು. ವಿಶ್ವಸಂಸ್ಥೆ ಕಾರ್ಯದರ್ಶಿ ಬಾನ್-ಕಿ-ಮೂನ್ ಮೊದಲೇ ಅಮೆರಿಕಾದ ಕೈಗೊಂಬೆ, ಜೊತೆಗೆ ನಿಷ್ಕ್ರಿಯೆಗೆ ಹೆಸರಾದವನು. ಆತ ಶ್ರೀಲಂಕಾಕ್ಕೆ ಹೋಗಿ ಹೆಲಿಕಾಪ್ಟರಿನಲ್ಲಿ ತಮಿಳು ಪ್ರದೇಶ ನೋಡಿಬಂದ, ಸಾವು-ನೋವು ಅವನ ಮನಸ್ಸಿಗೆ ತಟ್ಟಲಿಲ್ಲ. ನಂತರ ಹಲವು ಮೂಲಗಳಿಂದ ಒತ್ತಡ ಬಂದಾಗ ಒಂದು ಆಯೋಗ ರಚಿಸಿದ. ಅದರ ಮೂರು ಸದಸ್ಯರನ್ನು ಶ್ರೀಲಂಕಾ ಸರ್ಕಾರ ಒಮ್ಮೆಯೂ ಒಳಕ್ಕೆ ಬಿಟ್ಟುಕೊಳ್ಳಲಿಲ್ಲ. ''ನಮ್ಮ ಪ್ರತಿನಿಧಿಗಳನ್ನು ನ್ಯೂಯಾರ್ಕಿನಲ್ಲಿ ಸಂಧಿಸಿ, ಸಾಕು'' ಎಂದ ಅಧ್ಯಕ್ಷ ಮಹಿಂದ ರಾಜಪಕ್ಸೆ. ದೇಶದಲ್ಲಿ ನಡೆದಿದ್ದ ಭೀಕರ ಹತ್ಯಾಕಾಂಡಕ್ಕೆ ಅವನೇಕೆ ಪುರಾವೆ ಒದಗಿಸಿಯಾನು! ೧೯೭೭ರಲ್ಲಿ ಅಧ್ಯಕ್ಷ ಜಯವರ್ಧನೆ ''ಬುದ್ಧನ ಉಪದೇಶಕ್ಕೆ ಅನುಗುಣವಾಗಿ ನ್ಯಾಯಯುತ ಮುಕ್ತ ಸಮಾಜ''ವನ್ನು ನಿರ್ಮಿಸುವುದಾಗಿ ಹೇಳಿದ್ದರು. ಆತ ಅದನ್ನು ಮಾಡಲಿಲ್ಲ, ಬುದ್ಧನ ಅನುಯಾಯಿಗಳೂ ಮಾಡಲಿಲ್ಲ. ಬದಲಾಗಿ, ಅವರು ಗೂಂಡಾಗಳಾಗಿ ತಮಿಳರ ಮನೆಗಳನ್ನು ಸುಟ್ಟರು, ಆಸ್ತಿ ಹಾಳುಮಾಡಿದರು, ಕೊಲೆ ಮಾಡಿದರು. ಎಲ್ಲ ಧರ್ಮಗಳ ಪಾಡೂ ಅದೇ ಇರಬೇಕು : ವಿಧ್ವಂಸಕ ಸನ್ನಿವೇಶಗಳಲ್ಲಿ ಅವು ಪಾತಕಿಗಳೊಡನೆ ಶಾಮೀಲಾಗುತ್ತವೆ. ಹಿಟ್ಲರ್‌ಗೆ ಬೆಂಬಲ ನೀಡಿದ ಚರ್ಚು ಮತ್ತು ಇಸ್ರೇಲಿಗೆ ಕುಮ್ಮಕ್ಕು ನೀಡುವ ಯಹೂದಿ ಧಾರ್ಮಿಕ ನಾಯಕರು ಒಂದೆಡೆ, ನಮ್ಮ ಮಂದಿರ-ಮಸೀದಿ ವೀರರು ಇನ್ನೊಂದೆಡೆ. ಶ್ರೀಲಂಕಾದಲ್ಲಿ ಬೌದ್ಧರು!

''ಎಲ್‌ಟಿಟಿಇ ಒಂದು ಬರ್ಬರ ಸಂಘಟನೆ, ಅದನ್ನು ಸರ್ವಥಾ ಸೋಲಿಸಬೇಕು; ಆದರೆ ಹಾಗೆ ಮಾಡುವಾಗ ತಮಿಳು ನಾಗರಿಕರ ಮೇಲೆ ಹಲ್ಲೆ ಕೂಡದು'' ಎಂದು ಸಿಂಹಳದ ''ಸಂಡೆ ಲೀಡರ್'' ಪತ್ರಿಕೆಯು ಸಂಪಾದಕೀಯ ಬರೆದಿತ್ತು. ಅದೂ ೨೦೦೯ರ ಆಕ್ರಮಣಕ್ಕೆ ಮುಂಚೆ. ಆದರೆ ಸರ್ಕಾರ ಅದಕ್ಕೆ ಓಗೊಡಲಿಲ್ಲ, ತಮಿಳರ ಯಾವ ಆಶಯಕ್ಕೂ ಬೆಲೆ ನೀಡಲಿಲ್ಲ. ವಿಶ್ವಸಂಸ್ಥೆಯ ಆಯೋಗವು ಮಾರ್ಚ್ ೨೦೧೧ರಲ್ಲಿ ಅನೇಕ ಪುರಾವೆಗಳ ಸಮೇತ ತನ್ನ ವರದಿ ಸಲ್ಲಿಸಿ ಶ್ರೀಲಂಕಾ ಸರ್ಕಾರ ಮತ್ತು ಎಲ್‌ಟಿಟಿಇ ಇಬ್ಬರೂ ನಾಗರಿಕರ ಹತ್ಯೆ ನಡೆಸಿದ್ದನ್ನು ದಾಖಲಿಸಿದೆ. ನಾಗರಿಕರ ಮೇಲೆ ಸರ್ಕಾರ ಗುಂಡುಗಳ ಮಳೆ ಸುರಿಸಿತು, ಆಸ್ಪತ್ರೆಗಳಿಗೆ ಬಾಂಬು ಹಾಕಿತು, ಆಹಾರ-ಔಷಧಿ ಇತ್ಯಾದಿಗಳನ್ನು ತಡೆಹಿಡಿಯಿತು, ಮಾನವ ಹಕ್ಕುಗಳನ್ನು ಉಲ್ಲಂಘಿಸಿತು, ಸಂಘರ್ಷ ಇಲ್ಲದಿದ್ದ ಪ್ರದೇಶಗಳಲ್ಲೂ ನಾಗರಿಕರನ್ನು ಕೊಂದಿತು. ಎಲ್‌ಟಿಟಿಇ ನಾಗರಿಕರನ್ನು ಮುಂದಿಟ್ಟು, ಹಿಂದಿನಿಂದ ಧಾಳಿ ಮಾಡಹೋಗಿ ಶ್ರೀಲಂಕಾ ಸೈನಿಕರ ಗುಂಡಿಗೆ ನಾಗರಿಕರ ಆಹುತಿ ನೀಡಿತು, ಅವರ ಹಿಡಿತದಿಂದ ತಪ್ಪಿಸಿಕೊಳ್ಳಲು ಯತ್ನಿಸಿದ ನಾಗರಿಕರನ್ನು ಎಲ್‌ಟಿಟಿಇ ಎಗ್ಗಿಲ್ಲದೆ ಸಂಹರಿಸಿತು, ಪುಟ್ಟ ಮಕ್ಕಳನ್ನು ಕದ್ದೊಯ್ದು ಬಲವಂತವಾಗಿ ಸೈನ್ಯಕ್ಕೆ ಸೇರಿಸಿಕೊಂಡಿತು, ಸೈನ್ಯದ ಕೆಲಸಗಳಲ್ಲಿ ನಾಗರಿಕರನ್ನು ಬಳಸಿಕೊಂಡಿತು, ಆತ್ಮಹತ್ಯಾ ಧಾಳಿಗಳನ್ನು ಕೈಗೊಂಡಿತು. ಒಟ್ಟಿನಲ್ಲಿ ೪೫,೦೦೦ ತಮಿಳು ನಾಗರಿಕರು ಕೊಲ್ಲಲ್ಪಟ್ಟರು, ಮೂರು ಲಕ್ಷ ಮಂದಿ ಇಂದಿಗೂ ನಿರಾಶ್ರಿತರ ಶಿಬಿರಗಳಲ್ಲಿ ಕೊಳೆಯುತ್ತಿದ್ದಾರೆ. ಅಲ್ಲಿ ಎಳ್ಳಷ್ಟು ಸೌಲಭ್ಯವೂ ಇಲ್ಲ. ಮಹಿಳೆಯರ ಮೇಲಿನ ಅತ್ಯಾಚಾರಗಳಿಗಂತೂ ಕೊನೆಯೇ ಇಲ್ಲದಂತಾಗಿದೆ. ಇದೆಲ್ಲಾ ಭಾರತದ ಪ್ರಧಾನಿಯವರ ಗಮನಕ್ಕೆ ಬಂದಿದ್ದರೂ ಅವರು ಮೌನವಾಗಿದ್ದಾರೆ. ಭಾರತೀಯ ಕಮ್ಯುನಿಸ್ಟ್ ಪಕ್ಷವು ತನ್ನೊಂದು ನಿರ್ಣಯದಲ್ಲಿ ಭಾರತ ಸರ್ಕಾರವು ವಿಶ್ವಸಂಸ್ಥೆಯ ಆಯೋಗದ ಶಿಫಾರಸುಗಳನ್ನು ಕಾರ್ಯಗತಗೊಳಿಸಲು ಶ್ರೀಲಂಕಾ ಸರ್ಕಾರವನ್ನು ಒತ್ತಾಯಿಸಬೇಕೆಂದು ಆಗ್ರಹಿಸಿದೆ, ತಮಿಳುನಾಡು ಶಾಸನಸಭೆ ಒಂದು ನಿರ್ಣಯ ಕೈಗೊಂಡಿದೆ. ವಿಶ್ವಸಂಸ್ಥೆಯ ಸಮಿತಿಯ ಶಿಫಾರಸುಗಳು ಮುಖ್ಯವಾಗಿ ಮೂರು : (ಅ) ಸತ್ತವರಲ್ಲದೆ, ನಾಪತ್ತೆಯಾಗಿರುವ ಸಹಸ್ರಾರು ತಮಿಳು ಜನರ ಗತಿ ಏನಾಯಿತೆಂದು ತನಿಖೆ ನಡೆಸಿ; (ಆ) ತುರ್ತುಪರಿಸ್ಥಿತಿಯನ್ನು ಕೊನೆಗೊಳಿಸಿ, ಮತ್ತು (ಇ) ಪ್ರಭುತ್ವದಿಂದ ನಡೆಯುವ ಹಿಂಸೆಯನ್ನು ನಿಲ್ಲಿಸಿ. ಜನರು ನಿರ್ಭೀತರಾಗಿ ಅವರವರ ಊರುಗಳಿಗೆ ತೆರಳುವಂತಾಗಬೇಕು, ಮುಕ್ತವಾಗಿ ಸಂಚರಿಸುವಂತಾಗಬೇಕು, ಉದ್ಯೋಗಗಳನ್ನು ಮತ್ತೆ ಪಡೆಯುವಂತಾಗಬೇಕು. ಅಂತರರಾಷ್ಟ್ರೀಯ ನ್ಯಾಯಾಲಯವೊಂದಿದೆ. ಅದು ಲಿಬ್ಯದ ಅಧ್ಯಕ್ಷ ಗದಾಫಿಯನ್ನು ವಿಚಾರಣೆಗೊಳಪಡಿಸಲು ಸಿದ್ಧವಿದೆ, ರುವಾಂಡಾದ ಒಬ್ಬ ಸಚಿವೆ ಅಲ್ಲಿಯ ಜನಾಂಗ ಹತ್ಯೆಗೆ ಪ್ರೇರೇಪಣೆ ನೀಡಿದ್ದಳಾದ್ದರಿಂದ ಅವಳನ್ನು ಶಿಕ್ಷಿಸಬೇಕು, ಎಂದೆಲ್ಲಾ ಹೇಳುತ್ತದೆ. ಆದರೆ ಅಮೆರಿಕಾ-ಶ್ರೀಲಂಕಾ-ಇಸ್ರೇಲ್ ಮುಂತಾದ ದೇಶಗಳ ಕೊಲೆಪಾತಕ ಅಧ್ಯಕ್ಷರ ಬಗ್ಗೆ ಚಕಾರವೆತ್ತುವುದಿಲ್ಲ. ಅಲ್ಲೆಲ್ಲಾ ವಿಶ್ವಸಂಸ್ಥೆಯು ಕೇವಲ ಪ್ರೇಕ್ಷಕ! ವಿಶ್ವಸಂಸ್ಥೆಯು ಜನಾಂಗ ಹತ್ಯೆಯ ವಿರುದ್ಧ ನಿರ್ಣಯ ಕೈಗೊಂಡು ಎಲ್ಲ ದೇಶಗಳೂ ಅಂತಹ ನಿರ್ಣಯಗಳನ್ನು ಕೈಗೊಳ್ಳಬೇಕೆಂದು ನಿರ್ದೇಶಿಸಿದೆ. ಭಾರತ ಮತ್ತು ಶ್ರೀಲಂಕಾ ಅಂತಹ ಶಾಸನಗಳನ್ನು ಮಾಡಿವೆ, ಆದರೆ ಅವು ಕಾಗದದ ಮೇಲೆಯೇ ಉಳಿದಿವೆ. ಅಮೆರಿಕಾ ಸಹ ಅಂತಹ ಶಾಸನ ಮಾಡಿದೆ, ಆದರೆ ಅದಕ್ಕೆ ಸೆನೆಟ್ ಒಂದು ಷರಾ ಬರೆದಿದೆ, ''ಈ ಶಾಸನವು ಅಮೆರಿಕಾಕ್ಕೆ ಅನ್ವಯವಾಗುವುದಿಲ್ಲ'' ಎಂದು. ಇದನ್ನು ಇತ್ತೀಚೆಗೆ ಬೆಂಗಳೂರಿನಲ್ಲಿ ಪ್ರೊಫೆಸರ್ ಗ್ಲೆನ್ ಮಾರ್ಟಿನ್ ಎಂಬ ಅಮೆರಿಕಾದ ಪ್ರಾಧ್ಯಾಪಕ ತಮ್ಮ ಉಪನ್ಯಾಸದಲ್ಲಿ ತಿಳಿಸಿದರು. ಎಷ್ಟು ಜನರನ್ನು ಕೊಂದರೆ ಅದು ಜನಾಂಗ ಹತ್ಯೆ ಎನಿಸಿಕೊಳ್ಳುತ್ತದೆ ? ೪೫,೦೦೦ ಸಾಲದೇನು ? ಶ್ರೀಲಂಕಾ ಸರ್ಕಾರದ ಮೇಲೆ ಒತ್ತಾಯ ತರಬೇಕಾದ್ದು ಭಾರತದ ಜವಾಬ್ದಾರಿ ಮಾತ್ರವಲ್ಲ, ಅದು ವಿಶ್ವಸಂಸ್ಥೆಯ ಜವಾಬ್ದಾರಿ ಕೂಡ.

ಜಿ. ರಾಮಕೃಷ್ಣ

ರವಿ ರಾ. ಅಂಚನ್



# ಕರಾವಳಿ ಕರ್ನಾಟಕದ ಬಹುತ್ವ ಮತ್ತು ಏಕರೂಪೀಕರಣದ ಅಪಾಯುಗಳು

ಕಾ ಡು ಮತ್ತು ಕಡಲಿನ ನಿಸರ್ಗರಮಣೀಯ ನಾಡು ಕರಾವಳಿ ಕರ್ನಾಟಕ. ಇದರಲ್ಲಿನ ಒಂದು ವಿಶಿಷ್ಟ ಬಹುರೂಪಿ ವಲಯವೇ ತುಳುನಾಡು. ಪ್ರಾಚೀನ ಜನಧ್ವನಿಯಲ್ಲಿ ಇದರ ಭೌಗೋಲಿಕ ಹರಹು ಇಂದಿನ ಉತ್ತರ ಕನ್ನಡ ಜಿಲ್ಲೆಯ ಅಂಕೋಲೆಯಿಂದ ಹಿಡಿದು ಆಧುನಿಕ ಕೇರಳದ ಕಾಸರಗೋಡು ಜಿಲ್ಲೆಯ ಚಂದ್ರಗಿರಿ ನದಿಯವರೆಗೆ ಇದ್ದುದರ ಉಲ್ಲೇಖವಿದೆ. ಅದೇನೇ ಇರಲಿ, ಶಿಲಾಯುಗದಿಂದ ಆಧುನಿಕ ಕಾಲದವರೆಗೂ ಮಾತೃಪ್ರಧಾನ ಸಾಮಾಜಿಕ ವ್ಯವಸ್ಥೆ ಬೇರುಬಿಟ್ಟ ಜನಪದವಿದು. ಜಗದ ಪ್ರಾಚೀನ ಭಾಷೆ ಮತ್ತು ಸಂಸ್ಕೃತಿಗಳಲ್ಲಿ ತುಳುವಿನ ಪರಿಗಣನೆಯೂ ಸೇರಿದೆ. ಅಷ್ಟೇ ಏಕೆ, ಸಹಸ್ರಾರು ವರ್ಷಗಳಿಂದ ಈಜಿಪ್ತ್, ಪರ್ಷಿಯಾ, ರೋಮ್, ಚೀನಾ ಮೊದಲಾದ ಹತ್ತು ಹಲವು ದೇಶಗಳೊಡನೆ ವ್ಯಾಪಾರ - ವ್ಯವಹಾರಗಳ ಸಂಪರ್ಕ ಪಡೆದು ಹೆಸರು ಮಾಡಿದ ಉದ್ಯಮಶೀಲರ ನಾಡು ಇದು. ಆದರೆ ಇಂದು ಅದೇ ತುಳುನಾಡಿನಲ್ಲಿ ಕೋಮು ವಿದ್ವೇಷ ಆವರಿಸಿದೆ. ಒಮ್ಮೆ ದುಡಿದು ತಿನ್ನುವ ದಲಿತರ ಮೇಲೆ, ಇನ್ನೊಮ್ಮೆ ಮುಸ್ಲಿಮರ ಮೇಲೆ, ಮಗದೊಮ್ಮೆ ಕ್ರೈಸ್ತರ ಮೇಲೆ, ಹೆಚ್ಚಾಗಿ ಕೇಸರಿ ಪಡೆಗಳು ಪ್ರಹಾರ ನಡೆಸುತ್ತಲೇ ಇವೆ. ಒಟ್ಟಿನಲ್ಲಿ ಇಲ್ಲಿ ಭಯೋತ್ಪಾದನೆಯ ಬಿತ್ತನೆ ಭರದಿಂದ ಸಾಗಿದೆ. ಆದರೆ ನಮ್ಮ ಚರ್ಚೆಗೆ ಕೇವಲ ಅದರ ಸಾಂಸ್ಕೃತಿಕ ಮತ್ತು ರಾಜಕೀಯ ನೆಲೆಗಳು ಮಾತ್ರ ಗೋಚರಿಸುತ್ತಿವೆ. ಆದರ ಇನ್ನೆರಡು ಮಹತ್ವದ ಮಗ್ಗುಲುಗಳಾದ ಸಾಮಾಜಿಕ ಮತ್ತು ಆರ್ಥಿಕ ನೆಲೆಗಳು ಗುಪ್ತಗಾಮಿನಿಯಾಗುತ್ತಿವೆ. ಇದರಿಂದಾಗಿ ಶ್ರಮಿಕರ ಕತ್ತು ಹಿಸುಕುತ್ತಲೇ ಇರುವ ಬಂಡವಾಳಶಾಹಿ ಪಥದ ಕರಾಮತ್ತುಗಳು ನಿಗೂಢವಾಗಿಯೆ ಉಳಿದುಕೊಳ್ಳುವುದು ಮಾತ್ರವಲ್ಲ, ಇದರಿಂದ ಒಟ್ಟಂದದ ಸ್ಥಳೀಯ ಜನಪದದ ಬಹುತ್ವಗಳೇ ನಲುಗುತ್ತಿವೆ. ಈ ಸಂಕಟಗಳ ಮೂಲವೆಲ್ಲಿ? ತುಳುನಾಡಿನಲ್ಲಿ ಇಂತಹ ಅನರ್ಥ ಮತ್ತು ಅಮಾನವೀಯ ಪರಂಪರೆಯ ಉಗಮ ಮತ್ತು ಪ್ರಯೋಗ ಎಂದಿನಿಂದ ಚಿಗುರೊಡೆಯಿತು ? ಅದು ಪ್ರಾಚೀನವೇ ? ಅಲ್ಲ, ಅರ್ವಾಚೀನವೆ ?

ಈ ಹಿನ್ನೆಲೆಯಲ್ಲಿ ಕ್ರಿಸ್ತಶಕದ ಆರಂಭದಿಂದಲೂ ಊಳಿಗಮಾನ್ಯ ವ್ಯವಸ್ಥೆಯ ವಕ್ತಾರರು ಹರಿಬಿಟ್ಟ ಭಯೋತ್ಪಾದಕ ಪರಂಪರೆಯ ಕಥಾನಕವೊಂದಿದೆ. ಅದೇ ಪರಶುರಾಮನ ಕಟ್ಟುಕಥೆ. ಅಧಿಕಾರಶಾಹಿಗೆ ಈತ ದಶಾವತಾರಿ; ಜಗದ್ರಕ್ಷಕನಾದ 'ಪರಶುರಾಮ'. ಆದರೆ ದುಡಿದು ತಿನ್ನುವವರಿಗೆ ಈತ ಮಾತೃಹಂತಕ ಮಾತ್ರವಲ್ಲ, ನರಹಂತಕನಾದ 'ಕೊಡಲಿರಾಮ'. ಇವನೇ ರೇಣುಕೆ ಮತ್ತು ಜಮದಗ್ನಿ ದಂಪತಿಗಳ ಸುತ. ಈತನೇ ಪಿತೃವಚನ ಪರಿಪಾಲನಾ ಪರಂಪರೆಯ ಪ್ರಬಲ ಸಮರ್ಥಕ! ಮಾತೃಭೂಮಿಯನ್ನು ಪಿತೃಭೂಮಿಯನ್ನಾಗಿ ಪರಿವರ್ತಿಸಲು ಕೊಡಲಿ ಹಿಡಿದ ಪ್ರಾಚೀನ ಕೋಮುವಾದಿ !

ಈ ಕೊಡಲಿರಾಮನ ತಂದೆ ಜಮದಗ್ನಿ ತನ್ನ ಹೆಂಡತಿ ರೇಣುಕೆಯ ಶೀಲದ ಬಗ್ಗೆ ಸಂಶಯಪಟ್ಟು ಮಗ ಪರಶುರಾಮನಿಂದಲೇ ಆಕೆಯ ತಲೆ ಕಡಿಸಿದ ಎನ್ನುವ ಈ ಕೊಡಲಿರಾಮನ ಕಥೆಯಲ್ಲಿ 'ಮಾತೃಭೂಮಿ' ಎಂಬ ತುಳುವರ ನೆಲಮೂಲದ ಪರಿಕಲ್ಪನೆಯನ್ನೇ 'ಪಿತೃಭೂಮಿ' ಎಂಬ ಪರಿಕಲ್ಪನೆಯನ್ನಾಗಿಸಿ ಪರಿವರ್ತಿಸುವ ಬಹುರೂಪಿ ಭಯೋತ್ಪಾದನೆಯ ಹುನ್ನಾರು ದಟ್ಟವಾಗಿ ಗೋಚರಿಸುತ್ತದೆ. ಯಾಕೆಂದರೆ ಇದೇ ಮಾತೃಹಂತಕ ಪರಶುರಾಮ ತನ್ನ ತಂದೆ ಜಮದಗ್ನಿಯನ್ನು ಕೊಂದ ಹಿನ್ನೆಲೆಯಲ್ಲಿ ಮಾಹಿಷ್ಮತಿಯ ಅರಸು ಕಾರ್ತವೀರ್ಯಾರ್ಜುನನ ಮಕ್ಕಳ ಮೇಲೆ ತಿರುಗಿಬಿದ್ದು, ಪ್ರತಿಹಿಂಸೆಯ ನೆಲೆಯಲ್ಲಿ ಅವರ ತಲೆ ಕಡಿಯುತ್ತಾನೆ. ಇದಕ್ಕೆ ಕಾರಣ ಈ ಹಿಂದೆ 'ಕಪಿಲೆ' ಎನ್ನುವ





ಗೋವೊಂದರ ಸ್ವಾಮಿತ್ವದ ನಿಮಿತ್ತ ಬ್ರಾಹ್ಮಣ ಕೊಡಲಿರಾಮ ಮತ್ತು ಕ್ಷತ್ರಿಯ ಕಾರ್ತವೀರ್ಯಾರ್ಜುನನಿಗೆ ನಡೆದ ವಾಗ್ವಾದವೇ ಆಗಿದೆ. ಅದು ಕೊನೆಗೂ ಕಾರ್ತವೀರ್ಯಾರ್ಜುನನ ತಲೆ ಕಡಿಯುವ ಹಿಂಸೆಯ ಘಟನೆಯೊಂದಿಗೆ ವರ್ಗ-ವರ್ಣ-ಜಾತಿ ಎಂಬ ತ್ರಿವಳಿ ದ್ವೇಷದ ಬೆಂಕಿಯಾಗಿ ಹರಡುತ್ತದೆ. ಆಗ ಇದಕ್ಕೆ ಸವಾಲಾಗಿ ಪ್ರತಿಭಟನೆಯ ನೆಲೆಯಲ್ಲಿ ಕಾರ್ತವೀರ್ಯಾರ್ಜುನನ ಇಬ್ಬರು ಮಕ್ಕಳು ಕೂಡ ಕತ್ತಿ ಹಿಡಿಯುತ್ತಾರೆ. ಹೀಗೆ ತಮ್ಮ ತಂದೆಯನ್ನು ವಧಿಸಿದ ಪ್ರತೀಕಾರಕ್ಕಾಗಿ ಅವರು ಕೂಡ ಕೊಡಲಿರಾಮನ ತಂದೆ ಜಮದಗ್ನಿಯ ತಲೆಯನ್ನೇ ಕಡಿಯುತ್ತಾರೆ. ಹೀಗೆ ಹಿಂಸೆಯ ಮೂಲದಿಂದ ಭಯೋತ್ಪಾದನೆ ಅಂಕುರಿಸಿ ಮುಂದೆ ಅದೇ ಪ್ರತಿಹಿಂಸೆಯ ನೆಲೆಯಲ್ಲಿ ಸಾಂಸ್ಥೀಕರಣಗೊಳ್ಳುತ್ತಾ ಸಾಗಿದ ಹಂತಕ ಪರಂಪರೆಯೊಂದರ ಗತಿ ವಿಧಿಗಳನ್ನು ಇದರಲ್ಲಿ ಕಾಣಬಹುದಾಗಿದೆ.

ಆಹಾರಕ್ಕಾಗಿ ಮನುಷ್ಯರಿಂದ ಪಳಗಿಸಲ್ಪಟ್ಟ ಪ್ರಾಣಿಗಳಲ್ಲಿ ಆಕಳು ಕೂಡ ಒಂದು ಎಂಬುದು ಎಲ್ಲರಿಗೂ ಗೊತ್ತು. ಆದರೆ ಆಕಳು ಹಾಲಿಗಾಗಿಯೋ? ಅಲ್ಲ, ಆಹಾರಕ್ಕಾಗಿಯೋ? ಈ ತಿರುಳಿಲ್ಲದ ವಾಗ್ವಾದ ಕೂಡ ಎಲ್ಲರಿಗೂ ಗೊತ್ತು. ಆದರೆ ಕರಾವಳಿ ಕರ್ನಾಟಕದ ತುಳುನಾಡಿನಲ್ಲಿ ಕೊಡಲಿರಾಮನಿಂದ ದಾಂಗುಡಿ ಇಟ್ಟ, ಆಕಳ ನಿಮಿತ್ತ ಹರಿಬಿಟ್ಟ, ಭಯೋತ್ಪಾದನೆಯ ನಂಜು ಇಲ್ಲಿನ ಬಹುರೂಪಿ ಬಹುತ್ವಗಳನ್ನೇ ನಾಶಮಾಡುವ ಗುರಿಯನ್ನು ಇರಿಸಿಕೊಂಡಿದೆ. ಇಂತಹ ಸಾಂಸ್ಕೃತಿಕ ಮತ್ತು ರಾಜಕೀಯ ಭಯೋತ್ಪಾದನೆಗಳ ಮಾದರಿಗಳಿಗೆ ಇಂದಿಗೂ ಪ್ರೇರಣೆ ನೀಡುತ್ತಲೇ ಇದೆ ನರಹಂತಕ ಕೊಡಲಿರಾಮನ ಚರಿತ್ರೆ! ಕೋಮುವಾದದ ಭಯೋತ್ಪಾದನೆಯಿಂದ ಬಿರಿಯುವ ಕೊಡಲಿರಾಮನ ಕಥೆಯು ಕಾರ್ತವೀರ್ಯಾರ್ಜುನನ ಮಕ್ಕಳ ತಲೆ ಕಡಿಯುವುದ ರೊಂದಿಗೆ ಶಮನವಾಗಿದ್ದರೆ ಅದು ಮುಯ್ಯಿಗೆ ಮುಯ್ಯಿ ಎನ್ನಬಹುದಿತ್ತೋ ಏನೋ! ಆದರೆ ಅದು ಅಲ್ಲಿಗೆ ನಿಲ್ಲದೆ ಗೋವಿನ ವಾಗ್ವಾದದ ಸತ್ತಾರೂಢ ನೆಲೆಯಾದ ಮಾಹಿಷ್ಮತಿ ನಗರ ಮತ್ತು ಗೋವಿನ ಪಾವಿತ್ರ್ಯದ ದತ್ತಕನೆಲೆಯಾದ ವಿಂಧ್ಯಪರ್ವತದ ಪರಿಸರವನ್ನೇ ಸುಡುವ ಮುಖೇನ, ಇಲ್ಲಿ ಹೇಗೆ ವೈಯ್ಯಕ್ತಿಕ ದ್ವೇಷಾಸೂಯೆಯೊಂದು ಸಾರ್ವತ್ರಿಕ ಹಿಂಸೆಯ ಪರಂಪರೆಯಾಯಿತು ಮತ್ತು ಇದನ್ನು ಕೋಮುವಾದಿಗಳು ಇಂದಿಗೂ ಮತ್ತೆ ಮತ್ತೆ ಬಳಸಿಕೊಳ್ಳುತ್ತಿರುವ ಬಗೆಗಳು ಯಾವುವು ಎಂಬುದು ಅಧ್ಯಯನಯೋಗ್ಯವಾಗಿದೆ. ರೇಣುಕೆಯ ಹತ್ಯೆ ಪುರುಷ ಪ್ರಧಾನ ಅಹಂಕಾರಕ್ಕೆ ಸಾಕ್ಷಿ; ಸ್ತ್ರೀಯರ ಬದುಕುವ ಹಕ್ಕನ್ನು ಕಸಿದುಕೊಳ್ಳುವ ತಂತ್ರ ಅದರಲ್ಲಡಗಿದೆ. ಅಲ್ಲದೆ, ಸ್ತ್ರೀ ಸಮುದಾಯವನ್ನು ಸರಕಾಗಿಸುವ ಜನವಿರೋಧಿ ಹುನ್ನಾರವೂ ಅದರಲ್ಲಿದೆ.

ಇಂತಹ ಅಮಾನುಷ ಹಾದಿ ಹಿಡಿದ ಕೊಡಲಿರಾಮ ಆ ಬಳಿಕ 'ಅನ್ಯ' ಕುಲದವರ ನಾಶಕ್ಕಾಗಿ ೨೧ ಬಾರಿ 'ಭೂಮಂಡಳ ಪ್ರದಕ್ಷಿಣೆ' ಎಂಬ ದಂಡಯಾತ್ರೆ ನಡೆಸಿ, ಹಿಂದೊಮ್ಮೆ ಕೇವಲ ಮಾತೃಹಂತಕನಾಗಿದ್ದವ, ಆ ಬಳಿಕ ನರಹಂತಕನಾಗುತ್ತಾ ಕೊನೆಯಲ್ಲಿ 'ಕ್ಷತ್ರಿಯ ಕುಲಾಂತಕ' ಎಂಬ ಹೆಗ್ಗಳಿಕೆಗೆ ಪಾತ್ರನಾಗಿ ಆರಾಧ್ಯನಾಗುತ್ತಾನೆ! ಕಲಿಯುಗದ ಅಟಲ್ಜಿ ಭಂಟ ಅಡ್ವಾನಿಯ 'ರಥಯಾತ್ರೆ' ಮತ್ತು ಅವರ ಸಂಘಪರಿವಾರಗಳು ಪ್ರತಿಪಾದಿಸುತ್ತಿರುವ ಏಕಶಿಲಾಕೃತಿಯ 'ಸಾಂಸ್ಕೃತಿಕ ರಾಷ್ಟ್ರೀಯತೆ' ಎಂಬ ಪರಿಕಲ್ಪನೆಯ 'ಮತಯಾತ್ರೆ' ಎರಡಕ್ಕೂ ಈ ಕೊಡಲಿರಾಮನೇ ಜಗದ್ಗುರು ಆಗಿದ್ದರೆ ಅದರಲ್ಲಿ ಆಶ್ಚರ್ಯವಿದೆಯೆ?

ಹೌದು, ಸ್ವಾತಂತ್ರ್ಯಪೂರ್ವ ಕಾಲದಿಂದಲೂ ಕೋಮುವಾದಿ ಚಿಂತಕರ ಬಲಯುತ ತಾಣಗಳಲ್ಲಿ ತುಳುನಾಡು ಗಮನಾರ್ಹವಾದುದು. ಅದರಲ್ಲೂ ತುಳುನಾಡಿನ ಮೇಲ್ವರ್ಗದ ಕೆಲವು ಜಾತಿವಾದಿ ವ್ಯಾಪಾರಿನಿಷ್ಠರು ಮತ್ತು ಮಠಮಾನ್ಯರು ಕೋಮುವಾದಿ ಸಂಘಟನೆಗಳಿಗೆ ಆರ್ಥಿಕ ಬಲ ತುಂಬುತ್ತಾ ಬಂದವರಲ್ಲಿ ಅಗ್ರಗಾಮಿಗಳು. ಹಾಗೆ ನೋಡಿದರೆ ಲಾಗಾಯ್ತಿನಿಂದ ತುಳುನಾಡಿನಲ್ಲಿ ಮೀನು ಹಿಡಿಯುವವರು ಮೊಗವೀರರು. ಅದರ ಸಗಟು ಖರೀದಿದಾರರು ಬ್ಯಾರಿ ಪಂಗಡದ ಮುಸ್ಲಿಮರು. ಅವರಿಂದ ಅದನ್ನು ಖರೀದಿಸಿ ಗ್ರಾಹಕರಿಗೆ ತಲುಪಿಸುವವರು ಮೊಗವೀರರ ಹೆಂಗಸರು. ಅದೇ ರೀತಿ ಘಮಘಮಿಸುವ ಮಂಗಳೂರು ಮಲ್ಲಿಗೆಯನ್ನು ಬೆಳೆಸುವವರು ಕ್ರೈಸ್ತರು. ಅದರ ಸಗಟು ಖರೀದಿದಾರರು ಬ್ಯಾರಿಗಳು. ಅದರ ಹೆಚ್ಚಿನ ಬಳಕೆದಾರರು ಹಿಂದುಗಳು. ಹಾಗೆಯೇ ಇಲ್ಲಿ ತರಕಾರಿ ಬೆಳೆಸುವವರಲ್ಲಿ ಕ್ರೈಸ್ತರದೇ ಮೇಲುಗೈ. ಆದರೆ ಅದರ ಪ್ರಧಾನ ಬಳಕೆದಾರರು ಹಿಂದುಗಳು. ಅದು ಬಿಡಿ, ಇಲ್ಲಿ ಇತ್ತೀಚಿನವರೆಗೂ ಬ್ಯಾರಿ ಹೆಂಗಸರು ತಯಾರಿಸುತ್ತಿದ್ದ ಕಾಡಿಗೆ ಎಲ್ಲರಿಗೂ ಬೇಕಿತ್ತಲ್ಲಾ? ಹತ್ತೊಂಬತ್ತನೆಯ ಶತಮಾನದಲ್ಲಿ ಬ್ರಿಟಿಷ್ ವಸಾಹತುಶಾಹಿ ಅಡಿಯಿದ್ದ ಅಖಂಡ ಭಾರತದಲ್ಲಿ ೧೯೨೫ರಲ್ಲಿ ಆರ್.ಎಸ್.ಎಸ್. ಮತ್ತು ೧೯೪೧ರಲ್ಲಿ ಜಮಾತೆ ಇಸ್ಲಾಮಿ ಎಂಬ ಎರಡು ಅಪ್ಪಟ ಕೋಮುವಾದಿ ಸಂಘಟನೆಗಳು ಹುಟ್ಟುವ ಮೊದಲೇ ಇಲ್ಲಿ ವಿವಿಧ ಸಮುದಾಯಗಳಲ್ಲಿ ಆರ್ಥಿಕ ಸಂಬಂಧಗಳು ಬೆಸೆದುಕೊಂಡಿದ್ದುದು ಎಲ್ಲರಿಗೂ ಗೊತ್ತು. ಆದರೆ ಇಲ್ಲಿ ದುಡಿಯದೆ ಬದುಕುವ ಮತ್ತು ದುಡಿಯುತ್ತಲೇ ಬರಡಾಗುವ ಎರಡು ವರ್ಗಗಳ ಕಪ್ಪು-ಬಿಳುಪಿನ ಚರಿತ್ರೆ ಹಲವು ನಿಗೂಢಗಳತ್ತ ಬೊಟ್ಟುಮಾಡುತ್ತದೆ.

ದೇವರ ಮೇಲಾಣೆ
ಸಿಎಂ ಮಾಜಿ ಸಿಎಂ ಗುದ್ದಾಟ

ಈ ರಾಜಕಾರಣಿಗಳ ಉಸಾಬರಿ ಬೇಡ ಅಂತನೇ ಆ ದೇವರು ಕಲ್ಲಾಗಿದ್ದಾನೆ... ಅಲ್ವೇನಪ್ಪ?

ಒಂದೊಮ್ಮೆ ಇಲ್ಲಿ ಮೊಗಲರ ಸೇನಾ ತುಕಡಿಗಳು, ಪೋರ್ಚುಗೀಸರ ವ್ಯಾಪಾರಿ ತುಕಡಿಗಳು ದಾಂಧಲೆ ಎಬ್ಬಿಸುವ ಪೂರ್ವದಲ್ಲೇ ಕುರಾನ್, ಬೈಬಲ್ ಧ್ವನಿಸುತ್ತಿದ್ದವು. ಇದಕ್ಕೂ ಪೂರ್ವದಲ್ಲಿ ವೇದ ಉಪನಿಷತ್ತುಗಳ ಅಬ್ಬರದ ನಡುವೆಯೂ ಇಲ್ಲಿ ಅಸ್ಪೃಶ್ಯತೆ, ಅಜಲು ಪದ್ಧತಿ, ಎಂಜಲ ಸೇವೆ, ಬತ್ತಲ ಸೇವೆ, ದೇವದಾಸಿ ಪದ್ಧತಿ ಇತ್ಯಾದಿ ಸಾಮಾಜಿಕ ಅನಿಷ್ಟಗಳು ದುಡಿದುಣ್ಣುವವರ ತಲೆಯನ್ನು ಮೆಟ್ಟುತ್ತಲೇ ಇದ್ದವು. ಅವೆಲ್ಲಾ ಅಷ್ಟಕ್ಕೇ ನಿಲ್ಲದೆ ಸಾಂಸ್ಕೃತಿಕ, ರಾಜಕೀಯ ಹಲ್ಲೆಗಳು ನಡೆಯುತ್ತಲೇ ಇದ್ದುವು. ಹಾಗಿದ್ದರೆ ಇದನ್ನು ನಡೆಸುತ್ತಿದ್ದ ಹಲ್ಲೆಕೋರರು ಯಾರು? ಅವರುಗಳ ಗುಪ್ತ ಕಾರ್ಯಸೂಚಿಗಳು ಏನಿದ್ದಿರಬಹುದು? ಯಾಕೆ ತುಳು ಮೂಲನಿವಾಸಿಗಳ ಕುಲಮೂಲದ ಮೂಲಸ್ಥಾನಗಳಾದ ಪ್ರಾಚೀನತಮ 'ಆದಿಆಲಡೆ' ಎನ್ನುವ ಖಾಸಗಿ ಆರಾಧನಾ ನೆಲೆಗಳೂ ಹಂತಹಂತವಾಗಿ ಭೂಗತವಾಗುತ್ತಾ ಅದಿದ್ದ ನೆಲದಲ್ಲೇ ವೈದಿಕರ ದೇವಾಲಯಗಳು, ಬೌದ್ಧರ ವಿಹಾರಗಳು, ಜೈನರ ಬಸದಿಗಳು ತಲೆಯೆತ್ತಿದವು? ಪ್ರಾಚೀನ ತುಳುವರ ಆರಾಧನಾ ನೆಲೆಗಳಾದ ಆದಿಆಲಡೆಗಳಲ್ಲಿ ಆಯಾಯ ಕುಲದಲ್ಲಿ ಜನಿಸಿ ಆ ಬಳಿಕ ಹತರಾದವರನ್ನು ಶಕ್ತಿರೂಪದಲ್ಲಿ ಸಂಕೇತಿಸಿ 'ನಂಬಿದ ಸತ್ಯಗಳು' ಎಂದು ಆರಾಧಿಸಲಾಗುತ್ತಿತ್ತು. ಆದರೆ ಅವನ್ನೆಲ್ಲಾ ಪಲ್ಲಟಿಸಿ ತುಳುವರ ಆರಾಧನಾ ಸಂಪ್ರದಾಯಕ್ಕೆ ಭಿನ್ನವಾದ 'ಭೂತಾರಾಧನೆ' ಎಂಬ ವಿಪರೀತ ವಿನ್ಯಾಸವನ್ನು ನೀಡಿದವರು ಆನಂತರದಲ್ಲಿ ಕೊಬ್ಬಿದ ಊಳಿಗಮಾನ್ಯ ವ್ಯವಸ್ಥೆಯ ವಕ್ತಾರರಲ್ಲವೆ? ಇದಕ್ಕಾಗಿ ಅವರು ಮತಧರ್ಮದ ಮುಖವಾಡದಲ್ಲಿ ಸ್ಥಳೀಯ ಉತ್ಪಾದನಾ ರಂಗವನ್ನೇ ನಿಯಂತ್ರಿಸಲು ಒಗ್ಗೂಡಿ ಅನುಸರಿಸಿದ ಬಹುತ್ವ ವಿರೋಧಿ ಷಡ್ಯಂತ್ರಗಳಿಗೆ ಲೆಕ್ಕವಿದೆಯೆ? ಇದರ ಫಲಿತಗಳೇ (೧) ಬಿಡಿ ಒಕ್ಕಲು, (೨) ಚಾಲಗೇಣಿಯ ಒಕ್ಕಲು, (೩) ಮೂಲಗೇಣಿಯ ಒಕ್ಕಲು, ಎಂಬ ಗುತ್ತೇದಾರಿ ಪದ್ಧತಿಗಳಲ್ಲವೆ? ಇದರಿಂದಲೇ ದನಿ-ಒಕ್ಕಲು ಎಂಬ ಪ್ರಥೆ ಪ್ರಾರಂಭವಾಗಿ ಅದರಿಂದ ತುಳುವರ ಬುಡಕಟ್ಟು ಸಮಾಜದಲ್ಲಿ ಏಣಿಶ್ರೇಣಿಯ ಜಾತೀಯತೆಗಳು ಬಿತ್ತಿ ತಲೆಯೆತ್ತಿ ಅದರಿಂದ ತುಳುವರದಾಗಿದ್ದ ಅನನ್ಯ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ, ವ್ಯವಸ್ಥೆಗಳು ದೆಶೆಗೆಟ್ಟದ್ದು ಮೇಲ್ವರ್ಗದವರು ನಡೆಸಿದ ಒಂದು ಬಗೆಯ ಸಾಮಾಜಿಕ-ಆರ್ಥಿಕ ರಾಜಕೀಯವಲ್ಲವೆ?

ಇದನ್ನರಿಯಲು ಕೊಡಲಿರಾಮನ ಕಥಾನಕದ ಹುಸಿನೆಲೆ ಮತ್ತು ಸ್ಥಳೀಯ ಚರಿತ್ರೆಯ ಸಹಜ ನೆಲೆಗಳನ್ನು ಮೌಖಿಕ ಮತ್ತು ಅಕ್ಷರಸ್ಥ ಎಂಬ ಎರಡೂ ಪರಂಪರೆಗಳಲ್ಲಿ ಗ್ರಹಿಸುವುದು ಸೂಕ್ತ. ಈ ಹಿಂದೆ ಚರ್ಚಿಸಿದಂತೆ ಭಯೋತ್ಪಾದನೆಯ ಕುಲಗುರು ಕೊಡಲಿರಾಮ ತನ್ನ ನರಹತ್ಯೆಯ ೨೧ ದಂಡಯಾತ್ರೆಗಳನ್ನು ಮುಗಿಸಿ ಕೊನೆಯಲ್ಲಿ ಕೊಲ್ಲೂರಿಗೆ ಬರುತ್ತಾನೆ. ಇಲ್ಲಿಯ ಪ್ರಶಾಂತ ನಿಸರ್ಗರಮಣೀಯ ನೆಲೆಯಲ್ಲೂ ತನ್ನ ಭೀಕರ ನರಹತ್ಯೆಯ ಪಾಪಕ್ಕೆ ಪಶ್ಚಾತ್ತಾಪ ಪಡದೆ ಉದ್ಧಟನಾಗಿಯೇ ಉಳಿದ ಆತ ಹೊಸ ವಿಧ್ವಂಸಕ ಕನಸುಗಳನ್ನು ಕಟ್ಟಿಕೊಂಡು

ಜನಪದದಲ್ಲಿ ಭ್ರಮೆಗಳನ್ನು ಬಿತ್ತಲು ಮನಮಾಡುತ್ತಾನೆ. ಅದಕ್ಕೆಂದೇ ಕೊಲ್ಲೂರಿನ ಕೊಡಚಾದ್ರಿ ಗಿರಿಯಲ್ಲಿ ನಿಂತು, ''ನಾನೇ ಕೊಡಲಿಯನ್ನು ಬೀಸಿ ಸಮುದ್ರವನ್ನು ಹಿಂದಕ್ಕೆ ತಳ್ಳಿ ವರುಣದೇವರಿಂದ ಪಡೆದ ಭೂಮಿಯಿದು. ಇನ್ನು ಮುಂದೆ ಇದು ನನ್ನ ಪರಶುರಾಮಸೃಷ್ಟಿ; ನಿಮ್ಮ ತುಳುನಾಡು ಸೇರಿದಂತೆ ಸಮಗ್ರ ಪಶ್ಚಿಮ ಕರಾವಳಿ ನನ್ನದು'' ಎಂದು ಅಬ್ಬರಿಸುತ್ತಾನೆ!

ಎಂತಹ ವಿಚಿತ್ರ! ಶ್ರಮವಿಲ್ಲದೆ ಸಂಸ್ಕೃತಿಯನ್ನು ಕಟ್ಟಬಹುದೆಂಬ ಭ್ರಮಾಧೀನರಿಗೆ ಇಂತಹ 'ನೆಲಗಳ್ಳರ' ಕಥೆಗಳು ಹೊಸತಲ್ಲವಲ್ಲಾ? ಇತರರ ಶ್ರಮದಿಂದಲೇ ತಿಂದು ತೇಗುವ ಜಮೀನ್ದಾರಿ ಪದ್ಧತಿಯ ಸಂರಕ್ಷಣೆಗಾಗಿಯೇ ಮಠಮಾನ್ಯರು ಬೆಳೆಸಿದ ಇಂತಹ ಕಥಾನಕಗಳು ಅವರ ರಕ್ಷಣೆಗೆ ಅನಿವಾರ್ಯ ಕೂಡ. ಎಷ್ಟೆಂದರೂ ಶಾಪ ಮತ್ತು ವರಗಳಿಂದಲೇ ಸೃಜನಶೀಲತೆಯ ವಿಕಾಸ ಮತ್ತು ನಿಯಂತ್ರಣ ಸಾಧ್ಯವೆಂಬ ಹುಂಬರ ತಾತ್ವಿಕತೆಯಲ್ಲಿ, ''ಋಷಿ ಮೂಲ ಮತ್ತು ನದಿ ಮೂಲವನ್ನು ಹುಡುಕಬಾರದು'', ಎನ್ನುವ ಬೆವರಿನ ಬಲವಿಲ್ಲದ ಆದೇಶ ಮತ್ತು ಉಪದೇಶಗಳು ಯಾವತ್ತೂ ಚಿರಂಜೀವಿಯೇ.

ಹೀಗೆ ಕೊಡಲಿರಾಮ ತಾನೇ ಈ ನೆಲದ ಒಡೆಯನೆಂದು ಸಾರಿದ ತುಳುನಾಡಿಗೆ ಇಂದಿನ ಉತ್ತರಪ್ರದೇಶದ ರಾಯ್-ಬರೇಲಿಯ, ಅಂದರೆ ಅಂದಿನ ಅಹೀಛತ್ರದಿಂದ ತನ್ನ ಕುಲಬಾಂಧವರನ್ನು ಕರೆತಂದು, ಅವರನ್ನು ಉತ್ತರ ಕನ್ನಡ ಜಿಲ್ಲೆಯ ಗೋಕರ್ಣ ಮತ್ತು ಕಾಸರಗೋಡು ಜಿಲ್ಲೆಯ ಚಂದ್ರಗಿರಿ ನದಿಯವರೆಗಿನ ೩೨ ಗ್ರಾಮಗಳಲ್ಲಿ ನೆಲೆಸುವ ವ್ಯವಸ್ಥೆ ಮಾಡಿದ್ದು ಮುಂದಿನ ಕಥೆ. ಆದರೆ ವಿಚಿತ್ರವೆಂದರೆ, ತಾನು ಮಾತ್ರ ಅಲ್ಲಿ ನಿಲ್ಲದೆ ಮಹೇಂದ್ರ ಪರ್ವತಕ್ಕೆ ಹೊರಟುಹೋಗುತ್ತಾನೆ. ಅದು ಸಹಜ ಕೂಡ. ಆಗಲೂ ಈಗಲೂ ಭಯೋತ್ಪಾದಕರು ಜನರ ನಡುವೆಯೇ ಇದ್ದು, ಜನರೊಡನೆ ಸಂವಾದಿಸುತ್ತಾ ಬದುಕು ನಡೆಸಿದ ದಾಖಲೆಗಳಿಲ್ಲವಲ್ಲಾ! ತಲೆಮರೆಸಿಕೊಂಡೇ ಇತರರ ತಲೆಕಡಿಯುವುದೇ ಅಂಥವರ ಜಾಯಮಾನವೆನ್ನುವುದಕ್ಕೆ ಇದೊಂದು ಪ್ರಾಚೀನ ದಾಖಲೆ ಮಾತ್ರ.

ಹೀಗೆ ದುಡಿದುಣ್ಣುವ ಉತ್ಪಾದಕರ ಭೂಮಿಯನ್ನು ದೇವರು ಧರ್ಮಗಳ ಹೆಸರಿನಲ್ಲಿ ಕಸಿದುಕೊಂಡು ಅವರನ್ನು ತಮ್ಮ ಒಕ್ಕಲುಮಕ್ಕಳನ್ನಾಗಿಸಿ, ಜನಪದದ ಸ್ಮೃತಿನಾಶಕ್ಕೆ ತುಡಿಯುವ ಕೊಡಲಿರಾಮನಂಥವರ ನಡಿಗೆಗೆ ಭಿನ್ನವಾದ ಚಾರಿತ್ರಿಕ ದೃಢ ನಡಿಗೆ ಪ್ರಾಚೀನ ತುಳುನಾಡಿಗಿದೆ. ಚರಿತ್ರೆಯಲ್ಲಿ ನಾವಿಂದು ಸ್ಥೂಲವಾಗಿ ಗುರುತಿಸುತ್ತಿರುವ ಹಳೆಯ ಶಿಲಾಯುಗ (ಕ್ರಿ.ಪೂ. ೨೫,೦೦೦-೧೨,೦೦೦), ನೂತನ ಶಿಲಾಯುಗ (ಕ್ರಿ.ಪೂ. ೧೨,೦೦೦ - ೬,೦೦೦), ತಾಮ್ರದ ಯುಗ (ಕ್ರಿ.ಪೂ. ೬,೦೦೦ - ೪೦೦೦), ಕಂಚಿನ ಯುಗ (ಕ್ರಿ.ಪೂ. ೪,೦೦೦ - ೩,೦೦೦), ಕಬ್ಬಿಣದ ಯುಗ ಅರ್ಥಾತ್ ಬೃಹತ್ ಶಿಲಾಯುಗ (ಕ್ರಿ.ಪೂ. ೩,೦೦೦ದಿಂದ ಈಚಿನವರೆಗೆ) ಮೊದಲಾದ ವಿವಿಧ ಕಾಲಘಟ್ಟಗಳಲ್ಲಿ ತುಳುನಾಡು ಮಾನವರ ವಸತಿಯ ನೆಲೆಯಾಗಿದ್ದದ್ದು ಮಾತ್ರವಲ್ಲ, ವಿಶ್ವದ ೧೮ ಸಂವೇದನಾಶೀಲ ನಿಸರ್ಗಧಾಮಗಳಲ್ಲಿ ಇದೂ ಒಂದು ಎನ್ನುವುದನ್ನು ಶೋಧನೆಯ ವಿವಿಧ ಜ್ಞಾನಧಾರೆಗಳು ವಿಧಿವತ್ತಾಗಿ ದಾಖಲಿಸಿವೆ. ಇದರ ಫಲಿತಗಳಲ್ಲಿ ಮಾನವ ನಿರ್ಮಿತ ಹಾಗೂ ಮಾನವೋಪಯೋಗಿ ವಸ್ತುಗಳು ದೊರಕಿವೆ. ಅದರಲ್ಲಿ ಮರ-ಕಲ್ಲು-ಕಬ್ಬಿಣಗಳ ಆಯುಧಗಳು, ಕಲ್ಗೋರಿಗಳು, ಕೋಣೆಗೋರಿಗಳು, ಅಸ್ಥಿಪಾತ್ರೆಗಳು, ನೆಲಗವಿಗಳು, ಗೃಹೋಪಯೋಗಿ ವಸ್ತುಗಳ ಪಳೆಯುಳಿಕೆಗಳು ಇತ್ಯಾದಿಗಳೆಲ್ಲಾ ಸೇರಿವೆ. ಇಂತಹ ಚಾರಿತ್ರಿಕ ಆಕರಗಳು ಉಪ್ಪಿನಂಗಡಿ, ಬಿರುಮಲೆ, ಬಕಜೆಕಾರು, ವಡ್ಡರ್ಸೆ, ಬೋಳೂರು, ಮೂಡನಿಡಂಬೂರು, ಹೇರೂರು, ಹೆಬ್ರಿ, ಕರಡಿಮಜಲು ಮೊದಲಾದ ಸ್ಥಳಗಳಲ್ಲಿ ಈಗಾಗಲೆ ದೊರಕಿವೆ. ಹಾಗಿರುವಾಗ ಪರಶುರಾಮ ಸೃಷ್ಟಿ ಎಂಬ ಹುಸಿತನದ ಕುರಿತು ಬೇರೆ ಪುರಾವೆ ಬೇಕೆ?

ಊಳಿಗಮಾನ್ಯ ವ್ಯವಸ್ಥೆ ಹರಿಬಿಟ್ಟ ಕೊಡಲಿರಾಮನ ಹುಸಿ ಕಥಾನಕದ ಭ್ರಮೆಗೆ ಬಲಿಯಾದವರು ಕೂಡ ಒಮ್ಮೆ ತಮ್ಮ ನಿಲುವಿನ ಬಗ್ಗೆ ಮಂಡಿಯೂರಿ ಆಲೋಚಿಸ ಬೇಕಾಗಿದೆ. ಯಾಕೆಂದರೆ, ಈ ಕಥೆಯೇ ಸತ್ಯವಾದಲ್ಲಿ ತುಳುನಾಡಿನಲ್ಲಿ 'ಜಾತಿವಾದ' ಮತ್ತು 'ಕೋಮುವಾದ' ಎನ್ನುವ ಅವಳಿ ಅನಿಷ್ಟಗಳನ್ನು ಮೊದಲು ಬಿತ್ತಿದವರು ಸರ್ವಥಾ ಮೊಗಲರು, ಡಚ್ಚರು, ಪೋರ್ತುಗೀಸರು ಮತ್ತು ಬ್ರಿಟಿಷರು ಅಲ್ಲವೆಂದಾಯಿತಲ್ಲಾ? ಇಂಥ ನಿಗೂಢತೆಗಳ ಗುಟ್ಟನ್ನು ರಟ್ಟಾಗಿಸುವ ಕೀಲಿಕೈ ಕೂಡ ವ್ಯವಸ್ಥೆಯು ಹರಿಬಿಟ್ಟ ಇಂತಹ ಕಥಾನಕಗಳಲ್ಲೇ ಇದೆ. ಅದರಂತೆ ತುಳುನಾಡಿಗೆ ಕದಂಬ ದೊರೆ ಮಯೂರವರ್ಮನ ರಾಜಕೀಯ ಆಕ್ರಮಣ, ಕೊಲ್ಲೂರಿಗೆ ಶಂಕರಾಚಾರ್ಯರ ಸಾಂಸ್ಕೃತಿಕ ಆಕ್ರಮಣ ಎರಡರಲ್ಲೂ ಇರುವ ಒಂದು ತಾತ್ವಿಕ ಬೆಸುಗೆಯ ಕೊಂಡಿಯೇ ಕೊಡಲಿರಾಮನ ಚರಿತ್ರೆ ಎನ್ನುವುದರಲ್ಲಿ ಅನುಮಾನವಿಲ್ಲ. ಇಂದಿಗೂ ತುಳುವರ 'ಜನಪದ' ಎಂಬ ಕಂಠಸ್ಥ ಪರಂಪರೆಯಲ್ಲಿ, ಪರಿಕಲ್ಪನೆಯಲ್ಲಿ, ನೆಲೆಯೂರದ, ಆದರೆ ಕೇವಲ ಒಡೆಯರ 'ಜಾನಪದ' ಎಂಬ ಪರಿಕಲ್ಪನೆಯಲ್ಲಿ ಮಾತ್ರ ನೆಲೆನಿಂತ (೧) ಮಾಣಿಕ್ಯರಾಜ, (೨) ಮೇಲ್ಬಂಟ ಭೂತ ಮತ್ತು (೩) ಅಡಕತ್ತಾಯ ಭೂತಗಳು ಕ್ರಮವಾಗಿ (೧) ಮಯೂರವರ್ಮ, (೨) ಶಂಕರಾಚಾರ್ಯ ಮತ್ತು (೩) ಕೊಡಲಿರಾಮರ ಪ್ರತಿರೂಪದಂತೆ ಧ್ವನಿಸುತ್ತಿವೆ.

ಅದು ಕೂಡ ಒಡೆಯರ ಪರಂಪರೆಯ ಭೂತಾರಾಧನೆಗೆ ವೃತ್ತಿಕಲಾವಿದರನ್ನು ಬರಮಾಡಿಕೊಂಡ ಪಲ್ಲಟದ ಕಸರತ್ತಿನ ಅನಂತರದಲ್ಲೂ! ಹಿಂದೊಮ್ಮೆ ತುಳುವರ ಸಾಂಸ್ಕೃತಿಕ ಚಿಹ್ನೆಯಾದ ನಾಗ ಸಂತತಿಯ ನಾಶಕ್ಕೆ ಮಾಣಿಕ್ಯರಾಜ, ತುಳುವರ ಮೂಲಸ್ಥಾನ ಆಲಡೆಗಳ ವಿಧ್ವಂಸಕ್ಕೆ ಮೇಲ್ಬಂಟ ಭೂತ ಮತ್ತು ತುಳುವರ ಮಾತೃಮೂಲೀಯ ಕೌಟುಂಬಿಕ ಪದ್ಧತಿಯ ತುಚ್ಛೀಕರಣಕ್ಕೆ ಅಡಕತ್ತಾಯ ಭೂತಗಳು ನಡೆಸಿದ ಕಿತಾಪತಿಗಳು ಒಂದೇ ಎರಡೆ! ಇದರ ಸಾಕಷ್ಟು ಪುರಾವೆಗಳು ಇಂದಿಗೂ ಪ್ರತಿಭಟನೆಯ ರೂಪದಲ್ಲಿ ತುಳುವರ ಮೌಖಿಕ ಪರಂಪರೆಯಲ್ಲಿ ಸಿಗುತ್ತಿವೆ. ಅಡಕತ್ತಾಯ - ಮೇಲ್ಬಂಟ ಭೂತಗಳ ಆರಾಧನೆಯನ್ನು ಗರ್ಭಿಣಿಯರು ನೋಡಬಾರದೆಂಬ ನಿಷೇಧ ಯಾಕೆ? ಇದು ತನ್ನ ದಂಡಯಾತ್ರೆಯಲ್ಲಿ ಕೊಡಲಿರಾಮ ಗರ್ಭಿಣಿ ಸ್ತ್ರೀಯರ ಬಸಿರನ್ನೂ ಬಿಡದೆ ಕೊಡಲಿಯಿಂದ ಬಗೆದು ತೆಗೆದ ಸ್ಮರಣೆಯನ್ನು ಮರೆಮಾಚಲು ಇದ್ದಿರಬಹುದೆ? ಅಲ್ಲಾ, ಇದು ತುಳುನಾಡಿನ ದಿಟ್ಟ ಹೆಣ್ಣುಮಕ್ಕಳೇ ಈ ನರಹಂತಕನ ಹೇಯತೆಗೆ ಒಡ್ಡಿದ ತಿರಸ್ಕಾರದ ಬಹಿಷ್ಕಾರ ಇದ್ದಿರಬಹುದೆ? ಯಾರಿಗೆ ಗೊತ್ತು!

ಪ್ರಾಚೀನ ತುಳುವರ ಆರಾಧನೆ ಎಂದರೆ ಅವರದ್ದೇ ಆದ 'ನಂಬಿದ ಸತ್ಯ'ಗಳ ಆರಾಧನೆ; ಇದು ಅವರ ಖಾಸಗಿ ಆರಾಧನೆ; ಇದರಲ್ಲಿ ಸೋದರಿಕೆಯ ಬಂಧುಗಳಿಗೆ ಮಾತ್ರ ಪ್ರವೇಶವಿದ್ದು, ಒಂದು ಕಾಲಕ್ಕೆ ಅವರವರ ಕುಟುಂಬದ ನೆಂಟರಿಷ್ಟರಿಗೂ ಕೂಡ ಈ ಆರಾಧನಾ ಸ್ಥಳಕ್ಕೆ ಪ್ರವೇಶ ನಿಷಿದ್ಧವೇ ಆಗಿತ್ತು. ಆಗ ತಮ್ಮ ತಮ್ಮ ಕುಲದಲ್ಲಿ ಜನಿಸಿ ಕಣ್ಮರೆಯಾದವರ ಸ್ಮರಣೆಯ ವಿಧಿವಿಧಾನಗಳ ನೇತೃತ್ವ ಕುಲದ ಹಿರಿಯ ಹೆಂಗಸು ಮತ್ತು ಕುಲದ ಹಿರಿಯ ಗಂಡಸಿನದ್ದಾಗಿರುತ್ತಿತ್ತು. ಇವರನ್ನು ಸಾಮಾಜಿಕ ನೆಲೆಯಲ್ಲಿ 'ಕಾಪಾಡ್ದಿ ಮತ್ತು ಕಾಪಾಡ' ಎಂದೂ, ಸಾಂಸ್ಕೃತಿಕ ನೆಲೆಯಲ್ಲಿ 'ಮುಕ್ಕಾಲ್ದಿ ಮತ್ತು ಮುಕ್ಕಾಲಿ' ಎಂದೂ, ರಾಜಕೀಯದ ನೆಲೆಯಲ್ಲಿ 'ಪಾಲವೆದಿ ಮತ್ತು ಪಾಲವೆ' ಎಂದೂ, ಆರ್ಥಿಕ ನೆಲೆಯಲ್ಲಿ 'ಗುರ್ಕಾರ್ದಿ ಮತ್ತು ಗುರ್ಕಾರ' ಎಂದೂ ಗುರುತಿಸಲಾಗುತ್ತಿತ್ತು. ಆದರೆ ಈ ಎಲ್ಲ ಕ್ರಿಯಾ ಗೌರವಗಳಲ್ಲೂ ಹೆಣ್ಣು ಮತ್ತು ಗಂಡಿಗೆ ಸಮಾನತೆಗಳಿದ್ದು, ಇಲ್ಲಿ ಯಾವತ್ತೂ ಪುರುಷ ಪಾರಮ್ಯಕ್ಕೆ ಅವಕಾಶವೇ ಇರಲಿಲ್ಲ. ಆದರೆ ಸರಿಸುಮಾರು ಕ್ರಿ.ಶ. ನಾಲ್ಕನೆಯ ಶತಮಾನದಿಂದ ಇವೆಲ್ಲಾ ತೀವ್ರಗತಿಯಲ್ಲಿ ಪಲ್ಲಟಗೊಳ್ಳುತ್ತಾ ಸಾಗಿರುವ ಚರಿತ್ರೆಯಲ್ಲಿ ಊಳಿಗಮಾನ್ಯ ವ್ಯವಸ್ಥೆಯ ಹುನ್ನಾರುಗಳಿವೆ, ಪಾಳೆಯಗಾರಿ ಪರಂಪರೆಯ ಪಿತೂರಿಗಳೂ ಇವೆ.

ಹಾಗೆ ನೋಡಿದರೆ ಪ್ರಾಚೀನ 'ಕೋಮುವಾದ' ಮತ್ತು ಆಧುನಿಕ 'ರಾಷ್ಟ್ರವಾದ' ಇವೆರಡರ ಅಂತಿಮ ನಿಲುಗಡೆ ನಾಡಿನ ಬಹುರೂಪಿ ನೆಲೆಗಳ ನಾಶದಲ್ಲೇ ಕೊನೆಯಾಗುತ್ತದೆ. ಒಂದು ಅರ್ಥದಲ್ಲಿ ಅದರ ಕೊನೆಯ ಫಲಿತವೇ ಬಂಡವಾಳಶಾಹಿ ಜಾಗತೀಕರಣ, ಸರ್ವಾಧಿಕಾರಿ ಸ್ವೇಚ್ಛಾಚಾರ. ಇಂತಹ ಅನರ್ಥಗಳಿಗೆ ಎಡೆಕೊಡಬಾರದೆಂದೇ ಭಾರತದ ಸಂವಿಧಾನ ನಮ್ಮ ರಾಷ್ಟ್ರವನ್ನು ಒಕ್ಕೂಟದ ತಾತ್ವಿಕತೆಯಲ್ಲಿ ಬಹು ಎಚ್ಚರಿಕೆಯಿಂದ ಬೆಸೆದಿದೆ. ಇದರ ಅರ್ಥ ಈ ವ್ಯವಸ್ಥೆ ಇಲ್ಲಿರುವ ಬಹುರೂಪಿ ನೆಲೆಗಳನ್ನು ಕರಗಿಸುವ ಬೆಂಕಿಯ ಮೇಲಿನ 'ಬಾಣಲೆ' ಯಾವತ್ತೂ ಆಗಬಾರದು. ಅದು ಸ್ಥಳೀಯ ಬಹುತ್ವಗಳನ್ನು ರಕ್ಷಿಸುವ ನಿಸರ್ಗದಂತಹ ಸುಂದರ 'ಬಟ್ಟಲು' ಆಗಬೇಕು. ಇಂತಹ ಬಟ್ಟಲಿನಲ್ಲಿ ಬಹುರೂಪಿ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಆಯಾಮಗಳಿಗೆಲ್ಲಾ ಸಂರಕ್ಷಣೆ ದೊರೆಯಬೇಕು. ಆಗ ಮಾತ್ರ ಬಹುಸಮುದಾಯಗಳ ಅನನ್ಯತೆಯ-ಅಸ್ಮಿತೆಗಳು ಮರೆಯಾಗದೆ ಅವಕ್ಕೆಲ್ಲಾ ಕಾಲ ಮತ್ತು ಸಂದರ್ಭಗಳೊಡನೆ ಅರಿವಿನ ಅನುಸಂಧಾನ ನಡೆಸಲು ಸಾಧ್ಯವಾದೀತು. ಹಾಗಾದಾಗ ನೆಲಮೂಲದ ಬಹುತ್ವಗಳು ಅಧಿಕಾರಶಾಹಿಯ ದರ್ಪ, ಕ್ರೌರ್ಯಕ್ಕೆ ಕರಗಬೇಕಾದ ನಿತ್ಯ ಸಂಕಟಗಳಿಂದ ಪಾರಾಗಬಹುದು.

*(ಸೆಪ್ಟೆಂಬರ್ ಸಂಚಿಕೆಯಲ್ಲಿ ಮುಂದುವರಿಯುತ್ತದೆ)*

ರವಿ ರಾ. ಅಂಚನ್
ಬಿ-೮೦೮, ಟ್ವಿನ್ ಟವರ್ಸ್, ಮನೀಶ್ ಪಾರ್ಕ್, ಪಂಪ್ ಹೌಸ್
ಅಂಧೇರಿ (ಈಸ್ಟ್), ಮುಂಬಯಿ - ೪೦೦ ೦೯೩

# ಭದರಿ

ಸಿಸುರಾಮ ಅದೇ ತಾನೇ ಹೊಲದಿಂದ ಬಂದಿದ್ದ. ನೇಗಿಲನ್ನು ಅಂಗಳದಲ್ಲೇ ಇಟ್ಟು, ಆಮೇಲೆ ಅವಸರಿಸಿ ಸ್ನಾನಮಾಡಿ, ತನ್ನ ಬಣ್ಣದ ಬಟ್ಟೆ ಬದಲಿಸಿ, ಮಧ್ಯಾಹ್ನದ ಅಡಿಗೆ ಮಾಡುತ್ತಿದ್ದ ತನ್ನ ಹೆಂಡತಿ ಭದರಿಯತ್ತ ಅಡುಗೆ ಮನೆಗೆ ಧಾವಿಸಿದ. ಅನ್ನ ಇನ್ನೂ ಆಗದೇ ಇರುವುದು ಮತ್ತು ಸಾರು ಕೂಡ ಒಲೆಯ ಮೇಲೆ ಇಲ್ಲದಿರುವುದನ್ನು ಕಂಡು ಕೋಪಗೊಂಡ. ತರಕಾರಿ ಹೆಚ್ಚದೆ ಹಾಗೇ ಇರುವುದನ್ನು ಕಂಡ, ಮೈದಾ ಬಾಳೆ ಎಲೆಯ ಮೇಲೆ ಸತ್ತು ಬಿದ್ದಿದ್ದಂತಿತ್ತು, ಕಾಯಿ ಮೀನು ನೆಲದ ಮೇಲೆ ಬೆಂಕಿ ಕಾಯಿಸಿದಂತೆ ಬಿದ್ದಿತ್ತು. ಇನ್ನೊಂದು ಕಡೆ ಒಲೆಯ ಹತ್ತಿರ ಭದರಿ ಬೆಂಕಿ ಹಚ್ಚುತ್ತಾ ಹೊಗೆಯಲ್ಲಿ ಕಣ್ಣು ಮುಚ್ಚಿದ್ದಳು.

ಸಿಸುರಾಮ ಇನ್ನೂ ಅಡುಗೆ ಆಗದಿರುವುದನ್ನು ಕಂಡು ಆವೇಶದಿಂದ ಕೆರಳಿದ. ಬೆಳಿಗ್ಗೇನೆ ಅವನ ಚಿತ್ತ ಚಂಚಲವಾಯಿತು. ಅನೇಕ ಕಾರಣಗಳಿಗಾಗಿ ಆತನ ಕೋಪ ಪರಾಕಾಷ್ಠೆ ತಲುಪಿತು. ಹಿಂದಿನ ದಿನ ಕೃಷ್ಣ ಏಕಾದಶಿ ಎಂದು ಉಳುವುದನ್ನು ನಿಲ್ಲಿಸಿದ್ದ. ಒಂದು ದಿನ ಉಳುವುದನ್ನು ಮರೆತಿದ್ದಕ್ಕೆ ಇಂದು ಬೆಳಿಗ್ಗೆ ಎತ್ತುಗಳು ಹೊಲದಲ್ಲಿ ಆತನಿಗೆ ತ್ರಾಸು ಕೊಟ್ಟಿದ್ದವು. ಇದಲ್ಲದೆ ಸಿಸುರಾಮ ಬೆಳಬೆಳಗ್ಗೇನೇ ಪಕ್ಕದ ಹೊಲದ ಬಹುವಾನ ಹತ್ತಿರ ಹೊಲದ ಸಂಬಂಧ ಜಗಳ ಮಾಡಿದ್ದ. ಸಣ್ಣ ಮಾತಿಗೆ ಸುರುವಾದ ಜಗಳ ದೊಡ್ಡದಾಗಬಹುದಾಗಿದ್ದ ಅಪಾಯವನ್ನು ಮನಗಂಡು ಹೊತ್ತಿ ಉರಿಯುವ ಒಳಗಾಗಿಯೇ ಓಡಿದ್ದ. ಹಳೆಯ ಗಾದೆಯಂತೆ ಒಂದು ವಯಸ್ಸಿನಲ್ಲಿ ಅದು ಯಾವಾಗಲಾದರೂ ಒಬ್ಬನ ಮೇಲಿನ ಕೋಪಾವೇಶ, ಇನ್ನೊಬ್ಬನ ಹೆಂಡತಿ ಅನುಭವಿಸಬೇಕು. ಹಿಂದೆ ಒಂದು ಬಾರಿ



ಸಿಸುರಾಮ, ಬಹುವಾನ ಅಂತಸ್ತಿನ ಬಗ್ಗೆ ಅನುಮಾನಿಸಿ ಕೋಪೋದ್ರಿಕ್ತನಾಗಿ, ಭದರಿಯನ್ನು ಹೊಡೆದ. ಕಾರಣ ಇಷ್ಟೇ; ಅವಳು ಎತ್ತುಗಳಿಗೆ ಸರಿಯಾಗಿ ಮೇವು ಹಾಕಲಿಲ್ಲ ಎಂದು.

ಭೂದೇವಿಯಂತಿರುವ ಭದರಿ ಆಕೆಯ ಗಂಡನ ಈ ತರಹದ ಮೇಲ್ನುಗ್ಗುವಿಕೆಯನ್ನು ತಾಳ್ಮೆಯಿಂದ ನಿಟ್ಟುಸಿರು ಬಿಡದೆ ಸಹಿಸಿದ್ದಳು. ಈ ರೀತಿ ಆಗಾಗ ಬೀಳುವ ಹೊಡೆತಗಳು ಮತ್ತು ಶಿಕ್ಷೆಗಳು ಮದುವೆ ಎಂಬ ಜೀವನದಲ್ಲಿ ನಿದ್ರೆ ಮತ್ತು ಹಸಿವಿನ ಅಗತ್ಯಗಳಿದ್ದಂತೆ. ಸಿಸುರಾಮನಿಗಾಗಿ ಈ ರೀತಿಯ ತ್ಯಾಗ ಮನೋಭಾವದಿಂದಾಗಿ ಮುಕ್ತಿ ಪಡೆದಿದ್ದಳು.

ಆದರೆ ಎಲ್ಲದಕ್ಕೂ ತಡೆ ಉಂಟು. ಸಹನಶೀಲತೆಯನ್ನು ಹೊಂದಿರುವ ಭೂತಾಯಿಯು ಕೂಡ ಒಮ್ಮೆ ಭೂಕಂಪಗೊಳಿಸುತ್ತಾಳೆ. ಬಡಪಾಯಿ ಭದರಿ ಕೂಡ ಪ್ರತೀಕಾರಕ್ಕಾಗಿ ತಾಳ್ಮೆಗೆಡಲಿಲ್ಲ. ಹೊಗೆಯಾಡುವ ಬೆಂಕಿಯನ್ನು ಹಚ್ಚುವುದರಲ್ಲಿ ಭದರಿ ತನ್ನೆಲ್ಲಾ ಪ್ರಯತ್ನಗಳನ್ನು ಮುಗಿಸಿದ್ದಳು.

ಸಿಸುರಾಮ ಅವಳತ್ತ ಇರಿಯುವ ನೋಟ ಬೀರಿ ಆವೇಶದಿಂದ, ''ಪೋತಪ್ಪನ ಮಗಳೇ, ಅಡುಗೆಯನ್ನು ಇನ್ನೂ ಯಾಕೆ ಮಾಡಿಲ್ಲ, ಎಷ್ಟೊತ್ತಾಗಿದೆ ಕಾಣುತ್ತಿಲ್ಲವೆ'' – ಎಂದು ಕಿಡಿಕಾರಿದ. ಅವನ ಮುಖ ಮತ್ತು ಕಣ್ಣುಗಳು ಕೋಪದಿಂದ ಕೆಂಪಾದವು.

ಹೊಗೆಯಿಂದ ಹೊರಳಿ ಭದರಿ ''ನನ್ನ ತಲೆಯ ಮೇಲೆ ಅಡುಗೆ ಮಾಡಲೇ ? ತುಂಡು ಕಟ್ಟಿಗೆ ಮನೆಯಲ್ಲಿಲ್ಲ. ಹಸಿಯಾದ ಕಟ್ಟಿಗೆಯಿಂದ ಬೆಂಕಿ ಹಚ್ಚಲು ಊದುತ್ತಿದ್ದೇನೆ. ತಲೆಯನ್ನು ಸ್ವಲ್ಪವಾದರೂ ಉಪಯೋಗಿಸದೆ ಸುಖಾಸುಮ್ಮನೆ ಸಿಟ್ಟಿಗೇಳುವುದೇ'' ಎಂದು ಕೇಳಿದಳು. ಅವಳ ಮಾತುಗಳಲ್ಲಿ ಪ್ರತಿಭಟನೆ ಇತ್ತು, ಅವಳ ಊದಿಕೊಂಡಿದ್ದ ಕಣ್ಣಾಲಿಗಳು ತುಂಬಿದ್ದವು.

''ಏನು ಹೇಳುತ್ತೀಯೇ ಹುಚ್ಚನ ಮಗಳೇ'' ಎಂದು ಸಿಸುರಾಮ ಚೀರುತ್ತಾ, ಭುಜ ಎಗರಿಸುತ್ತಾ ಭದರಿ ಕಡೆಗೆ ಧಾವಿಸಿ, ನೆಲದ ಮೇಲೆ ಇದ್ದ ಮೈದಾದಿಂದ ಆಕೆಯ ಬೆನ್ನಿಗೆ ಬಾರಿಸಿದ. ಇನ್ನೇನು ಎರಡನೇ ಬಾರಿ ಹೊಡೆತ ಬೀಳುವುದಕ್ಕೆ ಮುನ್ನ ಭದರಿಯ ಆರ್ತನಾದ ಕೇಳಿ, ಸಿಸುರಾಮನ ತಮ್ಮ ಕಿನಾರಾಮ ಬೇಗನೆ ಓಡುತ್ತಾ ಬಂದು ಅವನ ಅಣ್ಣನನ್ನು ಹಿಡಿದುಕೊಂಡು ಹೊರಗೆ ಎಳೆದುಕೊಂಡು ಹೋದ. ರಕ್ತದ ಮಡುವಿನಲ್ಲಿ ಬಡಪಾಯಿ ಭದರಿ ಮೂರ್ಛೆ ಬಿದ್ದಿದ್ದಳು.

ಆನಂತರ ಭದರಿಯನ್ನು ಆಸ್ಪತ್ರೆಗೆ ಸೇರಿಸಿದರು. ಆಸ್ಪತ್ರೆಯಲ್ಲಿ ಮೂರು ದಿನ ಇದ್ದ ನಂತರ ಪ್ರಜ್ಞೆ ಬಂದು ಇಡೀ ಕೋಣೆಯಲ್ಲೆಲ್ಲಾ ನೋಡಿದಳು, ತನ್ನ ಹಾಸಿಗೆ ಹತ್ತಿರ ಯಾರಾದರೂ ಇರಬಹುದೇ ಎಂದು. ಒಬ್ಬ ಸೇವಕ ಹತ್ತಿರ ಬಂದು ಅವಳನ್ನು ಗಮನಿಸಿದ. ಭದರಿ ಕ್ಷೀಣ ಸ್ವರದಿಂದ ''ಅವರು ಎಲ್ಲಿ?'' ಎಂದು ಕುತೂಹಲದಿಂದ ಕೇಳಿದಳು.

''ನಿಮಗೆ ಯಾರು ಬೇಕಿತ್ತು?'' ಸೇವಕ ಕೇಳಿದ.

''ನನ್ನ ಗಂಡ ಸಾರ್'' ಎಂದು ಸಣ್ಣ ಧ್ವನಿಯಲ್ಲಿ ಭದರಿ ಹೇಳಿದಳು.

''ಆ ಮೂರ್ಖ ! ಅವನೀಗ ಜೈಲಲ್ಲಿದ್ದಾನೆ.''

''ಆತನಿಲ್ಲಿಗೆ ಬರಲಿ ಸಾರ್'' ಭದರಿ ಬೇಡಿಕೊಂಡಳು.

''ಅವನು ಹೇಗೆ ಬರುತ್ತಾನೆ ? ಅವನು ಈಗ ಪೊಲೀಸರ ವಶದಲ್ಲಿದ್ದಾನೆ, ಅವನ ಬಗ್ಗೆ ಯೋಚಿಸಬೇಡಿ. ಅವನ ಬಗ್ಗೆ ಯೋಚಿಸಿದರೆ ಮತ್ತೆ ನೀವು ಹಾಳಾಗಬಹುದು.''

ಸೇವಕನ ಮಾತು ಕೇಳಿ ಭದರಿ ಕಣ್ಣುಗಳು ಚಿಕ್ಕದಾದವು. ಕೆಲವೇ ಸೆಕೆಂಡುಗಳಲ್ಲಿ ಮತ್ತೆ ಅವಳು ಪ್ರಜ್ಞೆ ತಪ್ಪಿದಳು. ಸೇವಕನು ಈ ವಿಷಯದ ಬಗ್ಗೆ ವೈದ್ಯರಿಗೆ ಹೇಳಿದ. ಸಿಸುರಾಮನನ್ನು ರೋಗಿಯ ಹತ್ತಿರ ಕರೆತರದಿದ್ದರೆ ಅವಳ ಸ್ಥಿತಿ ಹದಗೆಡಬಹುದೆಂದು ನಿರ್ಧರಿಸಿದರು. ವೈದ್ಯರು ಸಿಸುರಾಮನನ್ನು ಭದರಿಯ ಹಾಸಿಗೆಯ ಹತ್ತಿರ ಇರಲು ವ್ಯವಸ್ಥೆ ಮಾಡಿದರು. ಕಾರಣ ಪ್ರಜ್ಞೆ ಬಂದ ನಂತರ ಅವಳ ಗಂಡನನ್ನು ಕಾಣಬಹುದಾಗಿತ್ತು.

ಮರುದಿನ ಬೆಳಿಗ್ಗೆ ಭದರಿಗೆ ಪ್ರಜ್ಞೆ ಬಂದು ನೋಡುತ್ತಾಳೆ, ಸಿಸುರಾಮ ಅವಳ ತಲೆಯನ್ನು ನೇವರಿಸುತ್ತಿದ್ದಾನೆ, ಮತ್ತು ಮೆಲ್ಲಗೆ ಅವಳ ಕೂದಲನ್ನು ಬೆರಳುಗಳಿಂದ ತೀಡುತ್ತಿದ್ದಾನೆ. ಈ ನೋಟವನ್ನು ಕಂಡಾಗ ಅವಳಿಗೆ ಸಮಾಧಾನವಾಯಿತು. ಅವಳ ಎಲ್ಲಾ ಕಷ್ಟಗಳು ಅವನ ಇರುವಿಕೆಯಿಂದ ಹೋದಂತಾಯ್ತು. ಅವಳು ಮೆಲ್ಲನೆ ಮುಗುಳ್ನಗುತ್ತಾ, ''ಹೇಗಿದ್ದೀರಿ, ನೀವು ಪ್ರತಿದಿನ ತಪ್ಪದೇ ಊಟ ಮಾಡುತ್ತೀರಾ'' ಎಂದು ಪ್ರಶ್ನಿಸಿದಳು.

''ಪರವಾ ಇಲ್ಲ ಬಿಡಿ, ಇನ್ನೊಂದೆರೆಡು ದಿನಗಳಲ್ಲಿ ನಾನು ಆರಾಮಾಗುತ್ತೇನೆ. ದಯವಿಟ್ಟು ಮನೆಗೆ ಕರೆದುಕೊಂಡು ಹೋಗಿ; ನಾನು ನಿಮಗೆ ಸಹಾಯ ಮಾಡುತ್ತೇನೆ'' ಎಂದಳು. ಸಿಸುರಾಮನ ಕಣ್ಣಿನಿಂದ ಎರಡು ಹನಿಗಳು ವೇಗವಾಗಿ ಇಳಿದು ಅವನ ಕೆನ್ನೆ ಮೇಲೆ ಬಿದ್ದವು.

ಭದರಿ ತನ್ನ ಹಾಸಿಗೆಯತ್ತ ವೈದ್ಯರು ಬರುವುದನ್ನು ನೋಡಿ ಕಳಕಳಿಯಿಂದ, ''ನನ್ನ ದೇವರೆ, ನನ್ನ ತಂದೆಯೇ, ಅವರನ್ನೇನು ಬಯ್ಯಬೇಡಿ, ಅವನು ಮುಗ್ಧ, ತಪ್ಪಿಲ್ಲದವನು, ಕ್ಷಮಿಸಿ, ಬಿಟ್ಟುಬಿಡಿ, ನನ್ನ ಗಂಡನನ್ನು ಕ್ಷಮಿಸಿ'' ಎಂದು ಬೇಡಿಕೊಂಡಳು. ''ನಾನೇ ಎಡವಿ ಮೈದಾ ಮೇಲೆ ಬಿದ್ದು ಹೀಗಾಯಿತು'' ಎಂದು ಕೇಳಿಕೊಂಡಳು. ಅವಳ ಕಣ್ಣುಗಳು ನೀರಿನಿಂದ ತುಂಬಿಹೋಗಿದ್ದವು. ಭದರಿಯ ಈ ಹೇಳಿಕೆಯಿಂದ ವೈದ್ಯರು, ಸೇವಕರು ಮತ್ತು ಸಿಸುರಾಮ ಎಲ್ಲರೂ ಮೂಕವಿಸ್ಮಿತರಾದರು. ಸಿಸುರಾಮನಿಗೆ ತನ್ನ ದುಃಖವನ್ನು ಬಹಳಷ್ಟು ಹೊತ್ತು ಹಿಡಿಯಲಾಗಲಿಲ್ಲ, ಅವನು ಅತ್ಯಂತ ವೇದನೆಯಿಂದ ಮಗುವಿನಂತೆ ಅತ್ತ.

''ಇದು ಸತ್ಯ ಅಲ್ಲ ಸಾರ್. ನಾನು ಮೈದಾದಿಂದ ಅವಳಿಗೆ ಹೊಡೆದೆ. ನನ್ನನ್ನು ನೇಣು ಹಾಕುವುದೇ ಸರಿ. ನಾನು ಪಾಪಿಷ್ಠ, ನಾನು ನನ್ನ ತ್ಯಾಗಮಯಿ ಹೆಂಡತಿಯನ್ನು ಇರಿದೆ'' ಎಂದು ಹೇಳಿದ. ಕೆಲವು ವಾರಗಳ ನಂತರ ಭದರಿಯ ಗಾಯಗಳು ಮಾದ ನಂತರ, ಆಸ್ಪತ್ರೆಯಿಂದ ಅವಳನ್ನು ಬಿಡುಗಡೆ ಮಾಡಿದರು. ಅವಳು ಸಿಸುರಾಮನನ್ನು ಅವನ ಮುಗ್ಧತೆಯ ನೆವದಿಂದ ಕಾನೂನಿನಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಿದರೂ, ಸಿಸುರಾಮನು ಮೂರು ತಿಂಗಳ ಕಠಿಣ ಶಿಕ್ಷೆಗೆ ಗುರಿಯಾಗಬೇಕಾಯ್ತು. ಸಿಸುರಾಮ ತನ್ನ ಪಾಪಕ್ಕೆ ಪ್ರಾಯಶ್ಚಿತ್ತಕ್ಕಾಗಿ ನಗುನಗುತ್ತಾ ಜೈಲಿಗೆ ಹೋದ. ಭದರಿ ಅನುಭವಿಸಿದ ಅತೀವ ದುಃಖದಿಂದ ಆಕೆಯ ಪ್ರೀತಿಯ ಗಂಡನ ಮೇಲೆ ವ್ಯತಿರಿಕ್ತ ಪರಿಣಾಮವಾಯಿತು. ಯಾರೂ ಅವಳನ್ನು ಹೀಯಾಳಿಸಲಾರರು. ಎಷ್ಟೋ ಸಾರಿ ಅವಳು ತನ್ನನ್ನು ತಾನೇ ಹಳಿದುಕೊಂಡಿದ್ದಾಳೆ.

ಮೂಲ ಅಸ್ಸಾಮಿ ಭಾಷೆ ಲೇಖಕರು : **ಲಕ್ಷ್ಮೀಕಾಂತ ಬೆಜ್ ಬರುವಾ**
ಅಸ್ಸಾಮಿಯಿಂದ ಆಂಗ್ಲಭಾಷೆಗೆ : **ಬಿರಿಂಚಿಕುಮಾರ ಬರುವಾ**
ಕನ್ನಡಕ್ಕೆ : **ತಂಬ್ರಹಳ್ಳಿ ರಾಮನಮಲಿ**
ಹರಪನಹಳ್ಳಿ



ಲೇಖಕರು : **ಸರ್ಫ್ರಾಜ್ ಚಂದ್ರಗುತ್ತಿ**
ಪುಟ : ೪೨೬+೧೨  ಬೆಲೆ : ರೂ. ೨೫೦/-
ಪ್ರಕಾಶನ : **ಅಕ್ಷಯಾ ಪ್ರಿಂಟರ್ಸ್**
೨೪, ೧ನೇ ಮುಖ್ಯರಸ್ತೆ, ಶಕ್ತಿಗಣಪತಿ ನಗರ, ಬಸವೇಶ್ವರನಗರ, ಬೆಂಗಳೂರು -೭೯



# ಸುಗಮ ಸಂಗೀತಕ್ಕೊಂದು ಪಠ್ಯ ಕೃತಿ

**ಡಾ॥ ಎ. ರಘುರಾಂ**

ಸುಗಮ ಸಂಗೀತ ಕನ್ನಡ ಕಾವ್ಯದ ಆಧುನಿಕ ಆವಿಷ್ಕಾರ. ಕನ್ನಡಕ್ಕೇ ವಿಶಿಷ್ಟವಾದ ಈ ಸಂಗೀತ ಹೊಸಗನ್ನಡ ಕಾವ್ಯದ ಒಂದು ಭಾಗವಾಗಿಯೇ ಬೆಳೆದುಬಂದಿದೆ. ಬಂಗಾಳಿಯಲ್ಲಿ ಬಂದ ರವೀಂದ್ರ ಸಂಗೀತ, ನಜರುಲಿ ಸಂಗೀತ, ಉರ್ದುವಿನ ಗಝಲ್ ಸಂಗೀತಕ್ಕಿಂತ ವಿಶಾಲ ಹರವು, ವಸ್ತು ವೈವಿಧ್ಯ, ಭಾವ ನಾವೀನ್ಯತೆ ಇರುವ ಕನ್ನಡದ ಈ ಕಾವ್ಯ ಸಂಗೀತ ಭಾರತೀಯ ಭಾಷೆಗಳಲ್ಲಿಯೆ ಅಪರೂಪವಾದದ್ದು.

ಆಧುನಿಕ ಕನ್ನಡ ಕಾವ್ಯ ಕಣ್ತೆರೆಯುವುದರೊಂದಿಗೆ ಸೀತಾಮುಲ್ಕಿ, ಜಯವಂತಿದೇವಿ ಹಿರೇಬೆಟ್ಟು ಬಾಳಪ್ಪ ಹುಕ್ಕೇರಿ, ಪಿ. ಕಾಳಿಂಗರಾಯ, ಮೈಸೂರು ಅನಂತಸ್ವಾಮಿ ಮೊದಲಾದ ಗಾಯಕರು ಈ ಕವಿತೆಗಳನ್ನು ಹಾಡಿ ಜನಪ್ರಿಯ ಗೊಳಿಸಿದರು. ಈ ಹಾಡುಗಾರಿಕೆಯೊಂದಿಗೆ ಬಿ.ಎಂ.ಶ್ರೀ, ಪಂಜೆ ಮಂಗೇಶರಾಯರು, ಗೋವಿಂದ ಪೈ, ಬೇಂದ್ರೆ, ಕಾವ್ಯಾನಂದ, ಕುವೆಂಪು, ಕೆ. ಎಸ್. ನರಸಿಂಹಸ್ವಾಮಿ, ಗೋಪಾಲಕೃಷ್ಣ ಅಡಿಗ, ಮೊದಲಾದ ಕವಿಗಳ ರಚನೆಗಳು ಕನ್ನಡಿಗರ ಮನೆ-ಮನಗಳನ್ನು ಮುಟ್ಟಿದವು. ಹೊಸಗನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಾವ್ಯ ಸಾಧಿಸಿದ ಪರಿಣಾಮ ಅದ್ಭುತವಾದುದು. ಚಾರಿತ್ರಿಕ ಸಂದರ್ಭಗಳನ್ನು ದಾಖಲಿಸುತ್ತಲೆ ಒಂದು ಅಪೂರ್ವ ಯುಗವಾಗಿ ಹೊರಹೊಮ್ಮಿದುದು ಕಾವ್ಯದ ಹಿರಿಮೆಯೆ ಆಗಿದೆ. ಗೇಯತೆ, ತನ್ಮಯತೆ, ಅರ್ಥಸ್ಫುಟತೆಯ ಕಾರಣಗಳಿಂದಾಗಿ ಇಂದಿನವರೆಗೂ ಅದು ಕ್ರಮಿಸಿದ ಹಾದಿ ಅನೂಹ್ಯವಾದುದು. ಸುಗಮ ಸಂಗೀತಕ್ಕೂ ಭಾವಗೀತೆಗೂ ಅನ್ಯೋನ್ಯ ಸಂಬಂಧವಿದೆ. 'ಸಂಗೀತ' ಎಂದರೆ ಹಾಡುವ, ಕೇಳುವ ಒಂದು ಪರಂಪರೆ ಮಾತ್ರ ಎಂದು ನಂಬಿದವರಿಗೆ ಅದೊಂದು ಅರ್ಥಪೂರ್ಣ ಸಂವಾದವನ್ನು ಏರ್ಪಡಿಸುವ ಮಾಧ್ಯಮ ಎಂಬುದನ್ನು ಸುಗಮ ಸಂಗೀತ ಮನವರಿಕೆ ಮಾಡಿಕೊಟ್ಟಿದೆ. 'ಭಾವ'ದ ಅರ್ಥಪೂರ್ಣತೆಯನ್ನು ಕೇಳುಗನಿಗೆ ತಲುಪಿಸುವ ಕಾರಣದಿಂದಲೇ ಇದು ವಿಶೇಷ ಮನ್ನಣೆಗೆ ಪಾತ್ರವಾಗಿದೆ. ಸುಗಮ ಸಂಗೀತವು ಭಾವ, ನಾದದ ನಿಷ್ಠೆಯನ್ನು ಪ್ರಕಟಿಸುವ ದಿಶೆಯಲ್ಲಿ ಸಶಕ್ತ ಮಾಧ್ಯಮವಾಯಿತು. ಆಧುನಿಕ ಕನ್ನಡ ಕಾವ್ಯದ ವೈವಿಧ್ಯಮಯವಾದ ವಸ್ತು ವಿಷಯವನ್ನು ಕೇಳುಗನಿಗೆ ತನ್ಮಯತೆಯಿಂದ ಮುಟ್ಟಿಸುವ ಕೆಲಸವನ್ನು ಶಕ್ತಿಯುತವಾಗಿ ಮಾಡಿದ ಗಂಭೀರ ಪ್ರಯತ್ನವಿದು. ಕನ್ನಡ ಕಾವ್ಯವು ಆರಂಭದಿಂದಲೂ ಸಂಗೀತದೊಂದಿಗೆ ತನ್ನ ಸಾಹಚರ್ಯವನ್ನು ಉಳಿಸಿಕೊಂಡು ಬಂದಿದೆ. ನವ್ಯ ಕಾವ್ಯದ ಹೊತ್ತಿಗೆ ಅದರ ಸುದೀರ್ಘ ಇತಿಹಾಸವು ಮುಗಿದು ಕಾವ್ಯ ಬೇರೆ, ಸಂಗೀತ ಬೇರೆ ಎಂಬ ಹಠಮಾರಿ ವಾದವೊಂದು ತಲೆಯೆತ್ತಿತ್ತು. ನವ್ಯೋತ್ತರ ಭಾವಗೀತೆಗಳು ಮತ್ತೆ ಈ ಪರಂಪರೆಯನ್ನು ಮುಂದುವರಿಸಿದವು.

ಈಗಾಗಲೇ ಹಲವು ಕೃತಿಗಳ ಮೂಲಕ ಕನ್ನಡದ ಓದುಗರಿಗೆ ಪರಿಚಯವಾಗಿರುವ ಡಾ॥ ಸರ್ಫ್ರಾಜ್ ಚಂದ್ರಗುತ್ತಿಯವರ ಮಹತ್ವಾಕಾಂಕ್ಷೆಯ ಫಲವಾಗಿ ಇದು ಸುಗಮ ಸಂಗೀತಕ್ಕೆ ಒಂದು ಪಠ್ಯಕೃತಿಯಂತಿದೆ. ಇದರಲ್ಲಿ ಎಂಟು ಅಧ್ಯಾಯಗಳಿವೆ. ಅಧ್ಯಯನದ ವ್ಯಾಪ್ತಿ ಮತ್ತು ಮಹತ್ವ, ಸಂಗೀತ ಮತ್ತು ಕಾವ್ಯದ ಸಂಬಂಧ, ಸಂಗೀತದ ವಿಭಿನ್ನ ಮಾದರಿಗಳು ಮತ್ತು ಸಾಹಿತ್ಯ, ಆಧುನಿಕ ಕನ್ನಡ ಕಾವ್ಯ ಮತ್ತು ಸುಗಮ ಸಂಗೀತ, ಸುಗಮ ಸಂಗೀತಕ್ಕೆ ಆಧುನಿಕ ಕನ್ನಡ ಕವಿಗಳ ಕೊಡುಗೆ, ಸುಗಮ ಸಂಗೀತದಲ್ಲಿ ಕವಿತೆಯ ವಸ್ತು, ಭಾಷೆ ಮತ್ತು ಶೈಲಿ, ಪ್ರಾತಿನಿಧಿಕ ನೆಲೆಗಳು ಎಂದು ಅಧ್ಯಾಯಗಳನ್ನು ವರ್ಗೀಕರಿಸಿಕೊಂಡಿದ್ದಾರೆ. ಅನುಬಂಧದಲ್ಲಿ ಸುಗಮ ಸಂಗೀತ ಕಲಾವಿದರ ವಿಳಾಸ, ಧ್ವನಿ ಸುರುಳಿಗಳು, ಸುಗಮ ಸಂಗೀತ ಸಂಸ್ಥೆಗಳ ವಿವರಗಳಿವೆ. ಕನ್ನಡ ಕಾವ್ಯ ಮತ್ತು ಹಾಡುಗಾರಿಕೆಯ ಸಂಬಂಧ, ಸುಗಮ ಸಂಗೀತವನ್ನು ಚಿತ್ರ ಸಂಗೀತ, ಜನಪದ ಸಂಗೀತ, ರಂಗ ಸಂಗೀತದೊಂದಿಗೆ ಇಟ್ಟು ನೋಡುವ ಕ್ರಮ, ಗೇಯರೂಪದ ಆಧುನಿಕ ಕನ್ನಡ ಕವಿತೆಯ ಸ್ವರೂಪವನ್ನು ಗುರುತಿಸುವುದು, ಸಂವಹನದ ಒಂದು ವಿಧಾನವಾಗಿ ಭಾವಗೀತೆಯ ಹಾಡುಗಾರಿಕೆಯನ್ನು ಪರಿಭಾವಿಸುವುದು – ಹೀಗೆ ವಿಸ್ತೃತ ಅಧ್ಯಯನವನ್ನು ಲೇಖಕರು ಮಾಡಿದ್ದಾರೆ. ಸುಗಮ ಸಂಗೀತದ ಭಿನ್ನ ಶೈಲಿಗಳನ್ನು ಸಾಹಿತ್ಯದ ನೆಲೆಯಲ್ಲಿ ಚರ್ಚಿಸುವ ಆರನೆಯ ಅಧ್ಯಾಯ ಅತ್ಯಂತ ಮಹತ್ವಪೂರ್ಣವಾದುದು. ಹೆಚ್. ಕೆ. ನಾರಾಯಣ ಹಾಗೂ ಪದ್ಮಚರಣರ ರಾಗನಿಷ್ಠತೆ, ಪಿ. ಕಾಳಿಂಗರಾಯ ಮತ್ತು ಮೈಸೂರು ಅನಂತಸ್ವಾಮಿಯವರ ಸಂಗೀತ ಮತ್ತು ಸಾಹಿತ್ಯನಿಷ್ಠೆ ಹಾಗೂ ಸಿ. ಅಶ್ವಥ್‌ರ ಸಾಹಿತ್ಯನಿಷ್ಠೆ – ಹೀಗೆ ಸಂಗೀತದ ಮೂರು ಶೈಲಿಗಳನ್ನು ವಿಸ್ತೃತವಾಗಿ ಹಾಗೂ ಸೋದಾಹರಣವಾಗಿ ಚರ್ಚಿಸಿದ್ದಾರೆ. ''ರಾಗ ಸಂಯೋಜನೆಯ ಸಂದರ್ಭದಲ್ಲಿ ಎರಡು ಮುಖ್ಯ ಪ್ರಶ್ನೆಗಳಿವೆ. ರಾಗ ಸಂಯೋಜನೆಗೊಂಡ ಸಾಹಿತ್ಯವು ಶಾಸ್ತ್ರೀಯ ಸಂಗೀತದ ಭಾಗವಾಗಬಹುದೇ ವಿನಾ ಅದಕ್ಕೆ ಸ್ವತಂತ್ರ ಅಸ್ತಿತ್ವವಿರುವುದು ಕಷ್ಟಸಾಧ್ಯ. ಸಿದ್ಧರಾಗವೊಂದರ ಚೌಕಟ್ಟಿಗೆ ಸಾಹಿತ್ಯವನ್ನು ಹೊಂದಿಸುವ ಪ್ರಯತ್ನ ಸಾಹಿತ್ಯನಿಷ್ಠೆಯ ಹಿನ್ನೆಲೆಯಲ್ಲಿ ಎಷ್ಟು ಸರಿ ? ಇಂತಹ ರಾಗ ಸಂಯೋಜನೆಯ ಪ್ರಯತ್ನದಿಂದಾಗಿ ಕವಿತೆಯನ್ನು ರಾಗವೊಂದರಿಂದ ನಿರ್ಬಂಧಿಸಿದಂತಾಗುವುದಿಲ್ಲವೆ ?''– ಈ ಮಾತಿಗೆ ಅಪವಾದಗಳಿದ್ದರೂ ಅವುಗಳ ಪ್ರಮಾಣ ತೀರ ಕಡಿಮೆ ಎನ್ನುತ್ತಾರೆ. ಸರ್ಫ್ರಾಜ್ ರಾಗದಿಂದ ಕವಿತೆಯನ್ನು ನಿರ್ಬಂಧಿಸಿದರೆ ಆಗುವ ಅನಾಹುತಗಳ ಬಗ್ಗೆ ಅನೇಕ ಉದಾಹರಣೆಗಳನ್ನು ನೀಡಿ ಸ್ವರಸಂಯೋಜನೆ ಇದಕ್ಕೆ ಉತ್ತರ ಎಂದು ಹೇಳುತ್ತಾರೆ. ರಾಗ ಸಂಯೋಜನೆ ಕವಿತೆಗೆ ನ್ಯಾಯ ಒದಗಿಸಲಾರದು ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಸಂಗೀತವು ಸಾಹಿತ್ಯದ ಅನುವರ್ತಿಯಾಗ ಬೇಕೆ ಹೊರತು, ಸಾಹಿತ್ಯವು ಸಂಗೀತದ ಅನುವರ್ತಿಯಾಗ ಬಾರದು. ಗಾಯನದಲ್ಲಿ ಅರ್ಥ, ಭಾವ, ಧ್ವನಿಗಳನ್ನು ಉದ್ದೀಪಿಸುವ ಕ್ರಮ ಅನನ್ಯವಾದುದು. ಸಿದ್ಧರಾಗವನ್ನು ಕವಿತೆಗೆ ಅನ್ವಯಿಸಿ ಹಾಡುವ ಕ್ರಮವನ್ನು ತಿರಸ್ಕರಿಸಿ ಕವಿತೆಯೊಳಗೆ ಹುದುಗಿರುವ ಕಾವ್ಯಾರ್ಥವನ್ನು ನಾದಾರ್ಥದೊಂದಿಗೆ ಹೊರಗೆಳೆದು ತರುವ ಸ್ವರ ಸಂಯೋಜನೆ ಸಿದ್ಧಾಂತದ ಮೇಲೆ ಲೇಖಕರು ಸುಗಮ ಸಂಗೀತದ ಥಿಯರಿಯನ್ನು ಬೆಳೆಸಿದ್ದಾರೆ.

ಸುಗಮ ಸಂಗೀತಕ್ಕೆ ತನ್ನದೇ ಆದ ಅಭಿವ್ಯಕ್ತಿಯ ಶೈಲಿಯಿದೆ. ಇದೊಂದು ಸಂಪೂರ್ಣ ಸಾಹಿತ್ಯನಿಷ್ಠ ಸಂಗೀತದ ಮಾದರಿ ಎಂಬ ಪ್ರಮೇಯವನ್ನು ನಿರೂಪಿಸುವ ಪ್ರಯತ್ನ ಈ ಕ್ಷೇತ್ರದಲ್ಲಿಯೆ ಹೊಸದು. ತಮ್ಮ ವಿಚಾರಗಳನ್ನು ಪ್ರತಿಪಾದಿಸುವಾಗ ಕನ್ನಡ ಹಾಗೂ ಕನ್ನಡೇತರ ಉದಾಹರಣೆಗಳನ್ನು ಲೇಖಕರು ನೀಡಿದ್ದಾರೆ. ಕವಿ, ಕಲಾವಿದರು, ವಿಮರ್ಶಕರ ಹಲವಾರು ಮಾತುಗಳನ್ನು ತಮ್ಮ ವಾದ ಸಮರ್ಥನೆಗೆ ಬಳಸಿಕೊಂಡಿದ್ದಾರೆ. ಕಾವ್ಯಗಾಯನದ ಪರ-ವಿರೋಧಗಳ ಚರ್ಚೆಯನ್ನು ನವ್ಯ ಕಾವ್ಯದ ಹಿನ್ನೆಲೆಯಲ್ಲಿ ವಿಸ್ತೃತವಾಗಿ ತೆರೆದಿಟ್ಟಿದ್ದಾರೆ.

(೫೪ನೇ ಪುಟಕ್ಕೆ)

**ಡಾ॥ ಇಂದಿರಾ ಹೆಗ್ಗಡೆ**



# ಪನ್ನಾ ರಾಷ್ಟ್ರೀಯ ಉದ್ಯಾನ ಕೆನ್ ನದಿ ರಾಣೆ ಫಾಲ್ಸ್

ಖಜುರಾಹುದಿಂದ ೨೦ ಕಿಲೋಮೀಟರ್ ದೂರದಲ್ಲಿ ಪನ್ನಾ ರಾಷ್ಟ್ರೀಯ ಉದ್ಯಾನವನ ಇದೆ. ಈ ಉದ್ಯಾನವನದ ಮಧ್ಯದಿಂದ ಹರಿದುಬರುವ ಕೆನ್ ನದಿಯ ಮುಂದಿನ ಹೆಜ್ಜೆ ರಾಣೆ ಫಾಲ್ಸ್. ನದಿ ಪಾತ್ರದ ಭೂಮಿಯ ಮೇಲೆ ಜ್ವಾಲಾಮುಖಿಯ ಲಾವಾರಸ ಹರಿದ ಪರಿಣಾಮವಾಗಿ ಅದ್ಭುತ ಚಿತ್ರಕಲೆ ರಚಿತವಾಗಿದೆ ಎನ್ನುತ್ತಾನೆ ಕಾವಲುಗಾರ. ಬೂದು, ಪಿಂಕ್, ಕೆಂಪು, ಪಚ್ಚೆ, ನೀಲ ಗ್ರಾನೈಟ್‌ಗಳುಳ್ಳ ಶಿಲಾಭೂಮಿ ಇದು. ಕಮರಿಗಳಲ್ಲಿ, ಕೊರಕಲುಗಳಲ್ಲಿ ಪದರ ಪದರವಾಗಿ ಕಾಣುವ ಅನೇಕ ಬಣ್ಣಗಳ ಶಿಲೆಗಳನ್ನು ನೂರು ಅಡಿ ಮೇಲಿನಿಂದ ಗುರುತಿಸಬಹುದು. ಈ ಪ್ರಕೃತಿ ನಿರ್ಮಿತ ಅದ್ಭುತವು ಸುಮಾರು ೫ ಕಿ.ಮೀ. ದೂರದವರೆಗೆ ಹಬ್ಬಿದೆ. ಕೊರಕಲಿನ ಆಳ ಸುಮಾರು ೩೦ ಮೀಟರ್. ಅಷ್ಟು ಆಳದಲ್ಲಿಯೂ ಒಂದೇ ಸಮವಾಗಿ ನದಿ ಹರಿಯುವುದಿಲ್ಲ. ಜಿಗಿದು, ನಿಂತು, ಸಾವರಿಸಿ, ತಾಳ್ಮೆಯಿಂದ ಹರಿಯುತ್ತದೆ. ನಿಂತ ನೀರಿನ ಆಳವನ್ನು ಯಾರು ಬಲ್ಲರು ? ಅಲ್ಲಲ್ಲಿ ಇರುವ ಮಡುವಿನ ನೀಲ ಬಣ್ಣವು ಅದರ ಆಳವನ್ನು ಸಂಕೇತಿಸುತ್ತದೆ. ಕಾಲ ಕಾಲಕ್ಕೆ ಮಳೆ ಬಂದರೆ ಅಲ್ಲಲ್ಲಿ ಧುಮುಕುವ ಅನೇಕ ಜಲಪಾತಗಳ ನೋಟವನ್ನು ಆನಂದಿಸಬೇಕು ಎನ್ನುತ್ತಾನೆ ಕಾವಲುಗಾರ. ಅದು ಸುಳ್ಳಲ್ಲ, ಮಳೆ ಹೆಚ್ಚಾಗಿ ಸುರಿದು ನೆರೆ ಬಂದರೆ ನದಿಯ ಮೇಲ್ಭಾಗದ ನದಿಪಾತ್ರ ಮಾತ್ರವಲ್ಲ, ನದಿಯ ಮೇಲ್ಭಾಗದ ಭೂಮಿಯೂ ಜಲಾವೃತವಾಗಿ ನಾವು ಬಂದ ರಸ್ತೆ, ಅಲ್ಲಿ ಇರುವ ಸಣ್ಣ ಅಂಗಡಿಗಳೂ ಜಲಾವೃತವಾಗುತ್ತವೆ ಎಂದು ಅಂಗಡಿಯವರು ಹೇಳಿದರು. ಆಗ ಇಲ್ಲಿ ಪ್ರವಾಸಿಗರಿಗೆ ಪ್ರವೇಶವಿಲ್ಲ. ಈಗ ನೀರು ನದಿ ಪಾತ್ರಕ್ಕಿಂತ ೩೦ ಅಡಿ ಆಳದಲ್ಲಿ ಹರಿಯುತ್ತದೆ.

ಕೆನ್ ನದಿ ಒಂದು ವಿಶಿಷ್ಟ ಜಾತಿಯ ಮೊಸಳೆಗಳಿಗೆ ಪ್ರಸಿದ್ಧ. ಪನ್ನಾ ಕಾಡಿನ ಒಳಭಾಗದಲ್ಲಿ ಕೆನ್ ನದಿಯಲ್ಲಿ ಉದ್ದಮೂತಿಯ ಏಷ್ಯಾದ ಮೊಸಳೆ ಎಂಬ ಅಪರೂಪದ ಜಾತಿಯ ಮೊಸಳೆಗಳು ಹೆಚ್ಚಾಗಿದ್ದು ಒಂದು ಮೊಸಳೆ ಪಾರ್ಕ್ ನಿರ್ಮಾಣವಾಗಿದೆ. ಕಾವಲುಗಾರ ನಮ್ಮನ್ನು ಮೊಸಳೆ ಇರುವಲ್ಲಿಗೆ ಕರೆದೊಯ್ದ. ''ದಿನಾ ಮುಂಜಾವದಲ್ಲಿ ಮೊಸಳೆಗಳು ನೀರಿನಿಂದ ಹೊರಗೆ ಬಂದು ಬಿಸಿಲು ಕಾಯುತ್ತವೆ'', ಎಂದು ಒಂದು ಸ್ಥಳ ತೋರಿಸಿದರು ಸ್ಥಳೀಯರು. ಆ ಭಾಗದಲ್ಲಿ ನದಿಗೆ ಇಳಿಯಲು ಅವಕಾಶ ಇದೆ. ಉಳಿದೆಡೆ ಬ್ಯಾರಿಕೇಡ್ ನಿರ್ಮಿಸಲಾಗಿದೆ. ''ನೀವು ಇಷ್ಟಪಟ್ಟರೆ ನದಿಗೆ ಇಳಿದು ಸ್ನಾನ ಮಾಡಬಹುದು'' ಎಂದ ಊರ ಹುಡುಗ. ''ಮೊಸಳೆ ಇದೆಯೆನ್ನುತ್ತೀರಿ, ಸ್ನಾನ ಮಾಡಲು ಸಲಹೆ ನೀಡುತ್ತೀರಿ'' ಎಂದಳು ಮಗಳು ಸರಿತಾ. ಕೆಲವರು ಅಲ್ಲಿ ಸ್ನಾನ ಮಾಡುತ್ತಿದ್ದರು. ಅವರನ್ನು ತೋರಿಸಿ, ''ನೋಡಿ ಅವರು ಸ್ನಾನ ಮಾಡುತ್ತಿದ್ದಾರೆ. ಮೊಸಳೆ ನೀರಿನೊಳಗೆ ಇರುವವರನ್ನು ಹಿಡಿಯುವುದಿಲ್ಲ ದಡದಲ್ಲಿ ಇರುವವರನ್ನು ಮಾತ್ರ ಹಿಡಿಯುತ್ತದೆ'' ಎಂದರು. ಈ ಗುಟ್ಟು ನಮಗೆ ಗೊತ್ತಿರಲಿಲ್ಲ. ಕೆನ್ ನದಿ ಮುಂದೆ ಹರಿಯುವುದನ್ನು ನಾವು ಈ ಎತ್ತರದಿಂದ ಬಹು ದೂರದವರೆಗೆ ಕಾಣಬಹುದು. ಇಲ್ಲಿ ಬೋಟಿಂಗ್ ವ್ಯವಸ್ಥೆ ಇದೆ. ಕೆನ್ ನದಿಯ ದ್ವೀಪದಲ್ಲಿ ದೊಡ್ಡದಾದ ಮತ್ತು ವಿಶಿಷ್ಟ ಗ್ರೇ ಫಿಷ್ ಪ್ರಸಿದ್ಧಿ. ಇದನ್ನು ಬೇಟೆಯಾಡಲು ದೊಡ್ಡ ಗಾತ್ರದ ಹದ್ದುಗಳು ಇಲ್ಲಿ ಹಾರಾಡುತ್ತವೆಯಂತೆ.



ವಿಂಧ್ಯ ಪರ್ವತದ ಕಡೆಯಿಂದ ಹರಿದು ಪನ್ನಾ ರಾಷ್ಟ್ರೀಯ ಉದ್ಯಾನವನದ ಒಳಗಿನ ೫೫ ಕಿ.ಮೀ. ದೂರವನ್ನು ಕೆನ್ ನದಿ ಉತ್ತರದಿಂದ ದಕ್ಷಿಣಕ್ಕೆ ಕ್ರಮಿಸುತ್ತದೆ. ಮುಂದೆ ಯಮುನೆಗೆ ಸೇರುತ್ತದೆ. ಪನ್ನಾ ಉದ್ಯಾನ ವನದ ಪ್ರಾಣಿಗಳಿಗೆ ಕುಡಿಯಲು ಬೇಕಾಗುವ ಜಲಮೂಲ. ಈ ನದಿಗೆ ಪನ್ನಾ ಕಾಡಿನಲ್ಲಿ ಹಲವು ನೀರಿನ ಝರಿಗಳು ಸೇರುತ್ತವೆ. ನದಿಯ ದಡದಲ್ಲಿ ರಾಮಾಯಣದ ಕಾಲದ ಚಿತ್ರಕೂಟ ಇದೆಯಂತೆ. ಪುರಾತನ ಭಾರತದ ಶಿಲಾ ಕಲಾಕೃತಿಗಳು ಇರುವ ಗೊಡ್ವಾನ ಇರುವುದು ಈ ಭಾಗದಲ್ಲೇ. ಈ

ಭಾಗದ ವಜ್ರದ ಗಣಿಯಲ್ಲಿ ಕೊಹಿನೂರು ವಜ್ರ ದೊರಕಿತ್ತು ಎಂದೂ ಹೇಳುತ್ತಾರೆ.

ನಾವು ಮರಳಿ ಖಜುರಾಹುಗೆ ಬಂದೆವು. ನನಗೆ ಖಜುರಾಹುವಿನ ಪುರಾತತ್ವ ವಸ್ತು ಸಂಗ್ರಹಾಲಯ ನೋಡಬೇಕಿತ್ತು. ಇದು ನನ್ನ ಆದ್ಯತೆ. ಪ್ರದರ್ಶನಾಲಯದ ಬಳಿ ಬಂದೆ. ಅಲ್ಲಿ ಟಿಕೆಟ್ ಕೇಳಿದರು. ಖರೀದಿಗಾಗಿ ಹೋದರೆ ಮುನ್ನಾ ದಿನದ ವೀಕ್ಷಕ ವಿವರಣೆಗೆ ಪಡೆದ ಟಿಕೆಟು ಇಲ್ಲಿಗೂ ಸಲ್ಲುತ್ತದೆ ಎಂದ. ಅದೆನ್ನೆಲ್ಲಿ ಬಿಸಾಕಿದ್ದೇವೋ ಎಂದಾಗ 'ಬೇರೆ ಟಿಕೆಟ್ ವ್ಯವಸ್ಥೆ ಇಲ್ಲ' ಎಂದರು. ಮತ್ತೆ ಹೋಟೆಲಿಗೆ ನಡೆದು ಮುನ್ನಾ ದಿನ ಅರ್ಧ ಹರಿದು ಕಸದ ಡಬ್ಬಕ್ಕೆ ಹಾಕಿದ್ದ ಟಿಕೆಟ್ ತೆಗೆದುಕೊಂಡು ಮರಳಿ ಪ್ರದರ್ಶನಾಲಯದ ಒಳಗೆ ಹೋದೆ.

ಬುಂದೇಲ್‌ಖಂಡದ ಬ್ರಿಟಿಷ್ ಅಧಿಕಾರಿ ಈ ವಸ್ತು ಪ್ರದರ್ಶನಾಲಯದ ನಿರ್ಮಾಪಕ. ಆತ ೧೯೧೦ರಲ್ಲಿ ಬ್ರಿಟಿಷ್ ಸರಕಾರದ ಜೊತೆ ವ್ಯವಹರಿಸಿ, ಇಲ್ಲಿಯ ದೇವಾಲಯಗಳ ಸಮುಚ್ಚಯದಲ್ಲಿ ಬಿದ್ದಿದ್ದ ಅಪೂರ್ವ ಕಲಾಕೃತಿಗಳ ಸಂಪತ್ತನ್ನು ರಕ್ಷಿಸಿ, ಮರುಜೋಡಿಸಿ ವಿಶ್ವಪರಂಪರೆಯ ಪಟ್ಟಿಯಲ್ಲಿ ಈ ದೇವಸ್ಥಾನಗಳ ಸಮುಚ್ಚಯ ಬರುವಲ್ಲಿ ಮುತುವರ್ಜಿ ವಹಿಸಿದ. ಹೀಗಾಗಿ ಇಲ್ಲಿಯ ಪುರಾತತ್ವ ವಸ್ತುಗಳ ಪ್ರದರ್ಶನಾಲಯ ಅವನ ಹೆಸರನ್ನು ಪಡೆದುಕೊಂಡಿದೆ. ನಿರ್ಲಕ್ಷಿಸಲ್ಪಟ್ಟ ಭಾರತೀಯ ಪರಂಪರೆಯನ್ನು ಬ್ರಿಟಿಷ್ ಅಧಿಕಾರಿ ರಕ್ಷಿಸಿ ಜಗತ್ತಿಗೆ ಪರಿಚಯಿಸಿದ. ಮೊದಲು ಮಾತಂಗೇಶ್ವರ ದೇವಾಲಯದ ಮುಂಭಾಗದ ರಸ್ತೆಯಾಚೆ ವಸ್ತು ಪ್ರದರ್ಶನಾಲಯ ಇತ್ತು. ೧೯೫೨ರಲ್ಲಿ ಭಾರತೀಯ ಪುರಾತತ್ವ ಇಲಾಖೆಯವರು ಇದನ್ನು ತಮ್ಮ ವಶಕ್ಕೆ ಪಡೆದುಕೊಂಡರು. ೧೯೬೭ರಲ್ಲಿ ನೆಲದಡಿ ದೊರಕಿದ ಎಲ್ಲಾ ಅಮೂಲ್ಯ ಶಿಲ್ಪಗಳನ್ನು ಈಗಿನ ಕಟ್ಟಡಕ್ಕೆ ತರಲಾಯಿತು. ವೈದಿಕ, ಜೈನಮತಕ್ಕೆ ಸಂಬಂಧಿಸಿದ ಅನೇಕ ಶಿಲ್ಪಗಳು ಇಲ್ಲಿ ಇವೆ. ಬೌದ್ಧಮತಕ್ಕೆ ಸಂಬಂಧಿಸಿದ ಕೆಲವೇ ಕೆಲವು ಶಿಲ್ಪಗಳಿವೆ. ನಾನು ನೋಡುತ್ತಾ ಇರುವಾಗ ಮಗಳು ಸರಿತಾ ಮತ್ತು ಹೆಗ್ಗಡೆಯವರು ಒಳಬಂದು ಇಲ್ಲಿನ ವೈವಿಧ್ಯಮಯ ಶಿಲ್ಪಕಲೆಯನ್ನು ನೋಡಿ ಸಂತಸಪಟ್ಟರು.

ವಸ್ತು ಪ್ರದರ್ಶನಾಲಯದ ಹೊರಗೆ ಅದೇ ಪ್ರಾಕಾರದಲ್ಲಿ ಇತರ ಮರಗಳಂತೆ ರಸ್ತೆಯ ದಿಕ್ಕಿನಲ್ಲಿ ಒಂದು ಅರಳಿ ಮರ ಇದೆ. ಈ ಮರಕ್ಕೆ ಸಂಜೆ ಸುಮಾರು ಐದರಿಂದ ಆರು ಗಂಟೆ ಸಮಯಕ್ಕೆ ಗಿಳಿವಿಂಡುಗಳ ಗುಂಪು ದಶ ದಿಕ್ಕುಗಳಿಂದಲೂ ಬರುತ್ತವೆ. ಗಿಳಿಗಳು ಈ ಮರದಲ್ಲಿ ಕುಳಿತು ರಾತ್ರಿ ಕಳೆಯುತ್ತವೆ. ಸೂರ್ಯಾಸ್ತದಲ್ಲಿ ಗಿಳಿವಿಂಡುಗಳು ವಿರಮಿಸಲು ಬರುವಾಗಿನ ದೃಶ್ಯವನ್ನು ನೋಡಿ ಆನಂದಗೊಂಡೆವು. ಖಜುರಾಹುವಿನ ಮ್ಯೂಸಿಯಮ್ ಕಾಂಪೌಂಡ್ ಒಳಗೆ ಇರುವ ಈ ಮರದಡಿಯ ಪರಿಸರ ಸುಣ್ಣ ಹಚ್ಚಿದಂತೆ ಇವುಗಳ ಹಿಕ್ಕೆಯಿಂದ ಬೆಳ್ಳಗಾಗಿದೆ.

ಮರುದಿನ ರಾತ್ರಿ ನಮ್ಮ ಪ್ರಯಾಣ ರೈಲಿನಲ್ಲಿ ದಿಲ್ಲಿಗೆ. ಹೀಗಾಗಿ ಬೆಳಿಗ್ಗೆ ನಾವು ಪನ್ನಾ ರಾಷ್ಟ್ರೀಯ ಉದ್ಯಾನವನದ ಸಫಾರಿಗೆ ಹೋಗಲೆಂದು ಸಂಜೆಯೇ ಗಾಡಿ ಗೊತ್ತುಮಾಡಲು ನಿಶ್ಚಯಿಸಿದೆವು. ಪನ್ನಾ ನ್ಯಾಷನಲ್ ಪಾರ್ಕ್ ನೋಡಲು ಒಂದು ಇಡೀ ದಿನ ಸಾಕಾಗದು. ಮಾತ್ರವಲ್ಲ, ಈಗ ಅಲ್ಲಿ ಹುಲಿಗಳೂ ಇಲ್ಲ, ಒಂದೋ ಎರಡೋ ಇವೆಯಂತೆ. ಅದು ನಮಗೆ ಕಾಣಸಿಗುವುದು ಸಂಶಯ. ಅದರ ಬದಲು ಪಾಂಡವ ಫಾಲ್ಸ್ ನೋಡಿ ಬರುತ್ತಾ ಖಜುರಾಹು ರೈಲು ನಿಲ್ದಾಣದಲ್ಲಿ ಬಿಡುತ್ತೇನೆ ಎಂದ. ಖಜುರಾಹುನಿಂದ ಹೋಗುವಾಗ ಲಾಡ್ಜ್‌ಅನ್ನು ತೆರವುಗೊಳಿಸಿದರಾಯಿತು ಎಂದು ಮಲಗಿದೆವು.

**ಪಾಂಡವ ಫಾಲ್ಸ್/ಪಂಚ್‌ಮುರಿ:** ಐತಿಹಾಸಿಕ ಹಾಗೂ ಪೌರಾಣಿಕವಾಗಿ ಪ್ರಸಿದ್ಧವಾಗಿರುವ ಈ ಸ್ಥಳ ನೋಡಲೇಬೇಕಾದುದು. ನಿಜ, ಅದಕ್ಕಿಂತ ಮುಖ್ಯ ವಸುಂಧರೆ ತನ್ನ ಗರ್ಭ ಬಗೆದು ತೋರಿಸುವ ಇಲ್ಲಿಯ ಅದ್ಭುತ ಸೃಷ್ಟಿ! ಪನ್ನಾ ರಾಷ್ಟ್ರೀಯ ಉದ್ಯಾನವನ ಖಜುರಾಹುನಿಂದ ೭೦ ಕಿ.ಮೀ. ದೂರ ಇದೆ. ೩೦ ಕಿ.ಮೀ. ದೂರ ಇರುವ ಪಾಂಡವ ಫಾಲ್ಸ್ ತಲುಪಲು ಈ ಕಾಡಿನ ಮಧ್ಯದಿಂದ ರಾಜ್ಯ ಹೆದ್ದಾರಿ ರಸ್ತೆಯಲ್ಲಿ ಹೋಗಬೇಕಾಗುತ್ತದೆ. ನಾವು ರಾಷ್ಟ್ರೀಯ ಉದ್ಯಾನವನಕ್ಕೆ ಹೋಗಿ ಪ್ರಾಣಿಗಳನ್ನು ನೋಡುವ ಕಾರ್ಯಕ್ರಮ ಹಾಕಿರಲಿಲ್ಲ. ನೇರವಾಗಿ ಪಾಂಡವ ಫಾಲ್ಸ್‌ಗೆ ಹೋದೆವು. ಜನರಿಗೆ, ಗಾಡಿಗೆ ಪ್ರವೇಶ ಧನವನ್ನು ಅರ್ಧ ಕಿ.ಮೀ. ದೂರದಲ್ಲಿಯೇ ಸಂಗ್ರಹಿಸುತ್ತಾರೆ. ನಮ್ಮ ಆಟೋ ದಟ್ಟ ಕಾಡಿನ ಮಧ್ಯಭಾಗದಲ್ಲಿ ಸಂಚರಿಸಿ ಒಂದೆಡೆ ನಿಂತಿತು. ಲಗ್ಗೇಜ್ ಎಲ್ಲವನ್ನೂ ಮೇಲೆ ಬಿಟ್ಟು ಪ್ರಪಾತಕ್ಕೆ ಇಳಿಯಲು ಆತಂಕ. ಆಟೋದವನು, "ನಾನು ಇಲ್ಲೇ ಇರುತ್ತೇನೆ. ನೀವು ನಿಧಾನಕ್ಕೆ ಬನ್ನಿ" ಎಂದ. ನಾವು ಅಚ್ಚುಕಟ್ಟಾದ ಕಾಂಕ್ರೀಟ್ ಮೆಟ್ಟಲುಗಳನ್ನು ಇಳಿಯಹೋದೆವು. ಮೇಲಿನ ಗುಡ್ಡದಲ್ಲಿ ಶುಭ್ರ ನೀರು ಮಳೆಗಾಲ ನಿಂತಕೂಡಲೇ ತುಳುನಾಡಿನ ಗುಡ್ಡದ ಝರಿಗಳಿಂದ ಹರಿವಂತೆ ಹರಿಯುತ್ತಿತ್ತು. ಪಂಚ್‌ಮುರಿಯ ಪಾಂಡವ ಫಾಲ್ಸ್‌ನ ಈ ಮೇಲ್ಭಾಗ ಸ್ಥಳೀಯರಿಗೆ ಪಿಕ್‌ನಿಕ್ ಸ್ಥಳ, ಆದರೆ ಪರಿಸರ ನಿರ್ಮಲವಾಗಿದೆ. ನಾವು ಪ್ರಪಾತದಲ್ಲಿ ಇರುವ ಪಾಂಡವ ಫಾಲ್ಸ್ ನೋಡಲು ಹೆಜ್ಜೆ ಹಾಕಿದೆವು. ಎಡಗಡೆಯ ಸರೋವರದ ಭಾಗಕ್ಕೆ ಕಬ್ಬಿಣದ ರೇಲ್ (ಕಂಬಿಗಳನ್ನು) ಅಳವಡಿಸಿದ್ದಾರೆ. ಕೆಳಭಾಗದಲ್ಲಿ ಇಲ್ಲಿ ಸೆಕ್ಯುರಿಟಿ ಗಾರ್ಡ್ ಇರುವುದರಿಂದ ಪರಿಸರ ಮಾಲಿನ್ಯಕ್ಕೆ ಅವಕಾಶ ಇಲ್ಲ. ಹೆಚ್ಚು ಸಮಯ ಇಲ್ಲಿ ಕಳೆದರೂ ಇಲ್ಲಿಯ ನಿರ್ಮಲ ಪರಿಸರಕ್ಕೆ ಯಾರೂ ಧಕ್ಕೆ ತರುವುದಿಲ್ಲ. ಇಲ್ಲಿಗೆ ಬರುವವರಲ್ಲಿ ಪ್ರವಾಸಿಗರೇ ಅಧಿಕ. ಅಹಿರ್ಗವಾನ್ ಗ್ರಾಮದ ಮೂಲಕ ಹರಿದುಬರುವ ಕೆನ್ ನದಿ ಇಲ್ಲಿ ಸುಮಾರು ೧೦೦ ಮೀಟರ್ ಆಳಕ್ಕೆ ಶಿಲಾ ಪದರುಗಳ ಮೂಲಕ ಹರಿದು ಕೆರೆಗೆ ಜಿಗಿಯುತ್ತದೆ. ಮೇಲೆ ನಿಂತು ನೋಡುವಾಗ ವಸುಂಧರೆ ಹಿಡಿದ ಕನ್ನಡಿಯಂತೆ ಹೊಳೆಯುವ ನೀಲ ನೀರಿನ ಕೆರೆ! ನಾನು ಕಂಬಿಯನ್ನು ಹಿಡಿದೇ ಆತಂಕದಿಂದಲೇ ೧೦೦ ಮೀಟರ್ ಕೆಳಗೆ ಇಳಿದು ಕೆರೆ ದಡಕ್ಕೆ ಬಂದೆ ಎಲ್ಲರೊಂದಿಗೆ. ಕೆರೆಯ ಮುಂಭಾಗದಿಂದ ಹಾದು ಪಾಂಡವರ ಗುಹೆಯ ಬಳಿ ನಿರ್ಮಿಸಿರುವ ಸಿಮೆಂಟ್ ವೇದಿಕೆಯ ಮೇಲೆ ಕುಳಿತಾಗ ಹಾಯೆನಿಸಿತು.

ಕೆರೆಯ ಸುತ್ತಲೂ ಕಬ್ಬಿಣದ ಕಂಬಿಗಳನ್ನು ಅಡ್ಡ ಹಾಕಿದ್ದಾರೆ. ಕೆರೆಯ ನೀರಿನ ಆಳ ೩೦ ಮೀಟರ್. ಈ ನೀಲ ನೀರಿನ ಕೆರೆಯ ದಡದಲ್ಲಿ ನಿಂತು ನೋಡುವಾಗ ಎದೆ ಡವಗುಟ್ಟುತ್ತದೆ. ಮೇಲಿನಿಂದ ನೇರವಾಗಿ ಸಣ್ಣ ಪ್ರಮಾಣದಲ್ಲಿ ನದಿ ನೀರು ಧುಮುಕುತ್ತದೆ, ಇದೇ ಪಾಂಡವ ಫಾಲ್ಸ್! ಇತ್ತೀಚಿನ ವರ್ಷಗಳಲ್ಲಿ ಮಳೆ ಇಲ್ಲವಾದ್ದರಿಂದ ಜಲಪಾತದಲ್ಲಿ ನೀರು ಕಡಿಮೆಯಾಗಿದೆ. ಕೆರೆಯ ನೀರು ಮುಂದಕ್ಕೆ ಹರಿಯುತ್ತದೆ. ಕೆರೆಯಲ್ಲಿ ಬಹಳ ದೊಡ್ಡ ಮೀನುಗಳಿವೆ. ಪ್ರವಾಸಿಗರು ಹಾಕುವ ತಿಂಡಿಗಾಗಿ ಗುಂಪಾಗಿ ಬರುತ್ತವೆ.

ಕೆರೆಯ ಒಂದು ಭಾಗದಲ್ಲಿ ಜಲಪಾತ ಇದ್ದರೆ, ಇನ್ನೊಂದು ಭಾಗದಲ್ಲಿ ಮೆಟ್ಟಲು ಇದೆ. ಮುಂದಿನ ಭಾಗ ತಗ್ಗು ಇದ್ದು ನೀರು ಹರಿದುಹೋಗುತ್ತದೆ. ಈ ನೀರಿಗಿಳಿದು ದಾಟಿ ಎಡಭಾಗದಲ್ಲಿ ಇರುವ ಪಾಂಡವ ಗುಹೆಗಳ ಬಳಿಗೆ ಹೋಗಬಹುದು. ಪಂಚಪಾಂಡವರ ಪಂಚ ಗುಹೆಗಳಿಂದಾಗಿ ಈ ಸ್ಥಳ 'ಪಂಚ್‌ಮುರಿ' ಎಂದು ಹೆಸರು ಪಡೆದಿದೆ. ಇಲ್ಲಿಯ ಬೆಳಕಿರುವ ಗುಹೆಗೆ ದ್ರೌಪದಿ ಕುಟಿ, ಕತ್ತಲೆಯ ಗುಹೆಗೆ ಭೀಮನ ಕುಟಿ ಎಂದು ಹೆಸರು ನೀಡಿದ್ದರೂ ವಾಸ್ತವವಾಗಿ ಈ ಗುಹೆಗಳು ಬೌದ್ಧ ಭಿಕ್ಕುಗಳಿಗೆ ಸೇರಿದುದಾಗಿವೆ ಎನ್ನುವುದು ವಿದ್ವಾಂಸರ ಅಭಿಮತ. ಈ ಗುಹೆಗಳು ೧ನೆಯ ಶತಮಾನಕ್ಕೆ ಸೇರಿವೆ ಎನ್ನುತ್ತಾರೆ. ಅಶೋಕನ ಕಾಲಕ್ಕೆ ಸೇರಿದ್ದಿರಬಹುದಾದ ಒಂದು ಇಟ್ಟಿಗೆಯ ಸ್ತೂಪವೂ ಇದರ ಮೇಲ್ಭಾಗದ ಮಣ್ಣಿನಡಿ ಸೇರಿದೆ ಎನ್ನುತ್ತಾರೆ ಪುರಾತತ್ವಕಾರರು.

ಈ ಭಾಗದಲ್ಲಿ ನಿಂತು ಕತ್ತನ್ನು ಬೆನ್ನಿಗೆ ವಾಲಿಸಿ ನೋಡಿದರೆ ಕಾಣುವುದು ಆಕಾಶವಲ್ಲ, ಪರ್ವತ. ಪರ್ವತದ ಸ್ವಲ್ಪ ಭಾಗ ನಮಗೆ ಕೊಡೆ ಹಿಡಿದಂತೆ ಇದೆ. ಅಲ್ಲಿಂದ ಒಂದೇ ಸಮನೆ ಮಳೆ ಸುರಿದ ಹಾಗೆ ನೀರು ಸುರಿಯುತ್ತದೆ. ಇದು ಪರ್ವತ ಭೂಮಿಯ



ಭವ್ಯನೋಟ

ಅಡಿಯಲ್ಲಿ ಇಳಿದ ಬೇರುಗಳ ಮೂಲಕ ಸುರಿಯುವ ನೀರು. ಈ ನೀರು ಸರ್ವಕಾಯಿಲೆಗಳಿಗೆ ದಿವ್ಯೌಷಧ ಎಂದು ಇಲ್ಲಿಯ ಜನ ನಂಬುತ್ತಾರೆ. ಕತ್ತಲಿದ್ದರೂ ಅವು ವಾಸಯೋಗ್ಯ. ಪ್ರಕೃತಿ ನಿರ್ಮಿತ ಗುಹೆಗಳಿಗೆ ಮಾನವನ ಕೈಚಳಕವೂ ಸೇರಿದೆ. ನೆಲಮಟ್ಟದಿಂದ ಮೇಲಿನ ಹಂತದಲ್ಲಿ ಪರ್ವತದ ಇಳಿಜಾರಿನಲ್ಲಿ ಕಟಕಟೆ ನಿರ್ಮಿಸಿ ಮೇಲಿನ ಗುಹೆಗಳಿಗೆ ಹೋಗಲು ವ್ಯವಸ್ಥೆ ಕಲ್ಪಿಸಿದ್ದಾರೆ. ಮೇಲಿನಿಂದ ಬೀಳುವ ನೀರಿನ ಧಾರೆಯಲ್ಲಿ ಒದ್ದೆಯಾಗುತ್ತಾ ಜಾರದಂತೆ ಕಾಲೂರಿ ಹೋಗಬೇಕು. ಎಷ್ಟೇ ಜಾಗ್ರತೆ ವಹಿಸಿದರೂ ನನ್ನ ಕಾಲಿನ ಜೋಡು ಜಾರಿತು. ನಾನು ದೊಪ್ಪನೆ ಬಿದ್ದರೂ ಸಾವರಿಸಿದೆ. ಪ್ರವಾಸಿಗರೆಲ್ಲರೂ ಬೆಚ್ಚಿದರು. ಮೇಲಿನ ಭಾಗದಲ್ಲಿ ಪರ್ವತದ ಅಡಿಯಲ್ಲಿ ಸ್ಥಾನಪಲ್ಲಟವಾದ ಪಾಣಿ ಪೀಠದ ಶಿವಲಿಂಗ ಹಾಗೂ ಎರಡು ನಂದಿ ಶಿಲ್ಪಗಳಿವೆ. ಅನೇಕ ಶಿಲ್ಪಗಳನ್ನು ಬಿಡಿ ಬಿಡಿ ಶಿಲಾ ಫಲಕಗಳ ಮೇಲೆ ಕೆತ್ತಲಾಗಿದೆ. ಅವುಗಳಲ್ಲಿ ಒಂದರಲ್ಲಿ ಶಿವಪೂಜೆ ಮಾಡುವ ದೃಶ್ಯ ಇದೆ. ಗಂಡು, ಹೆಣ್ಣಿನ ಶಿಲ್ಪಗಳು ಒಂದೇ ಫಲಕದಲ್ಲಿ ಇವೆ. ಪುರುಷ ಶಿಲ್ಪದ ಕೈಯಲ್ಲಿ ದಂಡ ಇದ್ದು, ಸ್ತ್ರೀ ಶಿಲ್ಪದ ಬಲಗಾಲ ಬಳಿ ಜಿಂಕೆಯನ್ನು ಹೋಲುವ ಪ್ರಾಣಿ ಇದೆ. ಹೆಣ್ಣಿನ ಎಡದ ಕೈಯಲ್ಲಿ ತಾವರೆಯ ಮೊಗ್ಗು ಇದೆ. ಇವು ತಾಂತ್ರಿಕರ ಉಪಾಸನಾ ದೇವತೆಗಳು ಇರಬಹುದೇ ಎಂಬ ಸಂದೇಹ ಉಂಟಾಗುತ್ತದೆ. ಇಲ್ಲಿಗೂ ಕಾಡುಪ್ರಾಣಿಗಳು ಬರುತ್ತವೆ. ಕೆರೆಯ ದಡದಲ್ಲಿ ಇರುವ ಮರದ ಮೇಲೆ ಕರಡಿಗಳು ಕೈಯಿಂದ ಪರಚಿದ ಗುರುತುಗಳು ಮರಕ್ಕೆ ಆದ ಗಾಯಗಳಂತೆ ಇವೆ. ಇಲ್ಲಿ ಸುಮಾರು ಹೊತ್ತು ಕಳೆದು ಊಟಕ್ಕಾಗಿ ಪನ್ನಾ ಜಂಗಲ್ ರೆಸಾರ್ಟ್‌ಗೆ ಹೋದೆವು. ಇಲ್ಲಿಂದ ಜಂಗಲ್ ರೆಸಾರ್ಟ್‌ಗೆ ಸುಮಾರು ಐದು ಕಿ.ಮೀ. ಕಾಡಿನ ಒಳಗೆ ಹೋಗಬೇಕು (ಖಜುರಾಹುನಿಂದ ೨೭ ಕಿ.ಮೀ.). ಅಲ್ಲಿಗೆ ಹೋದಾಗ ಪನ್ನಾ ರಾಷ್ಟ್ರೀಯ ಉದ್ಯಾನವನದ ನಿವೃತ್ತ ಅಧಿಕಾರಿ ಶ್ರೀ ಶುಕ್ಲ ಅವರನ್ನು ಭೇಟಿಯಾದೆವು. ಹೆಗ್ಗಡೆಯವರು ನನ್ನನ್ನು ಲೇಖಕಿ ಎಂದು ಪರಿಚಯಿಸಿದರು. ಮಾತನಾಡುತ್ತಾ ಕಾಡಿನ ಸಫಾರಿಗೆ ಹೋಗಿಬಂದಿರಾ ಎಂದರು. ಅಲ್ಲಿ ಹುಲಿಗಳು ಇಲ್ಲವಂತಲ್ಲ ಎಂದಾಗ, ''ಯಾರು ಹಾಗಂದವರು ? ೫೩ ಹುಲಿಗಳಿವೆ. ಅಲ್ಲದೆ ಚೀತಾ, ನಾಲ್ಕು ಕೊಂಬಿನ ಎರಳೆ ಸಾಂಬಾರ, ಮತ್ತು ಇನ್ನಿತರ ೩೦೦ ಪ್ರಾಣಿ ವರ್ಗಗಳಿವೆ'' ಎಂದಾಗ ನಾವು ಬೆಪ್ಪಾದೆವು. ಬಹುಶಃ ಸಫಾರಿ ಹೋಗಿದ್ದರೆ ನೋಡಬಹುದಿತ್ತೇನೊ.

ಪನ್ನಾ ಕಾಡಿನ ಈ ಹೋಟೆಲನ್ನು ಎತ್ತರದ ಮರಗಳ ಮೇಲೆ ನೆಲದಿಂದ ಸುಮಾರು ೧೫ ಅಡಿ ಎತ್ತರದಲ್ಲಿ ನಿರ್ಮಿಸಲಾಗಿದೆ. ಪ್ರಾಣಿಗಳಿಂದ ಮತ್ತು ಕೆನ್ ನದಿಯಲ್ಲಿ ಬರುವ ಪ್ರವಾಹದಿಂದ ರಕ್ಷಣೆ ಪಡೆಯಲು ಈ ಎತ್ತರದ ವ್ಯವಸ್ಥೆ. ಕೆನ್ ನದಿಯ ದಂಡೆಯ ಮೇಲೆ ಈ ರೆಸಾರ್ಟ್ ಇದೆ. ಇಲ್ಲಿ ರಾತ್ರಿ ತಂಗಲು ಕೋಣೆಗಳೂ ಪುಟ್ಟ ಪುಟ್ಟ ಗುಡಿಸಲುಗಳೂ ಇವೆ. ರಾತ್ರಿ ಇಲ್ಲಿಯೇ ಉಳಿದು ಬೇಗನೆ ಸಫಾರಿಗೆ ಎದ್ದುಹೋಗಬಹುದು. ಪನ್ನಾ ಕಾಡಿನಿಂದ ಹೊರಬಂದು ನೇರವಾಗಿ ಖಜುರಾಹು ರೈಲು ನಿಲ್ದಾಣ ತಲುಪಿದೆವು. ಪುಟ್ಟ, ಅಚ್ಚುಕಟ್ಟಾದ ರೈಲು ನಿಲ್ದಾಣ. ಇಲ್ಲಿ ರೈಲು ನಿಲ್ದಾಣ ಹೊಸದಾಗಿ ನಿರ್ಮಾಣವಾಗಿದೆ. ಮೊದಲು ಖಜುರಾಹುಗೆ ರೈಲು ಬರುತ್ತಿರಲಿಲ್ಲ. ಪಕ್ಕದ ಹಳ್ಳಿಯ ನಿಲ್ದಾಣದಲ್ಲಿ ಇಳಿದು ಬಸ್ಸಿನಲ್ಲಿಯೋ ಟ್ಯಾಕ್ಸಿಯಲ್ಲಿಯೋ ಬರಬೇಕಿತ್ತು.

ಖಜುರಾಹು ರೈಲು ನಿಲ್ದಾಣ ಇತ್ತೀಚೆಗೆ ನಿರ್ಮಾಣವಾದುದರಿಂದ ಇಲ್ಲಿ ಇನ್ನೂ ಕಾಫಿ, ತಿಂಡಿ, ಊಟಕ್ಕೆ ಯಾವ ವ್ಯವಸ್ಥೆಯೂ ಆಗಿಲ್ಲ. ಪ್ರಯಾಣಿಕರೆಲ್ಲರಿಗೂ ರಾತ್ರಿಯ ಊಟದ ಚಿಂತೆ. ನಾವು ರೈಲು ಹತ್ತಿದಾಗ ವಿಚಾರಸಂಕಿರಣಕ್ಕೆ ಹೋಗಿದ್ದ ಪಶುವೈದ್ಯರ ತಂಡವೊಂದು ನಮ್ಮೊಂದಿಗೆ ಇತ್ತು. ಅವರಿಗೂ ಊಟದ್ದೇ ಚಿಂತೆ. ಮಗಳು ಸರಿತಾ ಎಳೆಯ ಹುಡುಗಿಯ ರೀತಿ ಊಟಕ್ಕೆ ಬಡಬಡಿಸಿದಳು. ಸಮಯಕ್ಕೆ ಸರಿಯಾಗಿ ರೈಲು ಹೊರಟಾಗ ಇನ್ನೂ ಆತಂಕ. ಮುಂದೆ ಯಾವ ನಿಲ್ದಾಣದಲ್ಲಿಯೂ ಊಟದ ವ್ಯವಸ್ಥೆ ಇರದು ಎಂದು ತಿಳಿಯಿತು. ಸ್ವಲ್ಪ ದೂರ ಹೋಗಿ ರೈಲು ನಿಂತಿತು. ಟಿ.ಟಿ. ಟಿಕೆಟ್ ಪರಿಶೀಲನೆ ಮಾಡುವಾಗ ಸರಿತಾಳ ಚಡಪಡಿಕೆ ಕಂಡಿದ್ದರು. ಅಷ್ಟರಲ್ಲಿ ಆತ ನಮ್ಮಲ್ಲಿಗೆ ಬಂದು, ''ಇಂಜಿನ್ ಬದಲಾಯಿಸಲು ಸಮಯ ಇದೆ. ಹೊರಗೆ ಗಾಡಿಯವರು ಊಟ ಮಾರುತ್ತಾರೆ. ಬನ್ನಿ ನಮ್ಮೊಂದಿಗೆ'', ಎಂದರು. ಸರಿತಾ, ಅವಳ ತಂದೆ ಹಾಗೂ ರೈಲಿನ ವೈದ್ಯ ತಂಡ – ಹೀಗೆ ಎಲ್ಲರೂ, ನಮ್ಮ ಬೋಗಿಯಲ್ಲಿ ನನ್ನನ್ನು ಕಾವಲು ಇರಿಸಿ ಊಟ ತರಲು ದೌಡಾಯಿಸಿದರು. ಅವರೆಲ್ಲರೂ ಆಚೆ ಹೋಗಿ ಐದು ನಿಮಿಷದ ಒಳಗೆ ರೈಲು ಹೊರಟಿತು. ''೨೦ ನಿಮಿಷ ಇಲ್ಲಿ ಇರುತ್ತದೆ'' ಎಂದಿದ್ರು ಟಿ.ಟಿ. ನಾನು, ಚೈನು ಎಳೆಯುವುದೇ ಎಂದು ಆತಂಕಗೊಂಡೆ. ಅಲ್ಲಿದ್ದವರನ್ನು ವಿಚಾರಿಸಿದಾಗ ಒಬ್ಬ ಸಹಪ್ರಯಾಣಿಕ ''ಇಲ್ಲ, ಸ್ವಲ್ಪ ದೂರ ಚಲಿಸಿ ರೈಲು ನಿಲ್ಲುತ್ತದೆ'' ಎಂದರು. ಅವರು ಹೇಳಿದಂತೆ ರೈಲು ನಿಂತಿತು. ರೈಲು ನಿಂತಿದ್ದು ನಡುಮಧ್ಯ ಕಂಬಿಗಳಲ್ಲಂತೆ. ಮಗಳು ಸರಿತಾ ಸೇರಿ, ಎಲ್ಲರೂ ರೈಲ್ವೇ ವೇದಿಕೆಯಿಂದ ಕೆಳಗೆ ಹಾರಿ ಮತ್ತೆ ರೈಲು ಏರಿ ಒಳಬಂದರು. ವೈದ್ಯರ ತಂಡದವರು ಪಂಚತಾರಾ ಹೋಟೆಲಿನ ಊಟದ ಪೊಟ್ಟಣಗಳನ್ನು ತಂದರು. ಇದೆಲ್ಲಿ ದೊರಕಿತು ನಿಮಗೆ ಎಂದು ಕೇಳಿದಾಗ ತಮ್ಮ ಮಿತ್ರನನ್ನು ತೋರಿಸಿ, ''ಈತ ಊಟ ತರಲು ದೌಡಾಯಿಸುತ್ತಿದ್ದಾಗ ಪರಿಚಯದ ರಾಜಕಾರಣಿಯೊಬ್ಬರು ಎದುರಾದರಂತೆ. ಊಟಕ್ಕಾಗಿ ಹೋಗುವುದು, ಎಂದು ತಿಳಿದಾಗ ತಮ್ಮಲ್ಲಿ ಇದ್ದ ಹೆಚ್ಚಿನ ಪೊಟ್ಟಣಗಳನ್ನು ಇವರಿಗೆ ಒತ್ತಾಯಪೂರ್ವಕವಾಗಿ ನೀಡಿದರಂತೆ'', ಎಂದರು. ಅದರಲ್ಲಿ ಒಂದು ಪೊಟ್ಟಣವನ್ನು ನಮಗೂ ನೀಡಿದರು ಒತ್ತಾಯದಿಂದ. ರಾಜಕಾರಣಿಗಳೇ ಹಾಗೆ, ಅವರಿಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಸಂಗ್ರಹಿಸುವುದಿಲ್ಲವಲ್ಲ ಎಂದುಕೊಂಡೆ. ನಮ್ಮ ಮಗಳಿಗೆ ಮತ್ತು ಅವಳ ತಂದೆಗೆ ಊಟ ಕೊಡಿಸಲು ಕರೆದೊಯ್ದಿದ್ದ ಟಿ.ಟಿ. ಸ್ಟೇಶನ್‌ನ ಹೊರಗೆ ಗಾಡಿಯಲ್ಲಿ ಊಟ ಮಾರುವ ಕಡೆ ಕರೆದೊಯ್ದರು. ಅಲ್ಲಿ ಜನರ ಗುಂಪು ಊಟಕ್ಕಾಗಿ ಕಾದಿತ್ತು. ಟಿ.ಟಿ.ಯ ಪರಿಚಯ ಗಾಡಿಯವನಿಗೆ ಇತ್ತು. ಆದುದರಿಂದ ಟಿ.ಟಿ.ಯೇ ಎಲ್ಲರಿಗಿಂತ ಮೊದಲು ಸರಿತಾಳಿಗೆ ಊಟ ಕೊಡಿಸಿ ಹೊರಟುಹೋದ. ಈ ವಿಷಯವನ್ನು ಮರಳಿ ಬಂದ ಸರಿತಾ ಅದೇನೋ ಸಾಧನೆ ಮಾಡಿದಂತೆ ವಿವರಿಸಿದಳು. ''ಇದೆಲ್ಲಾ ನನಗಾಗಿ ಅಮ್ಮಾ. ನಿಮ್ಮಂತಹ ಮುದುಕರನ್ನು ಯಾರು ಕೇಳುತ್ತಿದ್ದರು'' ಎಂದಳಾಕೆ. ವೈದ್ಯರ ತಂಡ ಹಾಗೂ ಇತರರು ಸೇರಿ ಸುಮಾರು ಹೊತ್ತು ಭಾರತದ ರಾಜಕಾರಣಿಗಳ, ರಾಜಕೀಯದ ವಿದ್ಯಮಾನಗಳ ಬಗ್ಗೆ ಮಾತನಾಡಿದೆವು.

**ಡಾ|| ಇಂದಿರಾ ಹೆಗ್ಗಡೆ**
ನಂ. ೬, ಕೃಷ್ಣಾ ರೆಸಿಡೆನ್ಸಿ, ೪ನೇ ಅಡ್ಡರಸ್ತೆ, ಅಮರಜ್ಯೋತಿನಗರ,
ವಿಜಯನಗರ, ಬೆಂಗಳೂರು - ೫೬೦ ೦೪೦

---

*(೫೧ನೇ ಪುಟದಿಂದ)*

ತಮ್ಮ ವಿದ್ಯಾರ್ಥಿ ದಿನಗಳಿಂದಲೂ ಕನ್ನಡ ಭಾವಗೀತೆಗಳನ್ನು ಹಾಡಿಕೊಂಡು ಬಂದಿರುವ ಸರ್ಫ್ರಾಜ್ ಸುಗಮ ಸಂಗೀತದ ನೆಲೆ-ಬೆಲೆಗಳನ್ನು ಚೆನ್ನಾಗಿ ಅರಿತುಕೊಂಡಿರುವುದರಿಂದ ಅವರ ಅಧ್ಯಯನವು ಒಂದು ವಿಶಿಷ್ಟವಾದ ತಾತ್ವಿಕ ಚೌಕಟ್ಟನ್ನು ಪಡೆದುಕೊಳ್ಳಲು ಸಾಧ್ಯವಾಗಿದೆ. ಸುಗಮ ಸಂಗೀತ ಪದ್ಧತಿ, ಪರಂಪರೆ, ಗಾಯನದ ಸೃಜನಶೀಲತೆ ಇವುಗಳ ಬಗ್ಗೆ ಹದಿನಾರು ಪ್ರಶ್ನೆಗಳನ್ನಿರಿಸಿಕೊಂಡು ಸಾಹಿತಿಗಳ ಮತ್ತು ಕಲಾವಿದರ ಸಂದರ್ಶನ ಮಾಡಿದ್ದಾರೆ. ಇದು ಈ ಕ್ಷೇತ್ರದ ಬಗ್ಗೆ ಚರ್ಚಿಸಲು ಸಹಕಾರಿಯಾಗಿದೆ. ಸುಗಮ ಸಂಗೀತ ಕಲಾವಿದರ ವಿಳಾಸಗಳು, ಕಲಾವಿದರ ನೂರ ಎಪ್ಪತ್ತಕ್ಕೂ ಹೆಚ್ಚು ಪ್ರಸಿದ್ಧ ಧ್ವನಿ ಸುರುಳಿಗಳು, ಸುಗಮ ಸಂಗೀತ ಇಲಾಖೆ ಮತ್ತು ಸಂಸ್ಥೆಗಳ ಕುರಿತ ವಿವರವಾದ ಮಾಹಿತಿಯನ್ನು ಅನುಬಂಧದಲ್ಲಿ ನೀಡಲಾಗಿದೆ. ಸುಗಮ ಸಂಗೀತ ಕ್ಷೇತ್ರ ಪ್ರವೇಶ ಮಾಡುವವರಿಗೆ ಇದು ಹೆಚ್ಚು ಪ್ರಯೋಜನಕಾರಿಯಾಗಿದೆ.

ಒಟ್ಟಾರೆಯಾಗಿ ಸುಗಮ ಸಂಗೀತಕ್ಕೆ ಅಗತ್ಯವಿರುವ ಒಂದು ಶಾಸ್ತ್ರಗ್ರಂಥವಾಗಿ ಈ ಕೃತಿ ಮೂಡಿಬಂದಿದೆ. ಸರಳ ಉದಾಹರಣೆಗಳ ಮೂಲಕ ಲೇಖಕರು ತಮ್ಮ ವಾದವನ್ನು ಮಂಡಿಸಿರುವುದರಿಂದ ಸುಗಮ ಸಂಗೀತದ ಕುರಿತಾಗಿ ಆಸಕ್ತಿಯಿರುವ ಯಾರೇ ಆಗಲಿ ಈ ಕೃತಿಯನ್ನು ಓದಿ ಅರ್ಥೈಸಿಕೊಳ್ಳಬಹುದು. ಸುಗಮ ಸಂಗೀತವು ಒಂದರ್ಥದಲ್ಲಿ ಕನ್ನಡ ಕಾವ್ಯದ ಒಂದು ವಿಮರ್ಶಾ ಮಾದರಿಯೂ ಹೌದು. ಆದರೆ ಅದು ಸಂಗೀತದ ಮೂಲಕ ಮಾತನಾಡುತ್ತದೆ ಎನ್ನುತ್ತಾರೆ ಲೇಖಕರು. ಸುಗಮ ಸಂಗೀತದ ಬಗ್ಗೆ ಸಮಗ್ರ ಮಾಹಿತಿ ಒದಗಿಸುವಲ್ಲಿ ಈ ಕೃತಿ ಸಫಲವಾಗಿದೆ. ಕನ್ನಡ ಕಾವ್ಯಾಸಕ್ತರು, ಸುಗಮ ಸಂಗೀತ ಕಲಾವಿದರು ಈ ಕೃತಿಯನ್ನು ಅಗತ್ಯವಾಗಿ ಓದಬೇಕಿದೆ. ಕಾವ್ಯ ಗಾಯನವನ್ನು ವಿರೋಧಿಸುವವರೂ ಕೂಡ ಒಮ್ಮೆ ಈ ಕೃತಿಯನ್ನು ಓದಬಹುದು. ಈ ಕ್ಷೇತ್ರದಲ್ಲಿ ಗಂಭೀರ ಅಧ್ಯಯನ ಮಾಡಿ ಇಂತಹ ಉದ್ಗ್ರಂಥ ನೀಡಿರುವ ಲೇಖಕ ಸರ್ಫ್ರಾಜ್ ಚಂದ್ರಗುತ್ತಿ ಹಾಗೂ ಕೃತಿಯನ್ನು ಪ್ರಕಟಿಸಿದ ಸಹನಾ ಪ್ರಕಾಶನದ ಮಾಲೀಕರು ಇಬ್ಬರೂ ಅಭಿನಂದನಾರ್ಹರು.

**ಡಾ|| ಎ. ರಘುರಾಂ**
ಮುಖ್ಯಸ್ಥರು ಹಾಗೂ ಆಯ್ಕೆ ಶ್ರೇಣಿ ಉಪನ್ಯಾಸಕರು, ಕನ್ನಡ ವಿಭಾಗ,
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಗುಬ್ಬಿ – ೫೭೨ ೨೧೬

**ಡಾ|| ಜಿ. ಎಸ್. ಮಲ್ಲಿಕಾರ್ಜುನಪ್ಪ**

# ಕಾರ್ಪೊರೆಟ್ ಜಗತ್ತಿನ ಸಂದರ್ಭದಲ್ಲಿ ಬಸವಣ್ಣನ ಕಲ್ಯಾಣ ರಾಜ್ಯದ ನೆನಪು



ಬಸವಣ್ಣ ಮತ್ತು ಶರಣ ಚಳುವಳಿಯ ಪ್ರೇರಣೆಗಳು ಸ್ವಚ್ಛ ಸಮಾಜದ, ಅಂದರೆ ಶೋಷಣೆ ಮುಕ್ತ ಕಲ್ಯಾಣ ರಾಜ್ಯದ ಆಶಯಗಳು ನನಸಾಗುವವರೆಗೆ ಬೇಕೇಬೇಕು. ಏಣಿ-ಶ್ರೇಣಿ ಪ್ರಚೋದಿತ ಮೇಲು-ಕೀಳಿನ್ನದ ಸಾಮಾಜಿಕ ವಿನ್ಯಾಸ; ವಿಕೇಂದ್ರೀಕೃತ ಅರ್ಥವ್ಯವಸ್ಥೆ; ದುಷ್ಟ ಕೂಟಗಳಿಗೆ ಮಣಿಯದೆ ಪ್ರಜಾಸತ್ತಾತ್ಮಕ ನೆಲೆಯಲ್ಲಿ ಕಾರ್ಯ ನಿರ್ವಹಿಸುವ ರಾಜ್ಯಾಡಳಿತ ಅಥವಾ ರಾಜಕೀಯ ಪ್ರಭುತ್ವ; ನಿಷ್ಠುರವಾದರೂ ನಿಷ್ಪಕ್ಷಪಾತವಾಗಿ ನ್ಯಾಯ ನೀಡುವ ನ್ಯಾಯಾಂಗ ವ್ಯವಸ್ಥೆ; ಸರ್ವೋದಯವೇ ಅಭಿವೃದ್ಧಿ ಎಂದು ನಂಬಿ, ಅದರ ಜಾರಿಗಾಗಿ ಅಧಿಕಾರ ಹೊಂದಬಯಸುವ ಜನಸಂಘಟನೆಗಳೇ ಸುಖೀ ರಾಜ್ಯದ ಲಕ್ಷಣಗಳು. ಲಾಭ ಗಳಿಸುವುದನ್ನೇ ಮೂಲ ಉದ್ದೇಶವಾಗಿಸಿಕೊಂಡ ಕಾರ್ಪೊರೆಟ್ ಸಂಸ್ಥೆಗಳ ಪ್ರಭಾವಕ್ಕೆ ಮಣಿಯದೆ ಮಾರುಕಟ್ಟೆ ಕೇಂದ್ರಿತ ಚಟುವಟಿಕೆಗಳನ್ನು ಮಾನವೀಯಗೊಳಿಸಲು ಇಂದಿನ ಸರ್ಕಾರಗಳು ಬದ್ಧವಾಗಬೇಕು.

ಹನ್ನೆರಡನೇ ಶತಮಾನದ ಅನುಭವ ಮಂಟಪವೆಂಬ ಶರಣ ಸಂಸತ್ತಿನ ಸಭಾಪತಿ, ಆಧ್ಯಾತ್ಮ ನಿಧಿ ಅಲ್ಲಮಪ್ರಭು ಕಲ್ಯಾಣ ರಾಜ್ಯ ಕಟ್ಟುವ ಬಸವಣ್ಣನ ಕಾರ್ಯಕ್ಷಮತೆಯನ್ನು ಮೆಚ್ಚಿ, '' 'ಬ' ಎಂಬಲ್ಲಿ ಎನ್ನ ಭವ ಹರಿಯಿತ್ತು, 'ಸ' ಎಂಬಲ್ಲಿ ಸರ್ವಜ್ಞನಾದೆನು. 'ವ' ಎಂಬಲ್ಲಿ ವಚಸುವರೆ ಚೈತನ್ಯಾತ್ಮಕನಾದೆನು, ಇಂತೀ ಬಸವಾಕ್ಷರತ್ರಯ ಎನ್ನ ಸರ್ವಾಂಗದಲ್ಲಿ ತೊಳಗಿ ಬೆಳಗುವುದ ಕಂಡು ಆನು, ನೀನು ಬಸವಾ ಬಸವಾ ಎನುತಿರ್ದೆನಯ್ಯಾ ಗುಹೇಶ್ವರಾ!'' ಎಂದು ಪ್ರಶಂಸಿಸುತ್ತಾನೆ. ಇದಕ್ಕೆ ಕಾರಣ, ಸಾಮಾನ್ಯ ವ್ಯಕ್ತಿಯ ನೆಲೆಯಿಂದ ಬಂದ ಬಸವಣ್ಣ ಸನಾತನ ವ್ಯವಸ್ಥೆ ಸೃಷ್ಟಿಸಿದ ಶೋಷಣೆಯ ಕೊಳೆ ತೊಳೆಯಲು ತನ್ನಂತೆ ಪ್ರೇರಣೆ ಹೊಂದಿದ ಪಡೆಯನ್ನು ಕಟ್ಟಿ, ನೋವು ಅವಮಾನಗಳನ್ನು ಸಹಿಸಿ, ಮನುಕುಲದ ಇತಿಹಾಸವನ್ನು ಶೃಂಗರಿಸುವಂಥ ಸಂಪೂರ್ಣ ಸಾಮಾಜಿಕ ಕ್ರಾಂತಿಯನ್ನು ತಂದ ಆತನ ಸಾಧನೆ.

ಇತಿಹಾಸದ ಘಟನೆಯೊಂದು ವರ್ತಮಾನದಲ್ಲಿ ಪ್ರಸ್ತುತವಾಗುವುದು ಅದರ ಚಿಕಿತ್ಸಕ ಸ್ವರೂಪದಿಂದಾಗಿಯೇ. ೧೨ನೇ ಶತಮಾನದಲ್ಲಿ ಶರಣ ಚಳುವಳಿ ಆರಂಭವಾಗುವ ಪೂರ್ವದಲ್ಲಿ ಜಾರಿಯಲ್ಲಿದ್ದ ಸಾಮಾಜಿಕ ಅವಗುಣಗಳು, ಅರಾಜಕತೆ, ಅಶಾಂತಿ ೨೧ನೇ ಶತಮಾನದ ಇವತ್ತಿನ ಕಾರ್ಪೊರೆಟ್ ಜಗತ್ತಿನ ಆಡಳಿತ ವ್ಯವಸ್ಥೆಯಲ್ಲಿ ತಲೆ ಎತ್ತುತ್ತಿವೆ. ಮನುಷ್ಯ ಸಂಬಂಧಗಳು ಮಾರುಕಟ್ಟೆ ನಿಯಮಗಳಿಂದ ನಿರ್ದೇಶಿಸಲ್ಪಡುವ ರೀತಿಯಲ್ಲಿ ವಾಣಿಜ್ಯೀಕರಣಗೊಳ್ಳುತ್ತಿವೆ. ಪರಸ್ಪರ ಕತ್ತು ಕೊಯ್ಯುವ ಪೈಪೋಟಿ ಎಲ್ಲೆಲ್ಲೂ ಏರ್ಪಡುತ್ತಿದೆ. ಅಧ್ಯಾತ್ಮವನ್ನು ಹಣ ಗಳಿಸುವ ಮಾರ್ಗವನ್ನಾಗಿ ಮಾಡಿಕೊಳ್ಳಲಾಗುತ್ತಿದೆ. ಧರ್ಮ, ದೇವರುಗಳ ಹೆಸರಿನಲ್ಲಿ ಜನಸಮುದಾಯಗಳ ಬದುಕನ್ನು ಭಯದ ಕೂಪಕ್ಕೆ ತಳ್ಳಲಾಗುತ್ತಿದೆ. ದುರ್ಬೀನು ಹಾಕಿ ಹುಡುಕಿದರೂ ಸಂಪೂರ್ಣ ಸಾಮಾಜಿಕ ಕಾಳಜಿ ಇರುವ ಜನನಾಯಕರು ಕಾಣಸಿಗುತ್ತಿಲ್ಲ. ಅಪರಿಮಿತ ಆಸ್ತಿ, ಅಧಿಕಾರಗಳನ್ನು ಹೊಂದುವ ಹಂಬಲ ಹೆಚ್ಚು ಕಡಿಮೆ ಒಂದಲ್ಲ ಒಂದು ರೀತಿಯಲ್ಲಿ ಎಲ್ಲರಲ್ಲೂ ಇದೆ. ಹಾಗಾಗಿ, ಸಾರ್ವಜನಿಕ ಬದುಕಿನಲ್ಲಿ ಭ್ರಷ್ಟಾಚಾರ ತೀರಾ ಸಾಮಾನ್ಯವಾಗಿದೆ. ಶೋಷಕ

ವರ್ಗಗಳು ಸರ್ಕಾರಗಳನ್ನು ನಿಯಂತ್ರಿಸುವ ಮಟ್ಟಕ್ಕೆ ಬೆಳೆಯುತ್ತಿವೆ. ಸಾರ್ವಜನಿಕ ಬದುಕನ್ನು ಸ್ವಚ್ಛವಾಗಿಡುವ ಮತ್ತು ಪ್ರಭುತ್ವಗಳ ಉದ್ಧಟತನವನ್ನು ಹದ್ದುಬಸ್ತಿನಲ್ಲಿಡಬಹುದಾದ ಸಾಮಾಜಿಕ ಚಳವಳಿಗಳು ಹುಟ್ಟುತ್ತಲೇ ಇಲ್ಲ.

ಸ್ವಂತ ಶಕ್ತಿಯ ಮೇಲೆ ವಿಶ್ವಾಸ ಕಳೆದುಕೊಂಡ ಜನ ಬೇರು ಬುನಾದಿಗಳಿಲ್ಲದ ಜ್ಯೋತಿಷಿಗಳ ಹಿಂದೆ ಸುತ್ತುತ್ತಿದ್ದಾರೆ. ಮೂಢನಂಬಿಕೆಗಳು ಮತ್ತು ಅಂಧಶ್ರದ್ಧೆ ಆಧುನಿಕ ಪೋಷಾಕಿನ ವ್ಯಕ್ತಿಗಳೊಳಗೆ ವಿಜೃಂಭಿಸುತ್ತಿವೆ. ಸಾರ್ವಜನಿಕ ಬದುಕನ್ನು ಪ್ರಜಾಸತ್ತಾತ್ಮಕ ರೀತಿಯಲ್ಲಿ ಅಭಿವೃದ್ಧಿಪಡಿಸಬೇಕಾದ ಪ್ರಭುತ್ವಗಳು ನಿಷ್ಕ್ರಿಯವಾಗುತ್ತಿವೆ. ಮಾರುಕಟ್ಟೆ ನಿಯಮಗಳನ್ನು ಸಾರ್ವಜನಿಕ ಆಡಳಿತ ಸೂತ್ರಗಳಂತೆ ಜಾರಿಗೊಳಿಸಲಾಗುತ್ತಿದೆ. ನೈಸರ್ಗಿಕ ಸಂಪತ್ತು ಮತ್ತು ಪರಿಸರ ಅಭಿವೃದ್ಧಿ ಪಟ್ಟಭದ್ರರ ಬದುಕಿನ ಆದಾಯಗಳ ಮೂಲಗಳಾಗುತ್ತಿವೆ. ನೋವುಣ್ಣುವ ಜನರ ಬದುಕಿಗೆ ಮುಲಾಮು ಹಚ್ಚುವ, ಚಳವಳಿಗಳನ್ನು ಹುಟ್ಟುಹಾಕುವ ಶಕ್ತಿ ಇರುವ ಜನ ಮತ್ತು ಸಂಘಟನೆಗಳು ಭ್ರಮೆ ಮತ್ತು ಅಹಂನ ಕೋಣೆಯೊಳಗೆ ಕೊಳೆಯುತ್ತಿವೆ.

ಇಂಥ ವರ್ತಮಾನದ ಸಂದರ್ಭದಲ್ಲಿ ರೋಗ ಬಂದಾಗ ವೈದ್ಯರ ನೆನಪಾಗುವಂತೆ, ಚರಂಡಿ ಕಟ್ಟಿ ನಾರುವಾಗ ಪೌರಕಾರ್ಮಿಕನ ನೆನಪಾಗುವಂತೆ ೧೨ನೇ ಶತಮಾನದ ಬಸವಣ್ಣ; ಶರಣ ಚಳುವಳಿ ಮತ್ತು ಕಲ್ಯಾಣ ರಾಜ್ಯದ ಆಶಯಗಳು ಮತ್ತೆ ಮತ್ತೆ ನಮಗೆ ಪ್ರಸ್ತುತವಾಗುತ್ತವೆ. ಲೋಕದ ಡೊಂಕನ್ನು ತಿದ್ದಬಯಸುವ ನೇತಾರರು, ಜನಾಡಳಿತದ ಚುಕ್ಕಾಣಿ ಹಿಡಿಯ ಬಯಸುವವರು, ತಮ್ಮ ವೈಯಕ್ತಿಕ ಬದುಕಿನಲ್ಲಿ ತನುಮನಗಳನ್ನು ಸಂತೈಸಿಕೊಂಡು ಶುದ್ಧೀಕರಣಗೊಂಡಿರಬೇಕೆಂದ ಬಸವಣ್ಣ; ನುಡಿದಂತೆ ನಡೆದು ಚಳವಳಿಗೆ ಚೈತನ್ಯನಾದ. ತಾನು ಕಟ್ಟಬಯಸಿದ ಕಲ್ಯಾಣ ರಾಜ್ಯದ ಪ್ರಾತಿನಿಧಿಕ ವೇದಿಕೆಯಾದ ಅನುಭವ ಮಂಟಪದ ಶೂನ್ಯಪೀಠಕ್ಕೆ ಅನುಭಾವಿ, ಅವಧೂತ, ಜಂಗಮ ಅಲ್ಲಮಪ್ರಭುವನ್ನು ಪೀಠಾಧಿಪತಿಯನ್ನಾಗಿಸಿದ. ಸ್ವಾತಂತ್ರ್ಯದ ಆಧಾರವಾದ ಸ್ವಾವಲಂಬಿ ಬದುಕನ್ನು ಸಾಧ್ಯವಾಗಿಸಲು ಅಲ್ಲಿನ ಸದಸ್ಯ ಶರಣರಿಗೆ ಅವರವರಿಗೆ ಸಾಧ್ಯವಾಗುವ ಕಸುಬುಗಳಲ್ಲಿ ತೊಡಗುವಂತೆ ಹೇಳುವುದರ ಜೊತೆಗೆ, ಮಾಡುವ ಕೆಲಸವನ್ನು ಸತ್ಯಶುದ್ಧ ಮಾರ್ಗದಲ್ಲಿ ನಿರ್ವಹಿಸುವ 'ಕಾಯಕ' ತತ್ವವನ್ನು ತಿಳಿಸಿದ. ಕಸುಬಿನ ಕಾಯಕದಿಂದ ಬಂದ ಪ್ರತಿಫಲವನ್ನು ಇತರರೊಂದಿಗೆ ಹಂಚಿಕೊಂಡು ಉಣ್ಣುವ 'ದಾಸೋಹ' ವಿಧಾನವನ್ನು ಹೇಳಿಕೊಟ್ಟ. ಅಂದಂದಿನ ಕಾಯಕದ ಸಂಪಾದನೆಯನ್ನು ಅಂದಂದೇ ಅನುಭೋಗಿಸಿ ದಾಸೋಹಗೊಳಿಸಬೇಕಲ್ಲದೆ 'ಇಂದಿಂಗೆ ನಾಳಿಂಗೆ' ಎಂದು ಶೇಖರಿಸಿಡಬಾರದೆಂಬ ಎಚ್ಚರಿಕೆ ನೀಡಿದ. ಹಾಗೊಂದು ವೇಳೆ ಮಾಡಿದರೆ ಸಂಪತ್ತಿನ ಕ್ರೋಢೀಕರಣ ಉಂಟಾಗಿ ಅದರಿಂದಾಗುವ ವಿಪತ್ತಿಗೆ ತಲೆದಂಡ ತೆರಬೇಕಾಗುವುದೆಂದು ಅವರಲ್ಲಿ ಅರಿವು ಮೂಡಿಸಿದ. ಆಸ್ತಿ, ಅಧಿಕಾರದ ಆಸೆ, ದಾಹಗಳಿಂದ ಮುಕ್ತವಾಗಲು ಮತ್ತು ಅಂತರಂಗ ಬಹಿರಂಗಗಳನ್ನು ಸ್ವಚ್ಛವಾಗಿಟ್ಟುಕೊಳ್ಳಲು ಅವಶ್ಯವಾದ ಆಧ್ಯಾತ್ಮಿಕ ಮಾರ್ಗವಾಗಿ ಇಷ್ಟಲಿಂಗ ಆರಾಧನೆಯ ಶಿವಯೋಗ ಮಾರ್ಗವನ್ನು ಅನ್ವೇಷಿಸಿ ಬೋಧಿಸಿದ. ವರ್ಣಭೇದ, ವರ್ಗಭೇದ, ಲಿಂಗಭೇದ ಮತ್ತು ಜಾತಿ ತಾರತಮ್ಯಗಳಂಥ ಶ್ರೇಷ್ಠ- ಕನಿಷ್ಠ ಭಾವಗಳಿಂದ ತಾನೂ ಮುಕ್ತಗೊಂಡ ಮತ್ತು ತನ್ನ ಶರಣ ಸಂಕುಲವನ್ನೂ ಮುಕ್ತಗೊಳಿಸಿದ. ಶರಣತ್ವ ಎಂದರೆ ಎಲ್ಲಾ ರೀತಿಯ ದಾಸ್ಯದಿಂದ ಬಿಡುಗಡೆ ಮಾಡುವುದು ಎನ್ನುವುದನ್ನು ಎಲ್ಲರ ಅನುಭವವನ್ನಾಗಿಸಿದ.




ಇದನ್ನೆಲ್ಲಾ ಆತ ಸಾಧ್ಯವಾಗಿಸಿದುದು ಆತನಿಗಿದ್ದ ಮಂತ್ರಿ ಪದವಿಯಿಂದಲ್ಲ; ಸುರಗಿಯ ಮೊನೆಯಿಂದಲ್ಲ; ಹುಟ್ಟಿನ ಶ್ರೇಷ್ಠತೆಯಿಂದಲ್ಲ; ಗಳಿಸಿದ ಜ್ಞಾನದ ಅಹಂನಿಂದಲ್ಲ; ಬದಲಾಗಿ ಎಲ್ಲರೊಳಗೊಂದಾದ ಸರಳ-ಸಜ್ಜನಿಕೆಯ ಸತ್ಯಮಾರ್ಗದಿಂದ. ತನ್ನ ಪ್ರೀತಿ, ಸದ್ವಿನಯಗಳಿಂದಾಗಿ ಜನರ ಅಜ್ಞಾನವನ್ನೂ, ಅಸತ್ಯದ ಮಾರ್ಗಗಳನ್ನೂ ದೂರವಿಟ್ಟ. ಮಾನವೀಯ ನೆಲೆಯ ಆತನ ಸಂಘಟನಾ ಚಾತುರ್ಯ ಮತ್ತು ಸಂವಹನಾ ಕೌಶಲ್ಯ ಅದ್ವಿತೀಯವಾದುವು. ಆತನಷ್ಟೇ ಅಲ್ಲ, ಆತನ ಎಲ್ಲಾ ಸಮಕಾಲೀನರಲ್ಲೂ ಇಂಥ ಗುಣಗಳು ಬೆಳೆಯುವಂತೆ ಬುನಾದಿ ಹಾಕಿಕೊಟ್ಟ. ''ಎತ್ತೆತ್ತ ನೋಡಿದರತ್ತತ್ತ ಬಸವನೆಂಬ ಬಳ್ಳಿ...'' ಎಂದು ಶರಣರು ಬಸವಣ್ಣನ ಪ್ರಭಾವವನ್ನು ಮುಕ್ತಕಂಠದಿಂದ ಶ್ಲಾಘಿಸಿದುದು ಆತನ ಈ ಪ್ರಭಾವಳಿಯ ಅವಲೋಕನ ಮತ್ತು ಅನುಭವದಿಂದಾಗಿಯೇ. ಆದ್ದರಿಂದ ಅವರ ಅಭಿವ್ಯಕ್ತಿ ಅತ್ಯಂತ ಪ್ರಾಮಾಣಿಕವಾದುದು. ಪರಸ್ಪರ ಮೆಚ್ಚುಗೆಯ ಪ್ರಾಮಾಣಿಕ ಮಾತುಗಳು ಸೌಹಾರ್ದಯುತ ಸಂಬಂಧಗಳನ್ನು ಸೃಷ್ಟಿಸುತ್ತವೆ ಎನ್ನುವುದಕ್ಕೆ ಶರಣರ ನಡುವಿನ ಸಂಬಂಧಗಳೇ ಸಾಕ್ಷಿ. ಇಲ್ಲಿ ಬದಲಾವಣೆ ಅಥವಾ ಕ್ರಾಂತಿ ಎನ್ನುವುದು ಎಲ್ಲಿಂದಲೋ ಧುತ್ತೆಂದು ಎರಗಿಬಂದುದಲ್ಲ. ಘನವಸ್ತುವಿನಲ್ಲಿ ಉಷ್ಣ ಕಣದಿಂದ ಕಣಕ್ಕೆ ಪ್ರವಹಿಸಿ ಇಡೀ ವಸ್ತುವೇ ಕಾಯ್ದು ಕೆಂಪಾಗುವಂತೆ, ಜ್ಯೋತಿ ಮುಟ್ಟಿದ ಬತ್ತಿಯಂತೆ ಅದು ವ್ಯಕ್ತಿಯಿಂದ ವ್ಯಕ್ತಿಗೆ ಪ್ರವಹಿಸಿತು. ಅಷ್ಟೇ ಅಲ್ಲ, ಅವರೆಲ್ಲರ ಅನುಭವಗಳ ಅಭಿವ್ಯಕ್ತಿ ವಚನ ಪ್ರಕಾರದಲ್ಲಿ ದಾಖಲಾಗಿ, ಶತಮಾನಗಳನ್ನು ದಾಟಿ, ಇವತ್ತಿನ ಸಾಹಿತ್ಯವನ್ನು ಸಮೃದ್ಧಗೊಳಿಸಿದೆ. ವಚನ ಸಾಹಿತ್ಯದ ಓದು ನಮ್ಮ ಇಂದಿನ ಸಂವಿಧಾನವನ್ನು ಕಾವ್ಯಾತ್ಮಕವಾಗಿ ವ್ಯಾಖ್ಯಾನಿಸುವಂತಹ ಅನುಭವ ನೀಡಿದರೆ ಆಶ್ಚರ್ಯವೇನಲ್ಲ.

ಕ್ರಾಂತಿ, ಚಳವಳಿಗಳು ಯಾವತ್ತಿಗೂ ಪ್ರಭುತ್ವ ಮತ್ತು ಪಟ್ಟಭದ್ರರ ಸ್ವಾರ್ಥ ಮತ್ತು ಹಿತಾಸಕ್ತಿಗಳ ವಿರುದ್ಧ ಇರುವುದರಿಂದ ಅವುಗಳ ಪ್ರವರ್ತಕರು ಈ ಹಿತಾಸಕ್ತಿಗಳ ಕೆಂಗಣ್ಣಿಗೆ ಗುರಿಯಾಗಲೇಬೇಕಾಗುತ್ತದೆ. ಶೋಷಿತರಿಗೆ ನ್ಯಾಯ ಒದಗಿಸಬೇಕಾದರೆ ಶೋಷಕರ ಶೋಷಣೆಯ ಮಾರ್ಗಗಳನ್ನು ನಿರ್ಮೂಲನ ಮಾಡಬೇಕಾಗುತ್ತದೆ. ವೇದ, ಶಾಸ್ತ್ರ, ಪುರಾಣ, ದೇವರು, ದೇಗುಲ ಮೊದಲಾದುವುಗಳನ್ನು ಶ್ರಮದಿಂದ ಬೆವರು ಸುರಿಸಲಗತ್ಯವಿರದ ಉದ್ಯೋಗ ಮೂಲಗಳನ್ನಾಗಿಸಿಕೊಂಡ ಸನಾತನ ಧರ್ಮದ ವಕ್ತಾರರು ಮತ್ತು ಪರಾವಲಂಬಿ ಪ್ರಭುಗಳಿಗೆ ಬಸವಣ್ಣನ ನೇತೃತ್ವದ ಶರಣ ಚಳವಳಿಯು ಅಸಹನೀಯ ಕೇಡಾಗಿ ಕಂಡದ್ದು ಸಹಜವೆ. ಆದರೆ, ಶರಣರನ್ನು ಮತ್ತು ಅವರ ಚಳುವಳಿಯನ್ನು ಧ್ವಂಸಗೊಳಿಸಿದ ರೀತಿ ಮಾತ್ರ ಅತ್ಯಂತ ಅಮಾನವೀಯವಾದುದು. ಪ್ರಾಣಬೆದರಿಕೆಯ ಕರಿ ನೆರಳಿನಲ್ಲೇ ಅವರ ಬದುಕು ಸಾಗಿತ್ತು ಎನ್ನುವುದು ಅವರ ಕೆಲವೊಂದು ವಚನಗಳಲ್ಲಿ ದಾಖಲಾಗಿದೆ. ಇಂಥ ಬೆದರಿಕೆ ಬಸವಣ್ಣನನ್ನೇ ಗುರಿಯಾಗಿಸಿತ್ತು ಎನ್ನುವುದು ಆತನ **ನಾಳೆ ಬಪ್ಪುದು ಇಂದೇ ಬರಲಿ ಇಂದು ಬಪ್ಪುದು ಈಗಲೇ ಬರಲಿ; ಇದಕಾರಂಜುವರು; ಹುಟ್ಟಿದ ಮೇಲೆ ಸಾಯಲೇ ಬೇಕು; ಅಂಥ ಸಾವು ನಮಗೆ ಮಹಾನವಮಿ**, ಎನ್ನುವ ಮಾತುಗಳಿಂದ ವ್ಯಕ್ತವಾಗುತ್ತದೆ.

ಕೊನೆಯದಾಗಿ, ಬಸವಣ್ಣ ಮತ್ತು ಶರಣ ಚಳುವಳಿಯ ಪ್ರೇರಣೆಗಳು ಸ್ವಚ್ಛ ಸಮಾಜದ, ಅಂದರೆ ಶೋಷಣೆ ಮುಕ್ತ ಕಲ್ಯಾಣ ರಾಜ್ಯದ ಆಶಯಗಳು ನನಸಾಗುವವರೆಗೆ ಬೇಕೇಬೇಕು. ಏಣಿ-ಶ್ರೇಣಿ ಪ್ರಚೋದಿತ ಮೇಲು-ಕೀಳೆನ್ನದ ಸಾಮಾಜಿಕ ವಿನ್ಯಾಸ; ವಿಕೇಂದ್ರೀಕೃತ ಅರ್ಥವ್ಯವಸ್ಥೆ; ದುಷ್ಟ ಕೂಟಗಳಿಗೆ ಮಣಿಯದೆ ಪ್ರಜಾಸತ್ತಾತ್ಮಕ ನೆಲೆಯಲ್ಲಿ ಕಾರ್ಯ ನಿರ್ವಹಿಸುವ ರಾಜ್ಯಾಡಳಿತ ಅಥವಾ ರಾಜಕೀಯ ಪ್ರಭುತ್ವ; ನಿಷ್ಠುರವಾದರೂ ನಿಷ್ಪಕ್ಷಪಾತವಾಗಿ ನ್ಯಾಯ ನೀಡುವ ನ್ಯಾಯಾಂಗ ವ್ಯವಸ್ಥೆ; ಸರ್ವೋದಯವೇ ಅಭಿವೃದ್ಧಿ ಎಂದು ನಂಬಿ, ಅದರ ಜಾರಿಗಾಗಿ ಅಧಿಕಾರ ಹೊಂದ ಬಯಸುವ ಜನಸಂಘಟನೆಗಳೇ ಸುಖೀ ರಾಜ್ಯದ ಲಕ್ಷಣಗಳು. ಲಾಭ ಗಳಿಸುವುದನ್ನೇ ಮೂಲ ಉದ್ದೇಶವಾಗಿಸಿಕೊಂಡ ಕಾರ್ಪೊರೇಟ್ ಸಂಸ್ಥೆಗಳ ಪ್ರಭಾವಕ್ಕೆ ಮಣಿಯದೆ ಮಾರುಕಟ್ಟೆ ಕೇಂದ್ರಿತ ಚಟುವಟಿಕೆಗಳನ್ನು ಮಾನವೀಯಗೊಳಿಸಲು ಇಂದಿನ ಸರ್ಕಾರಗಳು ಬದ್ಧವಾಗಬೇಕು. ಬಸವಣ್ಣನ ಮಾದರಿಯ ಸದ್ವಿನಯ, ಸಂಘಟನಾ ಕೌಶಲ್ಯ ಮತ್ತು ಸಂವಹನ ಚತುರತೆಗಳನ್ನು ಜನನಾಯಕರು ವೈಯಕ್ತಿಕವಾಗಿ ರೂಢಿಸಿಕೊಳ್ಳಬೇಕು. 'ಎಲ್ಲಿಯವರೆಗೆ ಅಧಿಕಾರ ಎಂದರೆ, ಹಣ ಇರುವವರೆಗೆ' ಎನ್ನುವ ಸ್ಥಿತಿ ತೊಲಗಬೇಕು. ಬದಲಾವಣೆ ಎನ್ನುವುದು ವ್ಯಕ್ತಿಯ ಮೂಲದಿಂದ ಹುಟ್ಟಿ ಸಮೂಹದ ನೆಲೆಯಲ್ಲಿ ಬೆಳೆದು ವ್ಯಾಪಿಸುವಂಥದ್ದು. ಆದುದರಿಂದ ನಾವು ನಮ್ಮ ನಮ್ಮ ನೆಲೆಯಲ್ಲಿ ಅಂದರೆ ನಮ್ಮ ನಿತ್ಯದ ಕರ್ತವ್ಯದಲ್ಲಿ, ಇತರರೊಂದಿಗೆ ವ್ಯವಹರಿಸುವಲ್ಲಿ, ಬದುಕಿನ ವಿಧಾನಗಳನ್ನು ರೂಪಿಸಿಕೊಳ್ಳುವಲ್ಲಿ ಸತ್ಯಶುದ್ಧವಾದರೆ ಸಾಕು, ಸ್ವಚ್ಛ ಸಮಾಜ ತಾನೇ ತಾನಾಗಿ ನಿರ್ಮಾಣವಾಗುತ್ತದೆ. ಇದುವೇ ಶರಣ ಚಳವಳಿ ಮತ್ತು ಬಸವಣ್ಣನ ಕಲ್ಯಾಣ ರಾಜ್ಯ ನಮ್ಮ ವರ್ತಮಾನದ ಬದುಕಿನ ಉನ್ನತಿಗೆ ನೀಡುವ ಸಂದೇಶ.

**ಡಾ|| ಜಿ. ಎನ್. ಮಲ್ಲಿಕಾರ್ಜುನಪ್ಪ**
'ಸ್ನೇಹ', ೨ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ವಿದ್ಯಾನಗರ, ಚಿತ್ರದುರ್ಗ - ೫೭೭ ೫೦೧

ಬಿದರಹಳ್ಳಿ ನರಸಿಂಹಮೂರ್ತಿ

**ಚಂ**ದ್ರಗುತ್ತಿಗೆ ನಾಥಪಂಥದ ಝುಂಡಿ ಬರುತ್ತಿದೆ, ಅವರ ಆಚರಣೆಗಳು ಬೆತ್ತಲೆಸೇವೆಗೆ ಸಪೋರ್ಟು ಮಾಡುವಂಥವೊ ಅಲ್ಲವೊ ಎಂದು ಅಧ್ಯಯನ ಮಾಡಬೇಕೆಂದು ಪ್ರೊ॥ ಬಿ. ಕೃಷ್ಣಪ್ಪನವರು ದಸಂಸ ಗೆಳೆಯರ ಮೂಲಕ ಹೇಳಿ ಕಳಿಸಿದರು. ಗುಪ್ತಪಂಥಗಳ ಹಾಗೂ ಬುಡಕಟ್ಟುಗಳ ನಿಗೂಢ ಆಚರಣೆಗಳ ಬಗ್ಗೆ ಮೊದಲಿಂದಲೂ ಕುತೂಹಲಿಯಾದ ನಾನು ಉತ್ಸಾಹದಿಂದ ಚಂದ್ರಗುತ್ತಿಗೆ ಹೋದೆ. ೧೯೮೬ರ ಬೆತ್ತಲೆಸೇವೆ ತಡೆಗಟ್ಟುವ ಆಂದೋಲನದಲ್ಲಿ ಭಾಗಿಯಾಗಿದ್ದ ಸೊರಬ ದಸಂಸದ ರಾಜಪ್ಪ ಮೇಷ್ಟರು ಅಲ್ಲಿ ನನಗಾಗಿ ಕಾಯುತಿದ್ದರು. ಝುಂಡಿ ಇನ್ನೂ ಬಂದಿರಲಿಲ್ಲ. ಇಡೀ ಚಂದ್ರಗುತ್ತಿ ಬಿಕೊ ಎನ್ನುತ್ತಿತ್ತು.

ಸಂಜೆಯ ಹೊತ್ತಿಗೆ ಸಾವಿರಾರು ಕಾನ್‌ಫಟ್ ಸನ್ಯಾಸಿಗಳ ದಂಡು ಬಂದಿಳಿಯಿತು. ವಿವಿಧ ಛಾಯೆಯ ಕಾವಿ ತೊಟ್ಟ ಅವರ ಎದೆಯಲ್ಲಿ ದಪ್ಪನೆ ಉಣ್ಣೆಯ ಜನಿವಾರಕ್ಕೆ ಕಟ್ಟಿದ್ದ ಮುದ್ರೆಯುಂಗುರ ಹಾಗೂ ಊದುವ ಪುಟ್ಟ ಕೊಂಬು ನೇತಾಡುತ್ತಿದ್ದವು. ಕಿವಿಗಳಲ್ಲಿ ದಂತ, ಶಂಖ, ಗಾಜು, ತಾಮ್ರ, ಚಿನ್ನ ಮತ್ತಿತರ ದೊಡ್ಡ ಕುಂಡಲಗಳು ಜೋಲಾಡುತ್ತಿದ್ದವು. ಕೆಲವರು ಸಾಧು ಸ್ವಭಾವದವರಂತೆ ಕಂಡರೆ, ಕೆಲವರು ಚಿಲುಮೆ ತುಟಿಗಿಟ್ಟು ಪ್ರಾಣಕ್ಕೆ ತ್ರಾಣ ಹೀರಿಕೊಳ್ಳುತ್ತ ಮುಗಿಲಿಗೆ ಮಾಯದ ಹೊಗೆ ಬಿಡುತ್ತ ಉನ್ಮತ್ತರಾಗಿದ್ದರು. ಇವರು ಸೆರೆ ಕುಡಿಯುತ್ತಾರೆ, ಭಂಗಿ ಸೇದುತ್ತಾರೆಂದು ತಿಳಿದ ಸ್ಥಳೀಯ ಯುವಕರು ಬಹು ಸಂತೋಷ ಸಂಭ್ರಮಗಳಿಂದ ಅವರನ್ನು ಬರಮಾಡಿಕೊಂಡರು. ಸೂರ್ಯಾಸ್ತದ ಬಂಗಾರ ಬಿಸಿಲಲ್ಲಿ ಎಲ್ಲೆಂದರಲ್ಲಿ ನಿಗಿನಿಗಿ ಕೆಂಡದ ಧುನಿಗಳಲ್ಲಿ ತಮ್ಮ ಆತ್ಮವನ್ನೆ ಬೇಯಿಸಿಕೊಳ್ಳುವಂತೆ ಪ್ರಸಾದ ಸಿದ್ಧಪಡಿಸುವ ದೃಶ್ಯದಿಂದ ಚಂದ್ರಗುತ್ತಿಗೆ ಚಂದ್ರಗುತ್ತಿಯೆ ವರ್ಣರಂಜಿತವಾಯಿತು. ಕತ್ತಲಾಗುತ್ತಿದ್ದಂತೆ ಜ್ಯೋತಿಗಳು, ಲಾಟೀನುಗಳು ಬೆಳಗಿ ತಲೆ ಮೇಲೊಂದು, ಕಾಲ ಕೆಳಗೊಂದು, ನಕ್ಷತ್ರಖಚಿತ ಆಕಾಶವಿರುವಂತೆ ಭಾಸವಾಯಿತು.

ಮಾರನೆ ಬೆಳಿಗ್ಗೆ ಮತ್ತೆ ಬೆಟ್ಟ ಹತ್ತುವಾಗ ರಾಜಪ್ಪ ಮತ್ತು ನಾನು ಕೆಲವು ಸಾಧುಗಳನ್ನು ಹತ್ತಿರದಿಂದ ಮಾತಾಡಿಸಿದೆವು. ಅವರೆಲ್ಲ ಉತ್ತರ ಭಾರತದವರು. ತಮ್ಮ ದೇಸಿ ಭಾಷೆಯಲ್ಲಿ ನಮ್ಮ ಪ್ರಶ್ನೆಗಳಿಗೆ ಉತ್ತರ ಕೊಟ್ಟರು. ವೀರ್ಯನಾಶಕ್ಕೆ ಬೆಚ್ಚುವ ಕಟ್ಟಾ ಬ್ರಹ್ಮಚಾರಿಗಳಂತೆ, ವೀರ ವಿರಕ್ತರಂತೆ ಕಂಡರು. ಮನೆಮಠ ಬಿಟ್ಟು ಸಾವಿರಾರು ಮೈಲಿ ಕಾಲ್ನಡಿಗೆಯಲ್ಲಿ ಬಂದಿದ್ದರು. ಮಂಗಳೂರಿನ ಕದ್ರಿಗೆ ಹೋಗುತ್ತಿರುವುದಾಗಿ ಹೇಳಿದರು. ತಮ್ಮ ಪಂಥದ ಕಠಿಣ ಕಟ್ಟುಪಾಡುಗಳ ಬಗ್ಗೆ, ಅಂತಿಮವಾದ ವೈಯಕ್ತಿಕ ಸಿದ್ಧಿ ಬಗ್ಗೆ ತಿಳಿಸಿದರು. ಅವರೆಲ್ಲರೂ ಗುರು ಹಾಕಿಕೊಟ್ಟ ವೀರ್ಯವತ್ತಾದ ಆಚರಣೆಯ ಹಳಿಗಳ ಮೇಲೆ ನಿಷ್ಠೆಯಿಂದ ಸಾಗುತ್ತಿರುವ ಹೈಟೆನ್ಷನ್ ಇಂಜಿನ್ನುಗಳಂತೆ ಕಂಡರೆ ವಿನಾ, ಹೆಂಗಸರ ಬೆತ್ತಲೆಸೇವೆಯಂಥ ಕ್ಷುಲ್ಲಕ ಸಂಗತಿಯ ಬಗ್ಗೆ ತಲೆಕೆಡಿಸಿಕೊಳ್ಳುವ ವಿಕೃತ ಮನಸ್ಸಿನವರಂತೆ ಕಾಣಲಿಲ್ಲ.

ಬೆಟ್ಟದ ಮೇಲಿರುವ ನಾಥಪಂಥದ ಮಠದ ಸರಳತೆಗೂ ಬೆತ್ತಲೆಸೇವೆಯ ಕಟ್ಟಳೆ ಹುಟ್ಟಿಹಾಕಿದ ರೇಣುಕಾಯಲ್ಲಮ್ಮ ಹಾಗೂ ಶೂಲದ ಬೀರಪ್ಪರ ಉಗ್ರಸ್ವರೂಪಕ್ಕೂ ಅಜಗಜಾಂತರ ವ್ಯತ್ಯಾಸವಿದೆ ಎನ್ನಿಸಿತು. ೧೯೮೬ರವರೆಗೆ ಚಂದ್ರಗುತ್ತಿಯಲ್ಲಿ ಪ್ರತಿ ವರ್ಷ ಅವ್ಯಾಹತವಾಗಿ ನಡೆಯುತ್ತ ಬಂದಿದ್ದ ಬೆತ್ತಲೆಸೇವೆಗೂ ನಾಥಪಂಥದವರ ಈ ಝುಂಡಿಗೂ ಯಾವುದೇ ಸಂಬಂಧವಿರುವಂತೆ ಕಾಣಲಿಲ್ಲ. ಯಾವುದೋ ಕಾಲಘಟ್ಟದಲ್ಲಿ ಶೈವ, ಶಾಕ್ತಪಂಥಗಳ ಕೆಲವು ವಾಮಾಚಾರಿ ಶಾಖೆಗಳ ಹಿತಾಸಕ್ತಿಯಿಂದಾಗಿ, ಆಳುವ ವರ್ಗದ ಕುಮ್ಮಕ್ಕಿನಿಂದಲೆ ಆ ಭಾಗದಲ್ಲಿ ಬೆತ್ತಲೆಸೇವೆಯಂಥ ಅನಿಷ್ಟ ಆಚರಣೆ ಜಾರಿಗೆ ಬಂದಿರಬೇಕೆಂಬ ಭಾವನೆ ಬಂದಿತು.

ಶೈವ, ಶಾಕ್ತ, ಭೈರವ, ಕಾಪಾಲಿಕ, ಕಾಳಾಮುಖ, ಲಕುಲೀಶ, ಕೌಲ, ಸಿದ್ಧ, ನಾಥ ಮುಂತಾದ ಭಾರತದ ಗುಪ್ತ ತಾಂತ್ರಿಕ ಪಂಥಗಳು ತಾತ್ವಿಕವಾಗಿ ಒಂದರಿಂದೊಂದು ವಿಭಿನ್ನವಾದರೂ ಆಚರಣೆ ಮತ್ತು ಅನುಸಂಧಾನದಲ್ಲಿ ಒಂದರಿಂದೊಂದು ಪ್ರಭಾವಿತವಾಗಿರುವುದು, ಕಡ ಪಡೆದಿರುವುದು ಉಂಟು. ಹೀಗಾಗಿ ಅವುಗಳನ್ನು ಪುಟಪೂರ ಪ್ರತ್ಯೇಕಿಸಿ ಶುದ್ಧಸ್ಥಿತಿಯಲ್ಲಿ ಕಾಣುವುದು ಅಸಾಧ್ಯ. ರೋಚಕ ಸಂಗತಿಗಳ ಕಲಸುಮೇಲೋಗರವಾಗಿರುವ ನಾಥಪಂಥದ ಚರಿತ್ರೆಯನ್ನು ವಿಶುದ್ಧ ಮನಸ್ಸಿನಿಂದ ನೋಡುವುದಕ್ಕೆ ಇದೀಗ ಕಾಲ ಪಕ್ವವಾಗಿದೆ. ಭಾರತದ ಗುಪ್ತಪಂಥಗಳೆಲ್ಲವೂ ಕೇವಲ ಅನುಭವನಿಷ್ಠ ಪಂಥಗಳು. ಒಳಹೊಕ್ಕು ಬೆರೆತು ಅನುಭವಿಸಿ ಅರಿಯಬೇಕೆ ಹೊರತು, ಹೊರಗಿನಿಂದ ಪಾಶ್ಚಾತ್ಯ ಶೈಲಿಯಲ್ಲಿ ಮಾಡುವ ಒಣ ಸಮಾಜಶಾಸ್ತ್ರೀಯ ಅಧ್ಯಯನಕ್ಕೆ ಅವುಗಳ ತಿರುಳು ಅಷ್ಟಾಗಿ ದಕ್ಕುವುದಿಲ್ಲ. ಈ ಸಂಗತಿಯನ್ನು ಅರಿತುಕೊಂಡ ಡಾ॥ ರಹಮತ್ ತರೀಕೆರೆಯವರು ಅನುಭವ ಮತ್ತು ಅಧ್ಯಯನ ಎರಡನ್ನೂ ಮೇಳವಿಸುವ ಸಾಂಸ್ಕೃತಿಕ ಅನುಸಂವಿಧಾನದ ದೇಸಿ ಹಾದಿ ಹಿಡಿದಿರುವುದು ಅವರ 'ಕರ್ನಾಟಕದ ನಾಥಪಂಥ' ಕೃತಿಯಲ್ಲಿ ಎದ್ದುಕಾಣುತ್ತದೆ.

ಗೋರಖನಾಥ ಹುಟ್ಟಾ ಬ್ರಾಹ್ಮಣನೆಂದು ಡಾ॥ ಹಜಾರಿ ಪ್ರಸಾದ ದ್ವಿವೇದಿಯವರು ಹೇಳುತ್ತಾರೆ (ಸಿದ್ಧ ಸಾಹಿತ್ಯ, ಮ.ಸು.ಕೃ., ೧೯೮೨, ಮೈ.ವಿ.ವಿ., ಪುಟ ೧೬೫). ''ಮತ್ಸ್ಯೇಂದ್ರನಾಥ ಗೋರಖನಾಥರು ಮೂಲತಃ ಬೌದ್ಧರಲ್ಲದಿದ್ದರೂ ಬೌದ್ಧಸಾಧನೆಯತ್ತ ತಿರುಗಿ ಅದರಲ್ಲಿ ಒಳ್ಳುಗಾಣದೆ ತಮ್ಮದೇ ಆದ ಪಂಥವನ್ನು ಸ್ಥಾಪಿಸಿರಬಹುದು''

# ನಾಥಪಂಥೀಯರ ಮತ್ತು ತತ್ವಪದಕಾರರ ಬೆಡಗು

ಶಿವಯೋಗ ಅನುಭಾವದ ಹಾದಿಯಾದರೆ ಹಠಯೋಗ ತಾಂತ್ರಿಕ ಸಿದ್ಧಿಯ ಮಾರ್ಗ. ಅವುಗಳಲ್ಲಿ ಒಂದು ಹೆಚ್ಚು ಇನ್ನೊಂದು ಕಡಿಮೆ ಎನ್ನಲು ಬರುವುದಿಲ್ಲ. ಗೋರಕ್ಷ ಮತ್ತು ಅಲ್ಲಮ ವಿಭಿನ್ನ ಮಾರ್ಗದ ಪ್ರವರ್ತಕರು. ಒಬ್ಬರನ್ನೊಬ್ಬರು ಆಳವಾಗಿ ಪ್ರಭಾವಿಸಿದವರು. ವಜ್ರಕಾಯದ ಗೋರಕ್ಷ ಶೂನ್ಯಕಾಯದ ಅಲ್ಲಮನಿಗೆ ಸೋತು ಶರಣಾದ ಎಂಬ ದಂತಕತೆಯನ್ನು ಕನ್ನಡ ವಿದ್ವಾಂಸರು ಹುಟ್ಟುಹಾಕಿದ್ದಾರೆಂದು ಹೇಳಲಾಗಿದೆ.

ಎಂದು ಮ. ಸು. ಕೃಷ್ಣಮೂರ್ತಿಯವರು ತರ್ಕಿಸುತ್ತಾರೆ(ಅದೆ). ಈವರೆಗೆ ದೊರೆತಿರುವ ನಾಥಪಂಥೀಯರ ಸಾಹಿತ್ಯವು ಗಾತ್ರದಲ್ಲಿ ಅತ್ಯಲ್ಪ; ದೊರೆತದ್ದರ ಅಭಿವ್ಯಕ್ತಿ ಕೂಡ ಅತ್ಯಂತ ಕ್ಲುಪ್ತ ಮತ್ತು ಗುಪ್ತ. ಅಪ್ಪಟ ದೇಸಿ ಶೈಲಿಯಲ್ಲಿರುವ, ಅಪಭ್ರಂಶ ಹಿಂದಿ ಎನ್ನಬಹುದಾದ ಹಳ್ಳಿಗಾಡಿನ ಜನಭಾಷೆಯಲ್ಲಿರುವ ಅವುಗಳನ್ನು ಅರ್ಥೈಸುವಲ್ಲಿ ನಮ್ಮ ನಿಘಂಟುಗಳೆಲ್ಲ ನಿರುಪಯುಕ್ತ. ಅನುಭವದ ನಿಚ್ಚಣಿಕೆಯೇರಿದರೆ ಅಷ್ಟಿಷ್ಟು ಅರಿವಾದೀತು.

ಶಿವಯೋಗ ಅನುಭಾವದ ಹಾದಿಯಾದರೆ ಹಠಯೋಗ ತಾಂತ್ರಿಕ ಸಿದ್ಧಿಯ ಮಾರ್ಗ. ಅವುಗಳಲ್ಲಿ ಒಂದು ಹೆಚ್ಚು ಇನ್ನೊಂದು ಕಡಿಮೆ ಎನ್ನಲು ಬರುವುದಿಲ್ಲ. ಗೋರಕ್ಷ ಮತ್ತು ಅಲ್ಲಮ ವಿಭಿನ್ನ ಮಾರ್ಗದ ಪ್ರವರ್ತಕರು. ಒಬ್ಬರನ್ನೊಬ್ಬರು ಆಳವಾಗಿ ಪ್ರಭಾವಿಸಿದವರು. ವಜ್ರಕಾಯದ ಗೋರಕ್ಷ ಶೂನ್ಯಕಾಯದ ಅಲ್ಲಮನಿಗೆ ಸೋತು ಶರಣಾದ ಎಂಬ ದಂತಕತೆಯನ್ನು ಕನ್ನಡ ವಿದ್ವಾಂಸರು ಹುಟ್ಟುಹಾಕಿದ್ದಾರೆಂದು ಹೇಳಲಾಗಿದೆ. ಅಲ್ಲಮನ ಅಭಿಮಾನಿಗಳು ಗೋರಖನನ್ನು ಲಘುವಾಗಿ ಚಿತ್ರಿಸುವ ಬಗ್ಗೆ ಆಧುನಿಕ ಕಾಲದ ಅನೇಕ ನಾಥ ವಿದ್ವಾಂಸರು ತೀವ್ರವಾದ ಅಸಮ್ಮತಿಯನ್ನು ವ್ಯಕ್ತಮಾಡುತ್ತಾರೆ ಎಂದು ಆಧಾರಸಹಿತ ವಿವರಿಸಿದ್ದಾರೆ ರಹಮತ್ ಅವರು (ಕರ್ನಾಟಕದ ನಾಥಪಂಥ, ಕನ್ನಡ ವಿ.ವಿ. ೨೦೦೯, ಪು. ೨೪೯). ದೀಪದ ಕೆಳಗೆ ಕತ್ತಲೆ ಇದ್ದೇ ತೀರುತ್ತದೆ. ತಾವು ಆರಾಧಿಸುವ ಸಾಂಸ್ಕೃತಿಕ ನಾಯಕರ ಮುಖಕ್ಕೆ ಮಸಿ ಬಳಿಯುವಂಥ ಮತಾಂಧ ಅನುಯಾಯಿಗಳು ಎಲ್ಲಕಡೆ ಇದ್ದೇ ಇರುತ್ತಾರೆ. (ಚಾಮರಸನ ಕಟ್ಟಾ ಅನುಯಾಯಿಗಳು ಕುಮಾರವ್ಯಾಸನ ಬಗ್ಗೆ ಇಂಥದೆ ಕುಯುಕ್ತಿಯ ದಂತಕತೆಯನ್ನು ಛೂ ಬಿಟ್ಟಿರುವುದನ್ನು ಇಲ್ಲಿ ನೆನೆಯಬಹುದು). ಅಂಥವರಿಂದಾಗಿ ಅಖಿಲ ಭಾರತ ವ್ಯಾಪ್ತಿಯ ಗೋರಕ್ಷನ ಘನತೆಗಾಗಲಿ, ಕಾಲಾತೀತ ಎತ್ತರ ಆಳಗಳ ಅಲ್ಲಮನ ಘನತೆಗಾಗಲಿ ಕುಂದುಬರುವುದಿಲ್ಲ ಎಂದು ಅರಿತರೆ ಸಾಕು.

ಚರಿತ್ರೆಯುದ್ದಕ್ಕೂ ಪದೇಪದೇ ಅನಾಥವಾಗುತ್ತ ಬಂದ ಅರಾಜಕ ದೇಶದ ಜನತೆಗೆ ಸರ್ವವನ್ನೂ ನಿಗ್ರಹಿಸುವ ಸಮರ್ಥ 'ನಾಥ'ನೊಬ್ಬನ ಕಲ್ಪನೆ ಅತ್ಯಂತ ಅದ್ಭುತವಾಗಿ ಕಂಡಿರಬೇಕು. ಈ ಮಹಾದೇಶದ ಅಪಾರ ಜನತೆಯನ್ನು ಜಾತ್ಯತೀತವಾಗಿ ಜೋಡಿಸುವ ಭರವಸೆ ಹುಟ್ಟಿಸಿದ ನಾಥಪಂಥ ಬಹು ಆಪ್ಯಾಯಮಾನವಾಗಿ ಕಂಡಿರಬೇಕು. ಅದಕ್ಕೆಂದೆ ಎಲ್ಲ ದಿಕ್ಕುಗಳಲ್ಲು ಶೈವ, ವೈಷ್ಣವ ಪಂಥಗಳ ನಾಥದೇವತೆಗಳು ತಲೆಯೆತ್ತಿರಬೇಕು. ಗುಹೇಶ್ವರ, ಅಮರನಾಥ, ನಿರ್ವಲಯ ಸಮಾಧಿಸ್ಥ ಕೈಲಾಸನಾಥ, ಸ್ವಯಂಭೂ ಕೇದಾರನಾಥ, ಘೋರಿ, ಘಜನಿಗಳ ದಾಳಿಗೊಳಗಾದ ಶ್ರೀಮಂತ ಸೋಮನಾಥ, ಪದೇಪದೇ ಭಗ್ನಗೊಂಡ ದೇಗುಲದ ಕಾಶಿ ವಿಶ್ವನಾಥ, ಶ್ರೀಶೈಲ ಭ್ರಮರಾಂಬಿಕೆ, ಮೋಹದ ಮಲ್ಲಿನಾಥ, ರಾಮೇಶ್ವರ ರಾಮನಾಥ ಇವರೆಲ್ಲ ಜಗತ್ಪಸಿದ್ಧ ಶೈವನಾಥ ದೇವರುಗಳು; ಬದರೀನಾಥ, ದ್ವಾರಕಾನಾಥ, ಮಥುರಾ ಶ್ರೀನಾಥ, ಗೋಕುಲದ ಗೋಪಿನಾಥ, ಪುರಿ ಜಗನ್ನಾಥ, ಇವರು ವೈಷ್ಣವರ ನಾಥದೇವರುಗಳು. ಇವರ ಜೊತೆ ಭೈರವನಾಥ ಭೂತನಾಥ ನಾಗನಾಥ ಗುರುನಾಥರಂಥ ಸ್ಥಳೀಯ ನಾಥರೂ ಅಸ್ತಿತ್ವ ಪಡೆದರು. ಶೂನ್ಯ ಸಂಪಾದನೆಯಲ್ಲಿ ಕೂಡ ಬಸವಣ್ಣ ಸಂಗಮನಾಥ ಎಂದು ತನ್ನ ಇಷ್ಟ ದೈವವನ್ನು, ಅಲ್ಲಮ ಅನಿಮಿಷನಂದಿನಾಥ ಎಂದು ತನ್ನ ಗುರುವನ್ನು ಕರೆಯುವುದನ್ನು ಕಾಣುತ್ತೇವೆ. ಜೈನ ಪರಂಪರೆಯ ಆದಿನಾಥ, ಪಾರ್ಶ್ವನಾಥ, ದಿಗಂಬರನಾಥ ಹಾಗೂ ಬೌದ್ಧ ಪರಂಪರೆಯ ಸಾರಾನಾಥ, ಸೂರ್ಯನಾಥ, ಚಂದ್ರನಾಥ, ದೀನಾನಾಥ ಮುಂತಾದ ಹೆಸರುಗಳು ನಾಥಪಂಥಕ್ಕಿಂತ ಹಿಂದಿನವೇ ಇರಬೇಕು. ಆದರೆ 'ನಾಥ' ಶಬ್ದಕ್ಕೆ ಆತ್ಯಂತಿಕ ಅರ್ಥವ್ಯಾಪ್ತಿ ಮತ್ತು ವಿಶೇಷ ಗೌರವ ತಂದುಕೊಟ್ಟವರು ನಾಥಪಂಥೀಯರೆ ಎಂಬುದರಲ್ಲಿ ಸಂಶಯವಿಲ್ಲ.




## ನಿರಾಸಕ್ತಿ

ಸ್ವಾತಂತ್ರ್ಯೋತ್ಸವ
ದಿನದಂದು
ರಾಷ್ಟ್ರಪಿತನಿಗೆ
ಹಾಕಿದ ಹೂಮಾಲೆ
ತಿಂಗಳ ನಂತರವೂ ಭಾವಚಿತ್ರದಲ್ಲೇ
ಒಣಗುತ್ತಲೇ
ಇರುವುದು ಕಣ್ಣಿಗೆ
ಕಾಣುತ್ತಲೇ ಇರುವ ಕುರುಡು

ಎನ್. ಶ್ರೀನಿವಾಸ್
ಮಂಡ್ಯ

ವಿವಿಧ ಪಂಥಗಳಿಗೆ ಸೇರಿದ ದೇವರುಗಳ ಸ್ಥಾನಮಾನ ಪಲ್ಲಟವಾಗುವ ಘಟನೆಗಳು ಭಾರತದ ಚರಿತ್ರೆಯಲ್ಲಿ ಹಾಸುಹೊಕ್ಕಾಗಿವೆ. ಈ ಕುರಿತ ನನ್ನ ಅನುಭವವೊಂದನ್ನು ನಿವೇದಿಸಿ ಈ ಪ್ರಬಂಧ ಮುಗಿಸುತ್ತೇನೆ: ೧೯೭೮ರಲ್ಲಿ ಒರಿಸ್ಸಾದ ಪುರಿ ಜಗನ್ನಾಥನ ದರ್ಶನಾರ್ಥಿಯಾಗಿ ಹೋಗಿದ್ದೆ. ಬಸ್ಸು ಬೆಳಗಿನಜಾವ ಅಲ್ಲಿಗೆ ಹೋಯಿತು. ಚಳಿಗತ್ತಲ ಕುತೂಹಲದಲ್ಲಿ ಕಾಲಾಡಿಸುತ್ತ ಹೋಗಿ ದೇಗುಲದ ಮೆಟ್ಟಿಲ ಸಾಲು ಹತ್ತಿದೆ. ಗರ್ಭಗುಡಿಗೆ ಕಾಲಿಡುತ್ತಿದ್ದಂತೆ ಕಣ್ಣೆದುರು ಹೊಸ ಸತ್ಯ ಧುತ್ತೆಂದು ನಿಂತಿತು. ಫೋಟೊದಲ್ಲಿ ಟಿವಿಯಲ್ಲಿ ನೋಡಿದ್ದ ಬಲರಾಮ, ಕೃಷ್ಣ, ಸುಭದ್ರೆಯರ ಮರದ ಮುಖವಾಡಗಳು ಮಾಯವಾಗಿ ಆ ಜಾಗದಲ್ಲಿ ಮೂರು ಕರಿಕಲ್ಲಿನ ದೊಡ್ಡ ಲಿಂಗಗಳು ನಿಂತಿದ್ದವು! ಅವನ್ನು ಪೂಜಾರಿಗಳು ತೊಳೆದು ಒರೆಸುತ್ತಿದ್ದರು. ಒಂದು ಕ್ಷಣ ಅವು ಅಲಾಬಿ ಹಸ್ತದ ಬೆರಳುಗಳಂತೆಯೂ ಕಂಡವು. ಓಹೊ! ಇದೆ ಬಹುಶಃ ಬಹಳ ಹಳೆ ಸತ್ಯ ಎನ್ನಿಸಿತು. ಬೆಳಕಾಗುವ ಹೊತ್ತಿಗೆ ಕಗ್ಗತ್ತಲ ಕಾಲಗರ್ಭದ ಈ ಹಳೆ ಸತ್ಯಗಳನ್ನು ಮರೆಮಾಚುವಂತೆ ಹೊಸ ಸತ್ಯದ ಮುಖವಾಡಗಳನ್ನು ತೊಡಿಸುತ್ತಾರೆ ಎನ್ನಿಸಿತು. ಒರಿಸ್ಸಾದ ಆದಿವಾಸಿಗಳು ಮರದ ದೇವರುಗಳನ್ನು ಪೂಜಿಸಲಾರೆವೆಂದು ದಂಗೆ ಎದ್ದದ್ದರ ಕುರಿತು 'ದಾರು ಪ್ರತಿಮಾ ನ ಪೂಜಿವೇ' ಎಂಬ ಪುಸ್ತಕದಲ್ಲಿ ಜಿ. ರಾಜಶೇಖರ್ ಬರೆದದ್ದು ನೆನಪಾಯಿತು. ಹರಕೆ ಹೊತ್ತ ತಂದೆತಾಯಿಯರು ಹಡೆದ ಮಕ್ಕಳನ್ನೆ ಜಗನ್ನಾಥನ ಮಹಾರಥದ ಗಾಲಿಗೆ ಬಲಿ ಕೊಡುವುದನ್ನು ಕಂಡ ಇಂಗ್ಲಿಷರು ಅಂಥ ಅನಾಗರಿಕ ನರಬಲಿ ಆಚರಣೆ ಬಗ್ಗೆ ಜಗತ್ತಿನ ಗಮನ ಸೆಳೆಯಲು 'ಜಗರ್ನಾಟ್' ಎಂಬ ಹೊಸ ಶಬ್ದವನ್ನೆ ಹುಟ್ಟಿಹಾಕಿದರೆಂದು ಓದಿದ್ದೆ. ಕಾರಂತರ 'ಸ್ವಪ್ನದ ಹೊಳೆ' ಕಾದಂಬರಿಯಲ್ಲಿ ಗೋಳಿಕಟ್ಟೆ ಹತ್ತಿರದ ಭೂತದ ಕಲ್ಲನ್ನು ಆದಿವಾಸಿಗಳು ಅನಾದಿ ಲಿಂಗದಂತೆ ಆರಾಧಿಸುವ ದೃಶ್ಯ ನೆನಪಾಯಿತು. ಆ ಮೂರು ಲಿಂಗಗಳು ಋಗ್ವೇದೋಕ್ತ ನಿಸರ್ಗಾರಾಧನೆಯ ಪಳೆಯುಳಿಕೆಗಳೆ? ಕೃಷ್ಣನ ಪಕ್ಕ ರುಕ್ಮಿಣಿ ಅಥವ ರಾಧೆ ಇರುವ ದೇವಾಲಯಗಳು ಸಾವಿರಾರಿವೆ. ಆದರೆ ಇಲ್ಲಿ ಕೃಷ್ಣನ ಬಲಕ್ಕೆ ಬಲರಾಮ ಸುಭದ್ರೆ ಬಂದು ನಿಂತದ್ದು ಯಾಕೆ? ಇದಕ್ಕೆ ಶ್ರೀಕೃಷ್ಣ ಕಾರಣನೆ? ಅಥವಾ ಮೂರು ಲಿಂಗಗಳಿಗೆ ಮುಖವಾಡ ತೊಡಿಸುವ ತೊಡಕು ಎದುರಾದಾಗ ಕೃಷ್ಣನ ಮದಾಂಧ ಭಕ್ತರಿಗೆ ಹೊಳೆದ ಪರಿಹಾರವೆ ಇದು? ಯಾವ ದೇವರನ್ನು ಬೇಕಾದರೂ ಪೂಜಿಸು ಎಂಬ ಆಧ್ಯಾತ್ಮಿಕ ಸ್ವಾತಂತ್ರ್ಯ ನೀಡುವ ನಾಡಿನಲ್ಲಿ ಒಬ್ಬ ದೇವರಿಗಾಗಿ ಇನ್ನೊಬ್ಬ ದೇವರನ್ನೆ ಬಲಿಕೊಡುವ ಧರ್ಮಾಂಧ ಪರಂಪರೆ ಹುಟ್ಟಿದ್ದು ದೇವರಿಂದಲೊ, ಮನುಷ್ಯರಿಂದಲೊ? ಉತ್ತರ ಸಿಗದ ಪ್ರಶ್ನೆಗಳಿಗೆ ಬೆಚ್ಚಿಬಿದ್ದು ದೇಗುಲದಿಂದ ಹೊರಬಿದ್ದೆ.

ಬಿದರಹಳ್ಳಿ ನರಸಿಂಹಮೂರ್ತಿ
'ಅನಿಮಿಷ', ೭ನೇ ತಿರುವು, ದುರ್ಗಿಗುಡಿ ಬಡಾವಣೆ
ಹೊನ್ನಾಳಿ - ೫೭೭ ೨೧೭

# ಸೂಪರ್ ಬಗ್ ವಿವಾದ ಭಾರತಕ್ಕೆ ಕಳಂಕವೇ ?



ಡಾ|| ಎಚ್. ಎಸ್. ಮೋಹನ್

ದೆಹಲಿಯ ನೀರಿನಲ್ಲಿ ಬಹಳಷ್ಟು ಆಂಟಿಬಯಾಟಿಕ್ ಔಷಧಗಳಿಗೆ ಬಗ್ಗದ ಬ್ಯಾಕ್ಟೀರಿಯಾಗಳಿವೆ – ಎಂಬ ಇತ್ತೀಚಿನ ಬ್ರಿಟಿಷ್ ಅಧ್ಯಯನ ಹಲವು ವಿವಾದಗಳಿಗೆ ನಾಂದಿಯಾಗಿದೆ. ಅಂತರರಾಷ್ಟ್ರೀಯ ವೈದ್ಯಕೀಯ ಜರ್ನಲ್ 'ಲ್ಯಾನ್ಸೆಟ್'ನಲ್ಲಿ ಏಪ್ರಿಲ್ ೨೦೧೧ರ ಮೊದಲ ವಾರದಲ್ಲಿ ಈ ಬಗೆಗಿನ ವಿವರವಾದ ಅಧ್ಯಯನ ಪ್ರಕಟವಾಗಿತ್ತು. ಅದರ ಪ್ರಕಾರ ಭಾರತದ ರಾಜಧಾನಿ ದೆಹಲಿಯ ಹಲವು ಭಾಗಗಳಲ್ಲಿ ಉಪಯೋಗವಾಗುತ್ತಿರುವ ಕುಡಿಯುವ ನೀರು, ಆಹಾರ ತಯಾರಿಸಲು ಬಳಸುತ್ತಿರುವ ನೀರು, ಬಟ್ಟೆ, ಪಾತ್ರೆ ತೊಳೆಯಲು ಉಪಯೋಗಿಸುತ್ತಿರುವ ನೀರು ಈ ಎಲ್ಲವುಗಳಲ್ಲಿ ಹೆಚ್ಚಿನ ಎಲ್ಲ ಆಂಟಿಬಯಾಟಿಕ್‌ಗಳಿಗೆ ಬಗ್ಗದ (ಅಥವಾ ಕಾಯಿಲೆ ಬಂದರೆ ಗುಣವಾಗದ) ಬ್ಯಾಕ್ಟೀರಿಯಾಗಳಿವೆ. ಈ ಅಧ್ಯಯನ ನಡೆಸಿದ ವೈದ್ಯ ಸಂಶೋಧಕರು ''ದೆಹಲಿಯ ವಾತಾವರಣದಲ್ಲಿಯೇ ಈ ಬಗೆಯ ಹಲವು ಬ್ಯಾಕ್ಟೀರಿಯಾಗಳು ಇರುವ ಸಾಧ್ಯತೆ ಇದೆ'' ಎಂದು ಅಭಿಪ್ರಾಯಪಡುತ್ತಾರೆ. ಅಲ್ಲದೆ ಈ ಬ್ಯಾಕ್ಟೀರಿಯಾಗಳಲ್ಲಿ 'ಎನ್.ಡಿ.ಎಮ್.-೧' ಎಂಬ ವಂಶವಾಹಿಯಿದೆ ಎಂದು ಅವರ ಅಂಬೋಣ. (ಎನ್.ಡಿ.ಎಮ್.- ನ್ಯೂ ಡೆಲ್ಲಿ ಮೆಟಲ್ಲೋ ಬೀಟಾ ಲ್ಯಾಕ್ಟಮೇಸ್)

''ಇದು ವಾತಾವರಣದ ಬ್ಯಾಕ್ಟೀರಿಯಾದ ಬಗೆಗಿನ ಅಧ್ಯಯನ, ಭಾರತದ ರೋಗಿಗಳಲ್ಲಿರುವ ಸೋಂಕಿನ ರೀತಿಗೂ ಈ ಅಧ್ಯಯನಕ್ಕೂ ಸಂಬಂಧವೇ ಇಲ್ಲ'' ಎಂದು ಕೇಂದ್ರ ಆರೋಗ್ಯ ವ್ಯವಸ್ಥೆಯ ಡೈರೆಕ್ಟರ್ ಜನರಲ್ ಡಾ|| ರಾಕೇಶ್ ಶ್ರೀವಾಸ್ತವ ಅಭಿಪ್ರಾಯ ಪಡುತ್ತಾರೆ. ಆದರೆ ಈ ಎರಡು ವಿರೋಧಾಭಾಸದ ಅಭಿಪ್ರಾಯ, ನಿಲುವುಗಳನ್ನು ಅವಲೋಕಿಸಿದರೆ ಸಮಸ್ಯೆ ಅಷ್ಟು ಸರಳವಾದುದಲ್ಲ ಎಂದು ತಿಳಿಯುತ್ತದೆ. ಇದರ ಆಳವನ್ನು ನಾವು ವಿಶ್ಲೇಷಿಸುವುದಾದರೆ ಕಳೆದ ವರ್ಷ ಇದೇ 'ಲ್ಯಾನ್ಸೆಟ್' ನಿಯತಕಾಲಿಕದಲ್ಲಿ ಪ್ರಕಟವಾದ ಮತ್ತೊಂದು ಅಧ್ಯಯನದ ಬಗೆಗೆ ಗಮನಹರಿಸುವ ಅವಶ್ಯಕತೆಯಿದೆ.

''ಭಾರತದಲ್ಲಿ ವಿವಿಧ ಕಾಯಿಲೆಗಳಿಗೆ ಚಿಕಿತ್ಸೆ ಪಡೆದು ಇಂಗ್ಲೆಂಡಿಗೆ ಹಿಂದಿರುಗಿದ ೩೭ ಬ್ರಿಟಿಷ್ ನಾಗರಿಕರಲ್ಲಿ ಯಾವ ಆಂಟಿಬಯಾಟಿಕ್‌ಗಳ ಚಿಕಿತ್ಸೆಗೂ ಗುಣ ಕಾಣದ ಅಥವಾ ಬಗ್ಗದ ಎನ್.ಡಿ.ಎಮ್.-೧ ಜೀನ್ ಹೊಂದಿರುವ ಬ್ಯಾಕ್ಟೀರಿಯಾಗಳಿವೆ'' ಎಂದು ಆಗಸ್ಟ್ ೨೦೧೦ರಲ್ಲಿ 'ಲ್ಯಾನ್ಸೆಟ್' ನಿಯತಕಾಲಿಕ ಅಧ್ಯಯನ ಒಳಗೊಂಡ ಲೇಖನ ಪ್ರಕಟಿಸಿತು. ಆ ಸಂದರ್ಭದಲ್ಲಿ ಈ ಎನ್.ಡಿ.ಎಮ್. ಜೀನ್ ಹೊಂದಿರುವ ಬ್ಯಾಕ್ಟೀರಿಯಾಗಳನ್ನು 'ಸೂಪರ್ ಬಗ್'ಗಳು ಎಂದು ಪ್ರಪಂಚದಾದ್ಯಂತ ವೈದ್ಯರು, ವಿಜ್ಞಾನಿಗಳು ಹೆಸರಿಸಿದರು. ಈ ಸೂಪರ್ ಬಗ್‌ಗಳ ಸಮಸ್ಯೆ ಭಾರತಕ್ಕೆ ಮಾತ್ರ ಸೀಮಿತವಾಗಿಲ್ಲ. ಇದು ಜಾಗತಿಕಮಟ್ಟದ ಆರೋಗ್ಯ ಸಮಸ್ಯೆ. ಈ ಬಗೆಗೆ ಸಹಕಾರ ಮನೋಭಾವದ ಅಧ್ಯಯನ, ಮಾಹಿತಿ ಹಂಚಿಕೊಳ್ಳುವಿಕೆಗಳು ಜಗತ್ತಿನ ಎಲ್ಲ ದೇಶಗಳ ಆದ್ಯತೆಯಾಗಬೇಕು ಎಂದು ಆಗ 'ಲ್ಯಾನ್ಸೆಟ್' ನಿಯತಕಾಲಿಕ ಪ್ರತ್ಯೇಕ ಸಂಪಾದಕೀಯ ಬರೆಯಿತು. (ಸಾಮಾನ್ಯ ಬ್ಯಾಕ್ಟೀರಿಯಾಗಳನ್ನು 'ಬಗ್'ಗಳೆಂದೂ ಬಳಕೆಯಲ್ಲಿರುವ ಆಂಟಿಬಯಾಟಿಕ್ ಔಷಧಗಳಿಗೆ ಬಗ್ಗದ ಬ್ಯಾಕ್ಟೀರಿಯಾಗಳನ್ನು 'ಸೂಪರ್ ಬಗ್'ಗಳೆಂದೂ ಕರೆಯುವುದು ರೂಢಿ.)

ಆಗಸ್ಟ್ ೨೦೧೦ರಲ್ಲಿ ಪ್ರಕಟಗೊಂಡ ಆ ಲೇಖನದ ಬಗೆಗೂ ಭಾರತದಲ್ಲಿ ಸಾಕಷ್ಟು ವಿವಾದಗಳು ಹೊರಹೊಮ್ಮಿದ್ದವು. ಈ ಎರಡೂ ಅಧ್ಯಯನಗಳು ಹೊರಹಾಕಿದ ಮುಖ್ಯ ಅಂಶವೆಂದರೆ ಭವಿಷ್ಯದಲ್ಲಿ ಸಂಭವಿಸಲಿರುವ ಪರಿಣಾಮವೆಂದರೆ, 'ಆಂಟಿಬಯಾಟಿಕ್ ಅಥವಾ ಜೀವಿರೋಧಕ ಔಷಧಗಳು ಬಹಳಷ್ಟು, ಅದರಲ್ಲಿಯೂ ಹೆಚ್ಚಾಗಿ ಭಾರತದಲ್ಲಿ, ಅಧಿಕ ಪ್ರಮಾಣದಲ್ಲಿ ದುರುಪಯೋಗವಾಗುತ್ತಿವೆ.'

**ಜಾಗತಿಕ ಸಮಸ್ಯೆ**

ಆಂಟಿಬಯಾಟಿಕ್ ಔಷಧಗಳ ಅಧಿಕ ಪ್ರಮಾಣದ ಉಪಯೋಗ ಮತ್ತು ದುರುಪಯೋಗ ಎರಡೂ ಈಗ ಜಾಗತಿಕ ಮಟ್ಟದಲ್ಲಿ ಗಂಭೀರ ಸಮಸ್ಯೆಗಳಾಗಿವೆ. ಅದರಲ್ಲಿಯೂ ಭಾರತದಲ್ಲಿ ಈ ಸಮಸ್ಯೆ ತೀವ್ರ ಪ್ರಮಾಣದಲ್ಲಿದೆ. ಇದಕ್ಕೆ ಮುಖ್ಯ ಕಾರಣವೆಂದರೆ ವೈದ್ಯರು ಬೇಕಾಬಿಟ್ಟಿ ಔಷಧಗಳನ್ನು ಉಪಯೋಗಿಸುವುದು. ಎಷ್ಟೋ ಬಾರಿ ಆಂಟಿಬಯಾಟಿಕ್‌ಗಳ ಅವಶ್ಯಕತೆಯೇ ಇಲ್ಲದ ವೈರಸ್ ಜ್ವರಗಳಲ್ಲಿಯೂ ತುಂಬ ಮೇಲ್ಮಟ್ಟದ ಆಂಟಿಬಯಾಟಿಕ್ ಉಪಯೋಗಿಸುವುದು. ಪರಿಣಾಮವಾಗಿ ಆ ಔಷಧಿ ಕಾಲಕ್ರಮೇಣ ರೋಗವನ್ನು ಗುಣಪಡಿಸುವ ತನ್ನ ಗುಣವನ್ನು ಕಳೆದುಕೊಂಡು ಶಕ್ತಿಹೀನವಾಗುತ್ತದೆ. ಕಾರಣ ಎಷ್ಟೋ ಬಾರಿ ವೈದ್ಯರ ಸಲಹೆ ಇಲ್ಲದೆಯೇ ರೋಗಿಗಳು ತಾವೇ ಈ ತರಹದ ಔಷಧಗಳನ್ನು ಔಷಧ ಅಂಗಡಿಗಳಿಂದ ಕೊಂಡು ತಮಗೆ ಸರಿಕಂಡ

**ಐಟಿ ಬಿಟಿಯ ರಂಗಗಳಲ್ಲಿ ಅಗಾಧ ಪ್ರಮಾಣದ ಪ್ರಗತಿ ಹೊಂದುತ್ತಿರುವ ಭಾರತ ಇತ್ತೀಚಿನ ವರ್ಷಗಳಲ್ಲಿ ವೈದ್ಯಕೀಯ, ಪ್ರವಾಸೋದ್ಯಮಗಳಲ್ಲಿ ಗಮನಾರ್ಹವಾದ ಹೆಚ್ಚಳ ಸಾಧಿಸಿದೆ. ತಮ್ಮ ದೇಶಗಳಿಗಿಂತ ಕಡಿಮೆ ವೆಚ್ಚದ ಶಸ್ತ್ರಕ್ರಿಯೆ, ಚಿಕಿತ್ಸೆಗಳು ದೇಶದ ಹಲವೆಡೆ ಲಭ್ಯವಾಗುತ್ತವೆಂದು ಸಾವಿರಾರು ವಿದೇಶಿ ರೋಗಿಗಳೂ ನಮ್ಮಲ್ಲಿಗೆ ಲಗ್ಗೆ ಇಡುತ್ತಾರೆ. ಈ ದಿಸೆಯಲ್ಲಿ 'ವೈದ್ಯಕೀಯ ಪ್ರವಾಸೋದ್ಯಮ' ಒಂದು ಕೈಗಾರಿಕೆಯ ರೀತಿಯಲ್ಲಿ ತನ್ನದೇ ಆದ ಬೆಳವಣಿಗೆ ಕಂಡುಕೊಂಡಿದೆ. ಉಳ್ಳವರ, ಶ್ರೀಮಂತರ ಚಿಕಿತ್ಸೆಗೆ ಉತ್ತಮ ಹೈಟೆಕ್ ಆಸ್ಪತ್ರೆಗಳು ಒಂದು ಕಡೆ ತೀವ್ರವಾಗಿ ಬೆಳೆಯುತ್ತಿದ್ದರೆ, ಸಾಮಾನ್ಯ ಜನರ ಆರೋಗ್ಯಕ್ಕೆ ಬೇಕಾದ ಶುದ್ಧ ಕುಡಿಯುವ ನೀರು, ಚರಂಡಿ ವ್ಯವಸ್ಥೆ ಮೊದಲಾದುವು ಹೆಚ್ಚಿನ ನಮ್ಮ ನಗರ, ಪಟ್ಟಣಗಳಲ್ಲಿ ತುಂಬ ಕೀಳುಮಟ್ಟದಲ್ಲಿವೆ ಎಂಬುದು ವಾಸ್ತವ.**

ಹಾಗೆ ಉಪಯೋಗಿಸುವುದು. ಇನ್ನೊಂದು, ವೈದ್ಯರು ಸಲಹೆ ಮಾಡಿದ ೫ ದಿವಸ ಅಥವಾ ೭ ದಿವಸಗಳ ಆಂಟಿಬಯಾಟಿಕ್ ಕೋರ್ಸ್‌ಗಳನ್ನು ಪೂರ್ತಿಯಾಗಿ ಪೂರೈಸದೆ, ರೋಗಲಕ್ಷಣ ಸ್ವಲ್ಪ ಕಡಿಮೆಯಾದ ಕೂಡಲೆ ಔಷಧ ಸೇವಿಸುವುದನ್ನು ನಿಲ್ಲಿಸಿಬಿಡುವುದು. ಈ ಎಲ್ಲ ಅಂಶಗಳು 'ಆಂಟಿಬಯಾಟಿಕ್ ರೆಸಿಸ್ಟನ್ಸ್' ಹೆಚ್ಚಲು ಕಾರಣವಾಗುತ್ತದೆ. ಅಂದರೆ ಮೊದಲು ತಿಳಿಸಿದ ಹಾಗೆ ಆ ಔಷಧ ಬ್ಯಾಕ್ಟೀರಿಯಾಗಳನ್ನು ನಾಶಪಡಿಸಿ ರೋಗ ಗುಣಪಡಿಸುವ ತನ್ನ ಮೂಲ ಶಕ್ತಿಯನ್ನು ಕಳೆದುಕೊಳ್ಳುತ್ತಾ ಹೋಗುತ್ತದೆ. ಇದರ ಜೊತೆಯಲ್ಲಿ ನಮ್ಮ ಸಾಮಾನ್ಯ ಜನರಲ್ಲಿರುವ ನೈರ್ಮಲ್ಯದ ಕೊರತೆ ಮತ್ತು ಆರೋಗ್ಯ ವೈದ್ಯಕೀಯ ವಿಚಾರಗಳ ಬಗೆಗಿರುವ ಅಜ್ಞಾನ ಹಾಗೂ ಮೂಢನಂಬಿಕೆಗಳು ಈ ವಿಚಾರವನ್ನು ಇನ್ನೂ ಸಮಸ್ಯಾತ್ಮಕವಾಗಿ ಮಾಡುತ್ತಿವೆ.

ವಿಶ್ವ ಆರೋಗ್ಯ ಸಂಸ್ಥೆಯ ಒಂದು ಅಂದಾಜಿನ ಪ್ರಕಾರ ಭಾರತದಲ್ಲಿ ವೈದ್ಯರ ಸಲಹಾ ಚೀಟಿಯಿಲ್ಲದೆ ಶೇಕಡ ೫೩ರಷ್ಟು ಆಂಟಿಬಯಾಟಿಕ್‌ಗಳು ಮಾರಾಟವಾಗುತ್ತಿವೆ. ವೈದ್ಯರ ಸಲಹಾ ಚೀಟಿಯಿಲ್ಲದೆ ಮಾರಲೇಬಾರದ ಔಷಧಿಗಳನ್ನು, ಔಷಧ ಅಂಗಡಿಗಳು ಬೇಕಾಬಿಟ್ಟಿ ಮಾರಾಟ ಮಾಡುತ್ತಿವೆ. ಇದರ ಬಗೆಗೆ ಒಂದು ನಿರ್ದಿಷ್ಟ ನಿಯಂತ್ರಣ ವ್ಯವಸ್ಥೆಯಿಲ್ಲ. ಪರಿಣಾಮ ಸುಲಭ ಮತ್ತು ಕಡಿಮೆ ಬೆಲೆಯ ಆಂಟಿಬಯಾಟಿಕ್‌ಗಳು ತಮ್ಮ ಬ್ಯಾಕ್ಟೀರಿಯಾಗಳನ್ನು ನಾಶಪಡಿಸುವ ಗುಣವನ್ನು ಕಳೆದುಕೊಂಡು ಕ್ರಮೇಣ ಉಪಯೋಗಕ್ಕೆ ಬಾರದಂತಾಗುತ್ತಿವೆ. ಈ ರೀತಿ ನಾವು ಹಲವಾರು ಉತ್ತಮ ಗುಣಮಟ್ಟದ ಔಷಧಗಳನ್ನು ಕಳೆದುಕೊಂಡಿದ್ದೇವೆ.

ಮಾನವರಲ್ಲಿ ಕಾಯಿಲೆ ಉಂಟುಮಾಡುವ ಬ್ಯಾಕ್ಟೀರಿಯಾಗಳು ಸಾಮಾನ್ಯವಾಗಿ ಅಥವಾ ಹೆಚ್ಚು ಉಪಯೋಗವಾಗುವ ಆಂಟಿಬಯಾಟಿಕ್‌ಗಳಿಗೆ 'ರೆಸಿಸ್ಟನ್ಸ್' ಬೆಳೆಸಿಕೊಳ್ಳುವುದು, ಬ್ಯಾಕ್ಟೀರಿಯಾಗಳ ದೃಷ್ಟಿಯಿಂದ ಹೇಳುವುದಾದರೆ, ಒಂದು ಸಾಮಾನ್ಯ ಪ್ರಕ್ರಿಯೆ. ಉದಾಹರಣೆಗೆ ಮಾರಣಾಂತಿಕ ಕಾಯಿಲೆಗಳಾದ ಮಲೇರಿಯಾ ಮತ್ತು ಕ್ಷಯ (ಟಿಬಿ)ಗಳಿಗೆ ಕಾರಣೀಭೂತವಾದ ಬ್ಯಾಕ್ಟೀರಿಯಾಗಳು ಕ್ರಮೇಣವಾಗಿ ಹಲವಾರು ಔಷಧಗಳಿಗೆ ನಿರೋಧತೆ ಬೆಳೆಸಿಕೊಂಡು ಅಂತಹ ಔಷಧಗಳೆಲ್ಲಾ ಆ ಕಾಯಿಲೆಗಳ ಚಿಕಿತ್ಸೆಗಳಲ್ಲಿ ಪ್ರಯೋಜನವಾಗುತ್ತಿಲ್ಲ. ವಿಜ್ಞಾನಿಗಳು, ವೈದ್ಯರು ಇನ್ನೂ ಹೆಚ್ಚಿನ ಮತ್ತು ದುಬಾರಿಯಾದ ಔಷಧಗಳ ಆವಿಷ್ಕಾರ ಮಾಡಬೇಕಾಗುತ್ತದೆ. ಜನರಿಗೆ ಇದು ಮತ್ತಷ್ಟು ಹೊರೆಯಾಗುತ್ತಾ ಹೋಗುತ್ತದೆ.

**ದೆಹಲಿಯ ೨೦೧೦ರ ನೀರಿನ ಅಧ್ಯಯನ**

ಸೆಪ್ಟೆಂಬರ್ ೨೬ರಿಂದ ಅಕ್ಟೋಬರ್ ೧೦ರ ಒಳಗೆ ನವದೆಹಲಿಯ ೧೭೧ ಚರಂಡಿಗಳ ನೀರಿನ ಸ್ಯಾಂಪಲ್‌ಗಳು ಹಾಗೂ ೫೦ ನಲ್ಲಿ ನೀರಿನ (ಕುಡಿಯಲು ಯೋಗ್ಯವಾದ ನೀರು) ಸ್ಯಾಂಪಲ್‌ಗಳನ್ನು ಸಂಗ್ರಹಿಸಿ ಅಧ್ಯಯನಕ್ಕಾಗಿ ಇಂಗ್ಲೆಂಡಿಗೆ ರವಾನಿಸಲಾಯಿತು. ಇದರ ಜೊತೆಗೆ ಹೋಲಿಸಲು ಇಂಗ್ಲೆಂಡಿನ ಕಾರ್ಡಿಫ್ ಮಲಿನ ನೀರು ಶುದ್ಧೀಕರಿಸುವ ಕಾರ್ಖಾಗಾರದ ೭೦ ಸ್ಯಾಂಪಲ್‌ಗಳನ್ನೂ ಸಂಗ್ರಹಿಸಲಾಯಿತು. ದೆಹಲಿಯ ಚರಂಡಿಯ ೧೭೧ರಲ್ಲಿ ೧೨ ಸ್ಯಾಂಪಲ್‌ಗಳಲ್ಲಿ ಹಾಗೂ




ನಲ್ಲಿ ನೀರಿನ ೫೦ ಸ್ಯಾಂಪಲ್‌ಗಳ ೨ರಲ್ಲಿ ಎನ್.ಡಿ.ಎಮ್. ಜೀನ್ ಹೊಂದಿರುವ ಬ್ಯಾಕ್ಟೀರಿಯಾಗಳು ಕಂಡುಬಂದವು. ಕಾರ್ಡಿಫ್‌ನ ಯಾವುದೇ ಸ್ಯಾಂಪಲ್‌ನಲ್ಲೂ ಈ ರೀತಿಯ ಬ್ಯಾಕ್ಟೀರಿಯಾಗಳು ಇರಲಿಲ್ಲ. ಈ ಬ್ಯಾಕ್ಟೀರಿಯಾಗಳು ಹೆಚ್ಚಾಗಿ ಅತಿಭೇದಿ, ಅತಿಸಾರ ಮತ್ತು ಕಾಲರಾ ಕಾಯಿಲೆ ಉಂಟುಮಾಡುವಂತಹವು. ಹಾಗಾಗಿ ಇವು ನಮ್ಮ ಎಂದಿನ ಆಂಟಿಬಯಾಟಿಕ್‌ಗಳಿಗೆ ಬಗ್ಗದಿದ್ದರೆ ಪರಿಣಾಮ ಗಂಭೀರ. ಎಷ್ಟೋ ಸಂದರ್ಭಗಳಲ್ಲಿ ಮರಣ ನಿಶ್ಚಿತ. ಸಾರ್ವಜನಿಕ ನೀರಿನ ವ್ಯವಸ್ಥೆಯನ್ನೇ ನಂಬಿರುವ ಸಾಮಾನ್ಯ ನಾಗರಿಕರ ಆರೋಗ್ಯ ಎಷ್ಟು ಅಪಾಯದಲ್ಲಿದೆ ಎಂಬುದನ್ನೂ ಇದು ಸೂಚಿಸುತ್ತದೆ ಎಂಬುದು ತಜ್ಞರ ಅಭಿಮತ.

**ಹೆಸರಿನ ಬಗೆಗೆ ವಿವಾದ**

೨೦೧೦ರ ಅಧ್ಯಯನದಲ್ಲಿ ದೆಹಲಿಯ ನೀರಿನಲ್ಲಿರುವ ಬ್ಯಾಕ್ಟೀರಿಯಾಗಳಲ್ಲಿನ ಜೀನ್‌ಅನ್ನು ಎನ್.ಡಿ.ಎಮ್.-೧ ಎಂದು ನವದೆಹಲಿಯ ಹೆಸರಿನಲ್ಲಿ ಹೆಸರಿಸಿದ್ದು ಭಾರತದ ಆರೋಗ್ಯ ಅಧಿಕಾರಿಗಳಿಗೆ, ಆಡಳಿತಗಾರರಿಗೆ ತೀವ್ರ ಕಳವಳ ಉಂಟುಮಾಡಿತು. ಅವರು ತೀವ್ರ ರೀತಿಯಲ್ಲಿ ವಿರೋಧವನ್ನು ತೋರಿಸಿದರು. ಆದರೆ ಈ ರೀತಿ ಈ ಜೀನ್‌ಗೆ ಹೆಸರು ಕೊಟ್ಟ ವಿಜ್ಞಾನಿಗಳು, ಹೊಸದಾಗಿ ಆವಿಷ್ಕಾರವಾದ ಕಾಯಿಲೆ, ಎನ್‌ಜೈಮ್, ಜೀನ್, ಸೂಕ್ಷ್ಮಜೀವಿ – ಈ ಎಲ್ಲವುಗಳನ್ನು ಮೊದಲು ಕಂಡುಬಂದ ಊರಿನ ಹೆಸರನ್ನು ಸೇರಿಸಿ ಹೆಸರಿಸುವುದು ಇದೇ ಮೊದಲಲ್ಲ, ಹಿಂದಿನ ಹಲವು ಉದಾಹರಣೆಗಳಿವೆ ಎಂದು ಸ್ಪಷ್ಟೀಕರಿಸಿದರು. ಇಟಲಿಯ ನಗರ ವೆರೋನಾದಲ್ಲಿ ಕಂಡುಬಂದ ಎಂಜೈಮ್‌ಗೆ 'ವೆರೋನಾ ಇಮಿನೆನೆಮೇಸ್' ಎಂದು ಹೆಸರಿಸಲಾಗಿದೆ. ೨೦೦೧ರಲ್ಲಿ ಬ್ರೆಜಿಲ್‌ನ ಸಾಒ ಪಾಲೋ ನಗರದಲ್ಲಿ ಮೊದಲ ಬಾರಿಗೆ ಕಂಡುಬಂದ ಔಷಧಗಳಿಗೆ ಬಗ್ಗದ ಮತ್ತೊಂದು ಬ್ಯಾಕ್ಟೀರಿಯಾದ ಜೀನ್‌ಅನ್ನು 'ಸಾ ಪಾಲೋ ಬೀಟಾ ಲಾಕ್ಟಮೇಸ್' ಎಂದು ಕರೆಯಲಾಯಿತು. ಹಾಗೆಯೇ ಇನ್ನಿತರ ಉದಾಹರಣೆಗಳೆಂದರೆ, ಸೋಲ್ ಇಮಿನೆನೆಮೇಸ್, ಜರ್ಮನಿ ಇಮಿನೆನೆಮೇಸ್, ಡಚ್ ಇಮಿನೆನೆಮೇಸ್, ಅಮೆರಿಕಾದಲ್ಲಿ ಕಂಡುಬಂದ ಎಂ.ಆರ್.ಎಸ್.ಎ. ಸ್ಟ್ರೇನ್‌ಗೆ, ಯು.ಎಸ್.ಎ.-೩೦೦, ಸ್ಪೇನನಲ್ಲಿನ ಔಷಧಕ್ಕೆ ಬಗ್ಗದ ಸ್ಟ್ರೆಪ್ಟೋನ್ಯೂಮೋನಿಯಾದ ಬ್ಯಾಕ್ಟೀರಿಯಾಗೆ ಸ್ಪೇನ್ ೨೩ ಎಫ್, ಸ್ವೀಡನ್ನಿನಲ್ಲಿ ಸ್ವೀಡನ್ ೧೫ಎ-೨೫... ಹೀಗೆ ಹೆಸರಿಸಲಾಗಿದೆ. ಭಾರತದಲ್ಲಿ ೧೯೯೨ರಲ್ಲಿ ಕಾಲರಾಗೆ ಕಾರಣವಾದ ಬ್ಯಾಕ್ಟೀರಿಯಾಗೆ 'ವಿಬ್ರಿಯೋ ಕಾಲರಾ-೧೩೯ ಬೆಂಗಾಲ್' ಎಂದು ಹೆಸರು ಕೊಡಲಾಗಿದೆ.

ಬ್ರಿಟಿಷ್ ವಿಜ್ಞಾನಿಗಳು ನಡೆಸಿದ ಈ ಅಧ್ಯಯನದ ನಂತರ ಭಾರತದಲ್ಲಿ ವಿಭಿನ್ನ ಪ್ರತಿಕ್ರಿಯೆಗಳು ಪ್ರಕಟವಾದುವು. ಅಮೆರಿಕಾ ಮತ್ತು ಇಂಗ್ಲೆಂಡುಗಳ ಚರಂಡಿ ನೀರಿನಲ್ಲಿ 'ಸೂಪರ್‌ಬಗ್'ಗಳಿವೆಯೇ ಎಂಬುದರ ಬಗೆಗೆ ಪರೀಕ್ಷೆ ನಡೆಯಬೇಕು ಎಂದು ಭಾರತೀಯ ವೈದ್ಯಕೀಯ ಸಂಸ್ಥೆ ಹೇಳಿಕೆ ನೀಡಿತು. ''ನಮ್ಮ ದೇಶದ ನೀರನ್ನು ನಮ್ಮ ಅನುಮತಿ ಇಲ್ಲದೆ ವಿದೇಶಕ್ಕೆ ಸಾಗಿಸಿ ನಡೆಸಿದ ಈ ಸಂಶೋಧನೆ ಅಧ್ಯಯನ ಕಾನೂನುಬಾಹಿರ. ಹಾಗಾಗಿ ಇದನ್ನು ನಾವು ಒಪ್ಪಬೇಕಿಲ್ಲ'' ಎಂದು ಕೇಂದ್ರ ಆರೋಗ್ಯ ಸಚಿವಾಲಯ ಅಭಿಪ್ರಾಯಪಟ್ಟಿತು. ''೨-೩ ಬಿಲಿಯನ್ ಕೋಟಿ ಡಾಲರ್‌ಗಳಷ್ಟು ವಹಿವಾಟು ಹೊಂದಿರುವ ನಮ್ಮ ದೇಶದ ವೈದ್ಯಕೀಯ ಪ್ರವಾಸೋದ್ಯಮಕ್ಕೆ ಹೊಡೆತ ಕೊಡಲೆಂದೇ ಈ ಅಧ್ಯಯನ ಕೈಗೊಳ್ಳಲಾಗಿದೆ. ಇದು ಪಶ್ಚಿಮದವರ ಹುನ್ನಾರ'' ಎಂದು ಕೆಲವು ಸಂಘಟನೆಗಳು ಬೇಜವಾಬ್ದಾರಿ ಹೇಳಿಕೆ ನೀಡಿದವು. ಆದರೆ ವಿಶ್ವ ಆರೋಗ್ಯ ಸಂಸ್ಥೆ ಈ ಅಧ್ಯಯನವನ್ನು ತತ್ವಶಃ ಒಪ್ಪಿದೆ.

ವಿಶ್ವ ಆರೋಗ್ಯ ಸಂಸ್ಥೆಯಲ್ಲಿ ಪ್ರತಿಯೊಂದು ದೇಶದ ಬಗೆಗೂ ಆ ದೇಶದ ಋಣಾತ್ಮಕ ಅಂಶಗಳೇನು, ಯಾವ್ಯಾವ ರಂಗದಲ್ಲಿ ಅದು ಇನ್ನೂ ಪ್ರಗತಿ ಸಾಧಿಸಬೇಕು ಎಂಬುದರ ಬಗೆಗೆ ನಿಖರ ಮಾಹಿತಿ ದಾಖಲಾಗಿದೆ. ಶುದ್ಧ ಕುಡಿಯುವ ನೀರನ್ನು ಸಮರ್ಪಕವಾಗಿ ಒದಗಿಸದಿರುವುದು, ಮಲ, ಮೂತ್ರ ಮತ್ತು ಕಸಕಡ್ಡಿಗಳನ್ನು ವ್ಯವಸ್ಥಿತ ರೀತಿಯಲ್ಲಿ ವಿಲೇವಾರಿ ಮಾಡದಿರುವುದು, ಜನ ವಾಸಿಸುವ ಮನೆಯೊಳಗಿನ ಗಾಳಿ ಶುದ್ಧವಾಗಿಲ್ಲದೆ ಇರುವುದು, ಕೀಟ ಮತ್ತು ಕ್ರಿಮಿಗಳಿಂದ ಹರಡುವ ಕಾಯಿಲೆಗಳನ್ನು ಸೂಕ್ತ

## ವಿಪರ್ಯಾಸ

ಈ ದೇಶದಲ್ಲಿ
ಬಡತನ, ಅನ್ನ, ಹಸಿವು
ದಾರಿದ್ರ್ಯದ ಬಗೆಗೆ
ಸಿನಿಮಾ – ಗಿನಿಮಾ ತೆಗೆದರೆ
ಅವಾರ್ಡ್ ಕೊಡುತ್ತಾರೆ.
ಅದೇ ಬಡತನ, ಅನ್ನ, ಹಸಿವು
ನೀಗಿಸಲು ಹೋರಾಟ ಮಾಡಿದರೆ
ಬೂಟಿನೇಟಿನಿಂದ ಒದ್ದು
ಲಾಕಪ್ಪಿಗಾಕುತ್ತಾರೆ.

ದ್ವಾರನಕುಂಟೆಪಾತಣ್ಣ

ರೀತಿಯಲ್ಲಿ ನಿಯಂತ್ರಿಸದೆ ಇರುವುದು – ಇವು ಆ ಸಂಸ್ಥೆ ಭಾರತದ ಬಗೆಗೆ ಪಟ್ಟಿಮಾಡಿರುವ, ಭಾರತ ಪ್ರಗತಿ ಸಾಧಿಸಬೇಕಾದ ಮುಖ್ಯ ವಿಷಯಗಳು. ನಗರ ಪ್ರದೇಶಗಳ ಕೊಳಚೆ ನಿರ್ಮೂಲನೆ, ಶುದ್ಧ ಕುಡಿಯುವ ನೀರಿನ ಪೂರೈಕೆ... ಹೀಗೆ ೬ ಆದ್ಯತಾ ವಲಯಗಳನ್ನು ಭಾರತ ಸರ್ಕಾರ ಗುರುತಿಸಿದೆ. ಆದರೆ ಈ ಕಾರ್ಯಕ್ರಮಗಳ ನಿರ್ವಹಣೆ ಸಮರ್ಪಕವಾಗಿ ನಡೆಯುತ್ತಿಲ್ಲ. ಜೊತೆಗೆ ಹೀಗೆ ನಿರ್ವಹಿಸಲು ತೀರ ಅಗತ್ಯವಾಗಿ ಬೇಕಾದ ಕಾನೂನು ಸಹ ಭಾರತದಲ್ಲಿಲ್ಲ ಎಂದು ವಿಶ್ವ ಆರೋಗ್ಯ ಸಂಸ್ಥೆ ಅಭಿಪ್ರಾಯಪಟ್ಟಿದೆ.

೬೫ ಕೋಟಿ ಭಾರತೀಯರಿಗೆ ಸೂಕ್ತ ಶೌಚಾಲಯದ ವ್ಯವಸ್ಥೆ ಇಲ್ಲ, ಇನ್ನೂ ಹೆಚ್ಚಿನ ನಾಗರಿಕರಿಗೆ ಶುದ್ಧ ಕುಡಿಯುವ ನೀರು ಲಭ್ಯವಿಲ್ಲ ಎಂದು ವಿಶ್ವಸಂಸ್ಥೆಯ ಇನ್ನೊಂದು ವರದಿ ತಿಳಿಸುತ್ತದೆ. ದೆಹಲಿಯ ಒಳಚರಂಡಿ ವ್ಯವಸ್ಥೆ ತುಂಬ ದುಸ್ಥಿತಿಯಲ್ಲಿದೆ; ಬೇಸಿಗೆ ಕಾಲದಲ್ಲಿ ಉಂಟಾಗುವ ತೀವ್ರ ರೀತಿಯ ತಾಪಮಾನ, ಮಳೆಗಾಲದಲ್ಲಿ ನೀರೆಲ್ಲಾ ತುಂಬಿಕೊಂಡು ಚರಂಡಿ ಕಟ್ಟಿಕೊಳ್ಳುವುದು, ಇವುಗಳಿಂದ ಎನ್.ಡಿ.ಎಮ್-೧ ವಂಶವಾಹಿ ಹೊಂದಿರುವ ಬ್ಯಾಕ್ಟೀರಿಯಾಗಳು ತೀವ್ರ ಪ್ರಮಾಣದಲ್ಲಿ ಹರಡಿ ಜನರ ಆರೋಗ್ಯಕ್ಕೆ ಮಾರಕವಾಗುತ್ತವೆ ಎಂಬುದು ವಿಜ್ಞಾನಿಗಳ ಅಂಬೋಣ. ದೇಶದ ಇತರ ನಗರಗಳ ಪರಿಸ್ಥಿತಿ ಇದಕ್ಕಿಂತ ಭಿನ್ನವಾಗೇನಿಲ್ಲ.

ಈ ಎಲ್ಲ ಹೊರಗಿನ ಒತ್ತಡಗಳಿಗೆ ಮಣಿದು ನಮ್ಮ ಕೇಂದ್ರ ಸರ್ಕಾರ ಆಂಟಿಬಯಾಟಿಕ್ ಔಷಧಗಳು ಸರಿಯಾದ ರೀತಿಯಲ್ಲಿ ಉಪಯೋಗವಾಗಲೆಂದು ಒಂದು ಪ್ರತ್ಯೇಕವಾದ 'ನೀತಿ' ಅಥವಾ 'ಯೋಜನೆ'ಯನ್ನು ರೂಪಿಸುವ ಹಂತದಲ್ಲಿದೆ. ಗಮನಿಸಬೇಕಾದ ಇನ್ನೊಂದು ವಿಚಾರವೆಂದರೆ ೨೦೧೧-೧೨ರ ಸಾಲಿನ ನಮ್ಮ ಮುಂಗಡಪತ್ರದಲ್ಲಿ ಆರೋಗ್ಯಕ್ಕಾಗಿ ಮೀಸಲಿಡುವ ಹಣವನ್ನು ಶೇಕಡ ೨೦ರಷ್ಟು ಹೆಚ್ಚಿಸಲಾಗಿದೆ. ಆದರೂ ಇದು ಈ ವಿಭಾಗಕ್ಕೆ ಖರ್ಚುಮಾಡುತ್ತಿರುವ ದೇಶದ ಜಿ.ಡಿ.ಪಿ.ಯ ಶೇಕಡ ೨ರಷ್ಟು ಮಾತ್ರ. ಅದೇ ಯುರೋಪ್‌ನ ದೇಶಗಳಲ್ಲಿ ಶೇಕಡ ೯-೧೧ರಷ್ಟು ಖರ್ಚು ಮಾಡುತ್ತಾರೆ. (ಈ ಅಗಾಧ ಪ್ರಮಾಣದ ವ್ಯತ್ಯಾಸವನ್ನು ಗಮನಿಸಿ)

ಐಟಿ ಬಿಟಿಯ ರಂಗಗಳಲ್ಲಿ ಅಗಾಧ ಪ್ರಮಾಣದ ಪ್ರಗತಿ ಹೊಂದುತ್ತಿರುವ ಭಾರತ ಇತ್ತೀಚಿನ ವರ್ಷಗಳಲ್ಲಿ ವೈದ್ಯಕೀಯ, ಪ್ರವಾಸೋದ್ಯಮಗಳಲ್ಲಿ ಗಮನಾರ್ಹವಾದ ಹೆಚ್ಚಳ ಸಾಧಿಸಿದೆ. ತಮ್ಮ ದೇಶಗಳಿಗಿಂತ ಕಡಿಮೆ ವೆಚ್ಚದ ಶಸ್ತ್ರಕ್ರಿಯೆ, ಚಿಕಿತ್ಸೆಗಳು ದೇಶದ ಹಲವೆಡೆ ಲಭ್ಯವಾಗುತ್ತವೆಂದು ಸಾವಿರಾರು ವಿದೇಶಿ ರೋಗಿಗಳೂ ನಮ್ಮಲ್ಲಿಗೆ ಲಗ್ಗೆ ಇಡುತ್ತಾರೆ. ಈ ದಿಸೆಯಲ್ಲಿ 'ವೈದ್ಯಕೀಯ ಪ್ರವಾಸೋದ್ಯಮ' ಒಂದು ಕೈಗಾರಿಕೆಯ ರೀತಿಯಲ್ಲಿ ತನ್ನದೇ ಆದ ಬೆಳವಣಿಗೆ ಕಂಡುಕೊಂಡಿದೆ. ಉಳ್ಳವರ, ಶ್ರೀಮಂತರ ಚಿಕಿತ್ಸೆಗೆ ಉತ್ತಮ ಹೈಟೆಕ್ ಆಸ್ಪತ್ರೆಗಳು ಒಂದು ಕಡೆ ತೀವ್ರವಾಗಿ ಬೆಳೆಯುತ್ತಿದ್ದರೆ, ಸಾಮಾನ್ಯ ಜನರ ಆರೋಗ್ಯಕ್ಕೆ ಬೇಕಾದ ಶುದ್ಧ ಕುಡಿಯುವ ನೀರು, ಚರಂಡಿ ವ್ಯವಸ್ಥೆ ಮೊದಲಾದುವು ಹೆಚ್ಚಿನ ನಮ್ಮ ನಗರ, ಪಟ್ಟಣಗಳಲ್ಲಿ ತುಂಬ ಕೀಳುಮಟ್ಟದಲ್ಲಿವೆ ಎಂಬುದು ವಾಸ್ತವ. ಆದರೆ ಬ್ರಿಟಿಷ್ ವಿಜ್ಞಾನಿಗಳು ಈ ಸೂಪರ್‌ಬಗ್ ಬಗೆಗಿನ ಅಧ್ಯಯನ, ವಿಶ್ವಸಂಸ್ಥೆ, ವಿಶ್ವ ಆರೋಗ್ಯ ಸಂಸ್ಥೆಗಳ ಹಲವು ವರದಿಗಳು ಈ ಪ್ರಗತಿಯನ್ನು ಕುಂಠಿಸಬಲ್ಲವೇ ಎಂಬ ಸಂಶಯ ಬಂದರೆ ಆಶ್ಚರ್ಯವಿಲ್ಲ.

**ಡಾ॥ ಎಚ್. ಎಸ್. ಮೋಹನ್**
ವಿಜಯ ಕಣ್ಣಿನ ಚಿಕಿತ್ಸಾಲಯ, ಸಾಗರ - ೫೭೭ ೪೦೧
ಶಿವಮೊಗ್ಗ ಜಿಲ್ಲೆ

# ನನ್ನೊಳಗಿನ ಮಳೆಯೇ



ಅರಿಯದ ಯಾವುದೋ ಖಂಡದಿಂದ
ಬೀಸಿ ಬಂದ ಕಪ್ಪು ಚಳಿಯಂತೆ
ಸೇರಿಕೊಂಡಿತು ನಮ್ಮೊಳಗೆ ಒಂದು ರಾತ್ರಿ

ನೋವಿನ ಕುದಿಪಾಕವೋ ಬೇಗುದಿಯ
ಕೊನೆ ಬಿಂದುವೋ ಕಟ್ಟಿದುದನೆ ಕೆಡವಿ ನಡೆವ
ಪ್ರಾಣಿಯ ಪದಗತಿಯೋ

ಎಲ್ಲ ಮೌನವನು ಎಲ್ಲ ಬೆಳಕನು
ಕತ್ತರಿಸಿ ಒಗೆವ ಇಬ್ಬಂದಿ ಸೆಳೆತ

ಸವಿಗಾಳಿಯೊಂದು ನಮ್ಮನ್ನು
ಒಂದಾಗಿ ಬೆಸೆದಿದ್ದ ವೇಳೆಯೇ
ಕೊಚ್ಚಿ ಕೆಡವಿತು
ಜಗದೊಡಲ ಸಕಲ ಸಂಭ್ರಮಗಳನೂ
ಸಾವಿರ ವರ್ಷ ಸುರಿದ ಹಿಮದ ಕಣ್ಣಿನ ಮಳೆ

ಪ್ರಕ್ಷುಬ್ಧ ಅಲೆಗಳ ನಡುವೆ
ನಡೆದು ಹೋದೆ ನೀನು

ಮುರಿದು ಬಿದ್ದ ನಾವೆಯ ಚೀತ್ಕಾರದಂತೆ
ಮರೆಯಾದೆ ಮೋಡದ ದಟ್ಟಣೆಯಲ್ಲಿ
ಬೆಂಕಿ ಬುಗುರಿಯಾಗಿ ನನ್ನಿದಿರೇ

ಮತ್ತೀಗ ಅದೇ ಮಳೆ
ಉರಿದ ಒಡಲ ಕರಕಲಾದ ಬೆಳದಿಂಗಳ
ಬತ್ತಿದ ನದಿ ತಟಗಳ ಬಿರುಕುಬಿಟ್ಟ
ಬೆಟ್ಟ ಸಾಲುಗಳ ಸೀದುಹೋದ
ಹೊಲ ಬಯಲುಗಳ
ಅಖಂಡವಾಗಿ ಬೆಸೆಯುತ್ತಿರುವ ಸದ್ದು

ಅಗ್ನಿಯ ಆವೇಶವಿಲ್ಲ
ಬಿರುಗಾಳಿಯ ಆರ್ತತೆಯಿಲ್ಲ
ಮಳೆ ಮಿಂದ ಹಕ್ಕಿ ಹಾಡು ನೀನು
ಸೀಳಲಾರೆಯ ಈ ನಿರ್ಜೀವ ಕತ್ತಲನ್ನು

ಹೇಗೆ ದಾಟಲಿ ಹೇಳು, ಈ ಅಗ್ನಿದಿವ್ಯವ
ನನ್ನೊಳಗಿನ ಮಳೆಯೇ

**ವಸಂತ ಬನ್ನಾಡಿ**
'ತಿಂಗಳ ಬೆಳಕು', ವಿಠಲವಾಡಿ, ವಡೇರ ಹೋಬಳಿ
ಕುಂದಾಪುರ - ೫೭೬ ೨೦೧



# ಉಪದೇಶ, ಉಪಕಾರ, ಉಪಚಾರ

ಉಪದೇಶ ಮಾಡುವುದು, ಉಪಕಾರ ಮಾಡುವುದು, ಉಪಚಾರ ಮಾಡುವುದು, ಈ ಮೂರು ಶಬ್ದಗಳಲ್ಲಿ ಕಂಡುಬರುವ ಪ್ರಕ್ರಿಯೆಗೆ ಒಂದೇ ಅರ್ಥ, ಒಂದೇ ಆಶಯವಿರುತ್ತದೆ. ಆದರೆ ಉಪದೇಶ, ಉಪಕಾರ, ಉಪಚಾರ ಮಾಡುವ ವ್ಯಕ್ತಿಗಳಲ್ಲಿ ನಿಸ್ವಾರ್ಥ ಹಾಗೂ ಪವಿತ್ರ ಭಾವನೆ ಇದ್ದರೆ ಆ ಕಾರ್ಯಗಳಿಗೆ ಸಾರ್ಥಕತೆ ಬರುತ್ತದೆ. ಅವುಗಳನ್ನು ಪಡೆದಂತಹ ವ್ಯಕ್ತಿಯೂ ಧನ್ಯತಾ ಭಾವನೆಯಿಂದ ಅವರನ್ನು ಕೊನೆಯವರೆಗೂ ಸ್ಮರಿಸಿಕೊಳ್ಳುತ್ತಾನೆ.

ಉಪದೇಶವು ನಮಗೆ ಹುಟ್ಟಿನಿಂದ ಸಾಯುವವರೆಗೂ ಧಾರಾಳವಾಗಿ ದೊರೆಯುತ್ತಲೇ ಇರುತ್ತದೆ. ನಮ್ಮ ಸುತ್ತಲೂ ಉಪದೇಶ ಮಾಡುವವರ ಪಡೆಯೇ ನಿರ್ಮಾಣವಾಗಿರುತ್ತದೆ. ಎದ್ದ ಕ್ಷಣದಿಂದ ಹಿಡಿದು ನಿದ್ರೆಗೆ ಜಾರುವವರೆಗೆ ನಮ್ಮ ಕಿವಿಗಳು ಉಪದೇಶದಿಂದ ತುಂಬಿ ತುಳುಕುತ್ತವೆ. ಈ ಉಪದೇಶವೆಂಬ ಅಮಲು ಯಾರನ್ನೂ ಬಿಟ್ಟಿಲ್ಲ. ಉಪದೇಶವನ್ನು ಇತರರಿಗೆ ಕೊಡುತ್ತೇವೆ. ಬೇರೆ ಉಪದೇಶ ಇತರರಿಂದ ಪಡೆಯುತ್ತೇವೆ.

ಉಪದೇಶ ನೀಡುವವರ ನಡೆನುಡಿಗಳು ಒಂದಾಗಿದ್ದರೆ ಮಾತ್ರ ಉಪದೇಶ ಪಡೆವವರು ಅವರ ಉಪದೇಶಗಳನ್ನು ಮೆಚ್ಚಿಕೊಳ್ಳುತ್ತಾರೆ. ಹೇಳುವ ನುಡಿಯೊಂದು, ನಡೆಯುವ ಪರಿಯೊಂದು ಆದರೆ ಅವರ ಉಪದೇಶಕ್ಕೆ ಬೆಲೆ ಇರುವುದಿಲ್ಲ. ಅದಕ್ಕಾಗಿ ಬಸವಣ್ಣನವರು ತಮ್ಮ ಒಂದು ವಚನದಲ್ಲಿ ಹೇಳುತ್ತಾರೆ :

ಎನ್ನ ನಡೆಯೊಂದು ಪರಿ
ಎನ್ನ ನುಡಿಯೊಂದು ಪರಿ
ಎನ್ನೊಳಗೇನು ಶುದ್ಧವಿಲ್ಲ ನೋಡಯ್ಯ
ನುಡಿಯ ತಕ್ಕ ನಡೆಯ ಕಂಡರೆ
ಕೂಡಲ ಸಂಗಮದೇವ ತನ್ನೊಳಗಿರ್ಪನು.

ಆದುದರಿಂದ ಉಪದೇಶ ಮಾಡುವ ಗುರುಗಳು, ಹಿರಿಯರು, ಸಂತರು ತಮ್ಮ ನಡೆನುಡಿ ಒಂದಾಗಿದ್ದರೆ ಮಾತ್ರ ಉಪದೇಶಕ್ಕೆ ಕೈ ಹಾಕಬೇಕು. ಉಪದೇಶ ಮಾಡುವುದು ಭಾವನಾತ್ಮಕ ಕಾರ್ಯವಾದರೆ ಉಪಕಾರ ಮಾಡುವುದು ನೇರವಾದ ನೈಜವಾದ ಉಪಯುಕ್ತ ಕಾರ್ಯವಾಗಿದೆ. ನಮ್ಮ ಬಂಧುಬಾಂಧವರಾಗಲಿ, ಗೆಳೆಯರಾಗಲಿ, ನೆರೆಹೊರೆಯಲ್ಲಿ ಇದ್ದವರಾಗಲಿ, ಸಂಕಟಕ್ಕೆ ಸಿಕ್ಕ ಅಪರಿಚಿತರಾಗಲಿ, ತೊಂದರೆಯಲ್ಲಿದ್ದಾಗ ಸಹಾಯ ಸಹಕಾರ ನೀಡಿ ಅವರನ್ನು ಸಂಕಟದಿಂದ ಮುಕ್ತರನ್ನಾಗಿ ಮಾಡುವುದೇ ಉಪಕಾರ.

ಉಪಕಾರ ಪಡೆದ ವ್ಯಕ್ತಿಗಳು ಧೈನ್ಯತಾ ಭಾವನೆಯಿಂದ ಉಪಕಾರ ಸ್ಮರಣೆ ಮಾಡಿದಾಗ ಉಪಕಾರ ಮಾಡಿದವರಿಗೂ ಸಂತೃಪ್ತಿಯಾಗಿ ನಿಸ್ವಾರ್ಥ ಮನಸ್ಸಿನಿಂದ ಎಲ್ಲಾ ಆ ದೇವನದು ಎಂದು ಹೇಳಿ ವಿನಯ ಮೆರೆಯುತ್ತಾರೆ. ಇಂಥವರು ಪ್ರತ್ಯುಪಕಾರ ಬಯಸುವುದಿಲ್ಲ. ಉಪಕಾರ ಮಾಡಿದ್ದನ್ನು ಹೇಳಿಕೊಳ್ಳುವುದಿಲ್ಲ. ಆದರೆ ಕೆಲವರು ಪ್ರತ್ಯುಪಕಾರಕ್ಕೆ ಹಾದಿ ಕಾಯುತ್ತಾರೆ. ಉಪಕಾರ ಮಾಡಿದ್ದನ್ನು ಪ್ರಚಾರ ಮಾಡಿಕೊಳ್ಳುತ್ತಾರೆ. ಅಂಥವರನ್ನು ಬಸವಣ್ಣನವರು ಛೇಡಿಸುವುದು ಹೀಗೆ :

ಮಾಡಿ ಮಾಡಿ ಕೆಟ್ಟರೊ ಮನವಿಲ್ಲದೆ
ನೀಡಿ ನೀಡಿ ಕೆಟ್ಟರೊ ನಿಜವಿಲ್ಲದೆ
ಮಾಡುವ ನೀಡುವ ನಿಜಗುಣವುಳ್ಳವರ
ಕೂಡಿಕೊಂಬ ನಮ್ಮ ಕೂಡಲ ಸಂಗಮದೇವ.

ಇದೇ ಅರ್ಥದಲ್ಲಿ ಪೈಗಂಬರರು ಹೇಳುತ್ತಾರೆ, ''ಬಲಗೈ ನೀಡಿದ್ದು ಎಡಗೈಗೆ ತಿಳಿಯಬಾರದು.'' ಬೈಬಲ್ಲಿನದೂ ಅದೇ ಮಾತು.

ಉಪದೇಶ ಮತ್ತು ಉಪಕಾರಗಳಿಗಿಂತ ಪ್ರತ್ಯಕ್ಷವಾಗಿ, ನೇರವಾಗಿ ಸಂಪರ್ಕದಲ್ಲಿದ್ದು ವೃದ್ಧ ತಂದೆ ತಾಯಿಗಳಿಗೆ, ರೋಗಿಗಳಿಗೆ, ಅಶಕ್ತರಿಗೆ, ಮನೆಗೆ ಬಂದ ಅತಿಥಿಗಳಿಗೆ ಪ್ರೀತಿಯಿಂದ ಉಣಿಸು, ತಿನಿಸು ಕೊಟ್ಟು ಜೋಪಾನದಿಂದ ಕಾಳಜಿ ಮಾಡುವುದೇ ಉಪಚಾರ. ಉಪಚಾರ ಪಡೆವವರು ಉಪಚಾರ ಮಾಡುವವರ ಹತ್ತಿರವೇ ಇರುತ್ತಾರೆ. ಇವರ ಉಪಚಾರದಿಂದಲೆ ಅವರು ಸಂತುಷ್ಟರಾಗುತ್ತಾರೆ. ನಿಜವಾಗಿಯೂ ಉಪದೇಶ ಉಪಕಾರಗಳಿಗಿಂತಲೂ ಉಪಚಾರ ಮಾಡುವದು ಸಹನಾಪೂರ್ಣ ಸೇವಾಕಾರ್ಯವಾಗಿರುತ್ತದೆ.

ನನಗೆ ಗೊತ್ತಿರುವ ಒಬ್ಬ ವ್ಯಕ್ತಿಗೆ ಎರಡೂ ಕಡೆ ಪಾರ್ಶ್ವವಾಯು ಬಡಿದು ಅವರು ಸಂಪೂರ್ಣ ನಿಶ್ಚೇಷ್ಟಿತರಾಗಿ ಅಲುಗಾಡಲಿಕ್ಕೆ ಬಾರದಂತೆ ಮಲಗಿದರು. ಅವರು ಮರಣಿಸುವ ತನಕ ಏಳುವರ್ಷ ಅವರ ಮಗ ಮತ್ತು ಸೊಸೆ ಉಪಚಾರ ಮಾಡಿದರು. ಇದು ನಿಜವಾದ ಉಪಚಾರ.

ನೈಜವಾದ ಪ್ರೀತಿಯಿಂದ, ಸೇವೆ ಮಾಡುವ ಉಪಚಾರದಿಂದ ಉಪಚಾರ ಪಡೆವವರು ನೆನೆಸಿಕೊಳ್ಳುತ್ತಾರೆ. ಜನರೂ ಮೆಚ್ಚಿಕೊಳ್ಳುತ್ತಾರೆ. ತೋರಿಕೆಯ ಉಪಚಾರದಿಂದ ಸಂಬಂಧಗಳು ಬಿರುಕುಬಿಡುತ್ತವೆ. ಅದರ ಪ್ರತೀಕಾರ ಎದುರಿಸಬೇಕಾಗುತ್ತದೆ. ಒಟ್ಟಿನಲ್ಲಿ ಉಪದೇಶ, ಉಪಕಾರ, ಉಪಚಾರಗಳು ನಿಸ್ವಾರ್ಥವಾಗಿ ಇರಬೇಕು. ನೈಜವಾಗಿರಬೇಕು. ಅವುಗಳಿಗೆ ಸದಾ ಗೌರವ ಇರುತ್ತದೆ.

**ಎಂ. ಡಿ. ಗೋಗೇರಿ**
ನವ ಅಯೋಧ್ಯಾನಗರ, ಹುಬ್ಬಳ್ಳಿ - ೫೮೦ ೦೨೪




ಪುಟ : 424  ಬೆಲೆ : ₹250




ಪುಟ : 24  ಬೆಲೆ : ₹15




ಪುಟ : 88  ಬೆಲೆ : ₹60




ಪುಟ : 152  ಬೆಲೆ : ₹90

## ಕರ್ನಾಟಕ ಸಾಹಿತ್ಯ ಅಕಾಡೆಮಿ ಸಹಯೋಗದೊಂದಿಗೆ

## ರವೀಂದ್ರನಾಥ ಠಾಕೂರರ ಶತಮಾನೋತ್ತರ ಸ್ವರ್ಣ ಜಯಂತಿ-2011

**ನವಕರ್ನಾಟಕ ಪ್ರಕಾಶನದ 4 ಕೃತಿಗಳ ಲೋಕಾರ್ಪಣೆ**

**ವಿಚಾರಗೋಷ್ಠಿ ಮತ್ತು ಸಾಂಸ್ಕೃತಿಕ ಕಾರ್ಯಕ್ರಮ**



ದಿನಾಂಕ 21 ಆಗಸ್ಟ್ 2011, ಭಾನುವಾರ, ಬೆಳಗ್ಗೆ 10ರಿಂದ ಮಧ್ಯಾಹ್ನ 1.30

ನಯನ ಸಭಾಂಗಣ, ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು - 560 002

ಬೆಳಗ್ಗೆ 10ರಿಂದ 11.3ರವರೆಗೆ

**ನಾಲ್ಕು ಕೃತಿಗಳ ಲೋಕಾರ್ಪಣೆ**

ಅಧ್ಯಕ್ಷತೆ - ಕೃತಿಗಳ ಅನಾವರಣ

ಡಾ|| ಜಿ. ರಾಮಕೃಷ್ಣ

ಕನ್ನಡ ಸಾಹಿತ್ಯದಲ್ಲಿ ರವೀಂದ್ರನಾಥ ಠಾಕೂರ್ ಅವರ ಕೃತಿಗಳ ಪ್ರಭಾವ ಕುರಿತು ಉಪನ್ಯಾಸ

ಡಾ|| ಪ್ರಧಾನ್ ಗುರುದತ್ತ

ರವೀಂದ್ರನಾಥ ಠಾಕೂರರ 1100 ಕವಿತೆಗಳನ್ನು ಕನ್ನಡಕ್ಕೆ ಅನುವಾದಿಸಿದ

ಶ್ರೀ ಜಿ. ರಾಮನಾಥ ಭಟ್

ಅವರಿಗೆ ಸನ್ಮಾನ

ಬೆಳಗ್ಗೆ 11.30ರಿಂದ 12ರವರೆಗೆ

**ಗೀತಾಂಜಲಿ ನೃತ್ಯರೂಪಕ**

ಮಧ್ಯಾಹ್ನ 12ರಿಂದ 1.30ರವರೆಗೆ

**ವಿಚಾರಗೋಷ್ಠಿ**

ಅಧ್ಯಕ್ಷತೆ

ಶ್ರೀ ಜಿ. ರಾಮನಾಥ ಭಟ್

ಪ್ರಬಂಧ ಮಂಡನೆ

(1) ಕನ್ನಡದಲ್ಲಿ ಠಾಕೂರ್ ಅವರ ಕೃತಿಗಳು

ಡಾ|| ಕೆ. ಸಿ. ಶಿವಾರೆಡ್ಡಿ

(2) ರವೀಂದ್ರ ಸಂಗೀತ

ಡಾ|| ಮೀರಾ ಚಕ್ರವರ್ತಿ

(3) ಶಾಂತಿ ನಿಕೇತನದ ಕಲಾ ಪರಂಪರೆ

ಶ್ರೀ ಎಚ್. ಎ. ಅನಿಲ್‌ಕುಮಾರ್

ರವೀಂದ್ರ ಕಾವ್ಯಗಾನ : ಶ್ರೀ ಸೋಮನಾಥ ದತ್ತ, ಶ್ರೀಮತಿ ಅಲೋಕ ದತ್ತ, ಶ್ರೀಮತಿ ಮೀರಾ ಚಕ್ರವರ್ತಿ

ರವೀಂದ್ರನಾಥ ಠಾಕೂರರ ಕೃತಿಗಳ ಕನ್ನಡ ಮತ್ತು ಇಂಗ್ಲಿಷ್ ಆವೃತ್ತಿಗಳ ಪ್ರದರ್ಶನ ಮತ್ತು ಮಾರಾಟ

ಠಾಕೂರರ ಎಲ್ಲ ಕನ್ನಡ ಅನುವಾದಿತ ಕೃತಿಗಳ ಪ್ರದರ್ಶನ

ಸೌಜನ್ಯ : ಡಾ|| ಕೆ. ಸಿ. ಶಿವಾರೆಡ್ಡಿ

ರವೀಂದ್ರರ ಕುರಿತ ಛಾಯಾಚಿತ್ರಗಳ ಪ್ರದರ್ಶನ

ಸೌಜನ್ಯ : ಡಾ|| ಲೀಲಾ ಅಪ್ಪಾಜಿ

ಸಾಂಸ್ಕೃತಿಕ ಕಾರ್ಯಕ್ರಮ ಗೀತಾಂಜಲಿ ನೃತ್ಯರೂಪಕ ವಿಶ್ರುತ ಪ್ರದರ್ಶನ ಕಲಾಶಾಲೆಯ ವಿದ್ಯಾರ್ಥಿಗಳಿಂದ

ನಿರ್ದೇಶನ : ಗುರು ಬಿ. ಕೆ. ವಸಂತಲಕ್ಷ್ಮಿ ಮತ್ತು ವಿದ್ಯಾ ವೆಂಕಟರಾಮ್

ರಚನೆ : ಶ್ರೀಮತಿ ಎಸ್. ಮಾಲತಿ

ಕಾರ್ಯಕ್ರಮ ನಿರ್ವಹಣೆ : ಶ್ರೀಮತಿ ಬಿ. ಕೆ. ಸುಮತಿ

ತಮಗೆ ಆದರದ ಸ್ವಾಗತ

ಆರ್. ಎಸ್. ರಾಜಾರಾಮ್ ವ್ಯವಸ್ಥಾಪಕ ನಿರ್ದೇಶಕ, ನವಕರ್ನಾಟಕ ಪ್ರಕಾಶನ




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001

✆ 30578022, 22203580. ಫ್ಯಾಕ್ಸ್ : 30578023. e-mail : navakarnataka@gmail.com

URL : www.navakarnataka.com blog : http://navakarnataka.blogspot.com

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna
© All rights reserved. Reproduction in whole or in part without permission is prohibited.

**HOSATHU** Kannada Monthly / AUGUST 2011 / Rs. 12
RNI Regd. KARKAN / 1999 / 614. Karnataka Regd. KRNA/BGE/7/2009-11
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)


# ಯೌವ್ವನಭರಿತ ತ್ವಚೆಗಾಗಿ ಕೋಮಲ ಮೊಯಿಶ್ಚರೈಸಿಂಗ್.




ಅತ್ಯಂತ ಪಾರದರ್ಶಕ ಹೊಸ ಸಂತೂರ್ ಗ್ಲಿಸರಿನ್‌ನ್ನು ಆವಿಷ್ಕರಿಸಿನೋಡಿ. ಇದು ಗ್ಲಿಸರಿನ್‌ನ ಸೌಮ್ಯ ಮೊಯಿಶ್ಚರೈಸಿಂಗ್ ಮತ್ತು ವಿಟಮಿನ್ ಇ-ಯ ಹೆಚ್ಚುವರಿ ಪೋಷಣೆಯ ಆರೈಕೆ ಹೊಂದಿದೆ. ಸಂಪೂರ್ಣ ಹೊಸ ಅನುಭೂತಿಯೊಂದನ್ನು ಆವಿಷ್ಕರಿಸಿ. ಇಂದೇ.






DRAFTFCB + ULKA 050008

ಸಂತೂರ್